# ಪೈಗಂಬರ ಮುಹಮ್ಮದನು

ಲೇಖಕರು

**ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ.**

ಮೈಸೂರು ಸರಕಾರದ ಕನ್ನಡ ಟ್ರಾನ್ಸ್ಲೇಟರು

ಸತ್ಯಶೋಧನಾ ಪುಸ್ತಕ ಭಂಡಾರ

ಬೆಂಗಳೂರು ನಗರ

ಬೆಂಗಳೂರು ಸಿಟಿ

ಬೆಂಗಳೂರು ಪ್ರೆಸ್, ಮೈಸೂರು ರೋಡ್

೧೯೩೦

[ಬೆಲೆ ೧ ರೂಪಾಯಿ]

# ಪ್ರಸ್ತಾವನೆ

ಹಿಂದುಗಳೂ ಮುಹಮ್ಮದೀಯರೂ ಬಹು ಕಾಲದಿಂದ ಇಂಡಿಯಾ ದೇಶದಲ್ಲಿ ಒಟ್ಟಿಗಿದ್ದರೂ ಅವರಲ್ಲಿ ಐಕಮತ್ಯವು ಅಷ್ಟಾಗಿ ನೆಲೆಗೊಳ್ಳದಿರುವುದು ಶೋಚನೀಯವಾದ ವಿಷಯ. ಆದರೂ, ಅನ್ಯೋನ್ಯವಾಗಿ ಕೇವಲ ಮೈತ್ರೀ ಭಾವದಿಂದ ವರ್ತಿಸುತ್ತಿರುವವರನೇಕರು ಈ ಎರಡು ಪಂಗಡದವರಲ್ಲಿಯೂ ಇಲ್ಲದೆ ಇಲ್ಲ. ಉಳಿದವರಲ್ಲಿ ಅನೇಕರ ಹೃದಯಗಳು ವೀಣಾ ನಾದದಂತೆ ಶ್ರುತಿಗೊಂಡು ಸ್ನೇಹದ ಮಧುರ ತಾನಕ್ಕೆ ಇನ್ನೂ ಸಿದ್ಧವಾಗಿಲ್ಲ. ಮುಹಮ್ಮದೀಯರ ಮತ ಧರ್ಮಗಳ ಸಾರವನ್ನು ಹಿಂದುಗಳೂ, ಸನಾತನ ಧರ್ಮದ ಸಾರವನ್ನು ಮುಹಮ್ಮದೀಯರೂ ಅರಿತುಕೊಳ್ಳದಿರುವುದೇ ಇದಕ್ಕೆ ಮುಖ್ಯ ಕಾರಣವೆನ್ನಬಹುದು. ಈ ನ್ಯೂನತೆಯನ್ನು ಪರಿಹರಿಸಿ, ಹಿಂದುಗಳೂ ಮುಹಮ್ಮದೀಯರೂ ಸೌಹಾರ್ದ ಭಾವದಿಂದಿರುವುದಕ್ಕೆ ಸಾಧಕವಾಗುವಂತೆ ಮಾಡಬೇಕಾದುದು ದೇಶ ವಾತ್ಸಲ್ಯವಿರುವವರೆಲ್ಲರ ಅವಶ್ಯ ಕರ್ತವ್ಯವಾಗಿದೆ. ಈ ಗ್ರಂಥವು ಈ ಭಾಗದಲ್ಲಿ, "ಅಳಿಲ ಸೇವೆ, ಮಳಲು ಭಕ್ತಿ" ಎಂಬಂತೆ ನಾನು ಮಾಡಿರುವ ಅಲ್ಪ ಪ್ರಯತ್ನವಾಗಿರುವುದು. ಪೈಗಂಬರ ಮುಹಮ್ಮದನು ಮತ ಸ್ಥಾಪಕರಾದ ಮಹಾ ಪುರುಷರಲ್ಲೊಬ್ಬನು. ಆ ಮಹನೀಯನಲ್ಲಿ ಪೂಜ್ಯ ಭಾವನೆಯನ್ನಿಟ್ಟು ಯಥಾಮತಿಯಾಗಿ ನಾನು ಈ ಗ್ರಂಥವನ್ನು ರಚಿಸಿರುವೆನು. ಕನ್ನಡಿಗರೆಲ್ಲರೂ ಇದನ್ನು ಆದರದಿಂದ ಓದಿ ದೇಶೋದ್ಧಾರಕ್ಕೆ ಸಹಾಯಕರಾಗಲಿ ಎಂಬುದೇ ನನ್ನ ಪ್ರಾರ್ಥನೆ. ಈ ಪ್ರಯತ್ನದಲ್ಲಿ ನನಗೆ ವಿಶೇಷ ಪ್ರೋತ್ಸಾಹವನ್ನಿತ್ತು ಅಮೂಲ್ಯವಾದ ಸಲಹೆಗಳನ್ನು ಕೊಟ್ಟುದಕ್ಕಾಗಿಯೂ, ಗ್ರಂಥವನ್ನು ಆಮೂಲಾಗ್ರವಾಗಿ ಓದಿ ಪರಿಶೋಧಿಸಿದುದಕ್ಕಾಗಿಯೂ, ಮುದ್ರಣ ಕಾರ್ಯದಲ್ಲಿ ವಿಶೇಷ ಸಹಾಯಮಾಡಿದುದಕ್ಕಾಗಿಯೂ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. ಅವರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ.

ನಾನು ಅನೇಕ ಗ್ರಂಥಗಳನ್ನು ಓದಿ ನೋಡಿ, ಅವುಗಳ ಸಾರಾಂಶ ವನ್ನೆಲ್ಲ ಗ್ರಹಿಸಿ ಸಂಕ್ಷೇಪವಾಗಿ ಈ ಗ್ರಂಥವನ್ನು ರಚಿಸಿರುವೆನು. ವಾಚಕರು ಇದರಲ್ಲಿರುವ ನ್ಯೂನಾತಿರೇಕಗಳನ್ನು ತೋರಿಸಿಕೊಟ್ಟಲ್ಲಿ ಅವರ ಸಲಹೆಗಳನ್ನು ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸಿ ಮುಂದಣ ಮುದ್ರಣದಲ್ಲಿ ಸರಿಪಡಿಸುವೆನು. ಈ ಸಣ್ಣ ಪುಸ್ತಕದಿಂದ ನಮ್ಮ ದೇಶ ಬಾಂಧವರಾದ ಮಹಮ್ಮದೀಯರಿಗೂ ಹಿಂದೂಗಳಿಗೂ ಪರಸ್ಪರ ಪ್ರೀತಿ ವಿಶ್ವಾಸಗಳು ಅಭಿವೃದ್ಧಿಯಾಗಲು ಸ್ವಲ್ಪ ಮಟ್ಟಿಗಾದರೂ ಸಹಾಯ ವಾದಲ್ಲಿ ನನ್ನ ಶ್ರಮವು ಸಾರ್ಥಕವಾಯಿತೆಂದೂ ನಾನು ಕೃತಾರ್ಥ ನಾದೆನೆಂದೂ ಭಾವಿಸುವೆನು. ಗ್ರಂಥವನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟುದಕ್ಕಾಗಿ ಬೆಂಗಳೂರು ಪ್ರೆಸ್ಸಿನವರಿಗೆ ಕೃತಜ್ಞನಾ ಗಿರುವೆನು.

ಬೆಂಗಳೂರು
ಪ್ರಮೋದೂತ ಸಂವತ್ಸರದ
ವೈಶಾಖ ಶುದ್ಧ ೫

ಇತಿ
ಕನ್ನಡಿಗರ ಪಾದ ಸೇವಕ
**ಸಿ. ಕೆ. ವೆಂಕಟರಾಮಯ್ಯ**

---

# ಪೈಗಂಬರ ಮಹಮ್ಮದನು

## ಮೊದಲನೆಯ ಅಧ್ಯಾಯ

## **ಮಹಮ್ಮದನ ಬಾಲ್ಯ**

ಚರಾಚರಾತ್ಮಕವಾದ ಈ ಪ್ರಪಂಚದ ಸೃಷ್ಟಿ ಸ್ಥಿತಿ ಲಯ ಕರ್ತನಾದ ಭಗವಂತನೊಬ್ಬನಿರುವನೆಂಬುದು ಆಸ್ತಿಕರೆಲ್ಲರ ಅಚಲವಾದ ನಂಬಿಕೆ. ಭಗವಂತನು ಧರ್ಮಮೂರ್ತಿ. ಶ್ರೀ ಕೃಷ್ಣ ಪರಮಾತ್ಮನು ಗೀತೆಯಲ್ಲಿ ಹೇಳಿರುವಂತೆ, "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥" ಎಂಬುದೇ ಆತನು ತಳೆದಿರುವ ಧರ್ಮದೀಕ್ಷೆ. ಧರ್ಮಕ್ಕೆ ನಾಶವುಂಟಾಗಿ ಅಧರ್ಮವು ಪ್ರಬಲವಾದಾಗಲೆಲ್ಲ, ತಾನು ಅವತರಿಸುವುದಾಗಿ ಭಗವಂತನು ಮನುಷ್ಯತ್ವಕ್ಕೇ ವಾಗ್ದಾನ ಮಾಡಿದ್ದಾನೆ. ತದನುಗುಣವಾಗಿ ಯಾವ ಕಾಲದಲ್ಲಿ, ಯಾವ ದೇಶದಲ್ಲಿ, ಅಜ್ಞಾನಾಂಧಕಾರವುಂಟಾಗಿ ಪಾಪಾಚರಣೆಯು ಪ್ರಬಲವಾದರೂ, ದೇವಾಂಶ ಸಂಭೂತರಾದ ಮಹಾಪುರುಷರು ಆಯಾ ದೇಶ ಕಾಲಾನುಗುಣ್ಯವಾಗಿ ಅವತರಿಸಿ ಧರ್ಮಸಂಸ್ಥಾಪನೆ ಮಾಡುವರು: ಭಗವಂತನು ತಾನೇ ಅವತರಿಸಿ ಧರ್ಮವನ್ನು ಉದ್ಧರಿಸುವನು; ಅಥವಾ, ತನ್ನ ಕಡೆಯವರು ಅವತರಿಸುವಂತೆ ಮಾಡಿ ಅವರಿಂದ ಧರ್ಮಸಂಸ್ಥಾಪನೆ ಮಾಡಿಸುವನು. ಹೀಗೆ ಅವತರಿಸುವ ಮಹಾಪುರುಷರು ದೇವಾಯತ್ತವಾಗಿ ತಮ್ಮಲ್ಲಿ ನೆಲಸಿರುವ ಜ್ಞಾನ ಪ್ರತಿಭೆಗಳ ಸಹಾಯದಿಂದಲೂ ತಾವು ನಡೆಯಿಸುವ ಧರ್ಮಬೋಧನೆಯಿಂದಲೂ ತಮ್ಮ ಪವಿತ್ರ ಜೀವನದ ಪ್ರತ್ಯಕ್ಷ ನಿದರ್ಶನದಿಂದಲೂ ತಮ್ಮ ಜನ್ಮ ಭೂಮಿಯನ್ನುದ್ಧರಿಸಿ, ಪ್ರಪಂಚಕ್ಕೇ ಆದರ್ಶಪ್ರಾಯರಾಗಿ ಪರಿಣಮಿಸುವರು. ಮಹಮ್ಮದನೂ ಇಂತಹ ಮಹನೀಯರಲ್ಲೊಬ್ಬನು.

ಆತನ ಜೀವನ ಚರಿತ್ರೆಯನ್ನೂ ಆತನು ಬೋಧಿಸಿದ ತತ್ತ್ವಗಳನ್ನೂ ಸಂಕ್ಷೇಪವಾಗಿ ತಿಳಿದುಕೊಳ್ಳುವುದು ಮನುಷ್ಯತ್ವದ ಮಂಗಳಾಕಾಂಕ್ಷಿಗಳಾದವರ ಅವಶ್ಯ ಕರ್ತವ್ಯವಾಗಿದೆ. ಏಕೆಂದರೆ, ಮನುಷ್ಯರೆಲ್ಲರೂ ಒಬ್ಬ ಭಗವಂತನಿಂದಲೇ ಸೃಷ್ಟಿಪಡೆದವರು. ಆದಕಾರಣ, ಭಗವಂತನು ಕಳುಹಿಸಿದ ಮತ ಸ್ಥಾಪಕರು ಯಾರೇ ಆಗಲಿ ಉದಾತ್ತ ತತ್ತ್ವಗಳನ್ನು ಬೋಧಿಸಿದಲ್ಲಿ, ಅವು ಸರ್ವಾದರಣೀಯವಾಗಿ ಪರಿಣಮಿಸಿ ಅನುಷ್ಠಾನಕ್ಕೆ ಬರಬೇಕಾದುದು ಯುಕ್ತವಾಗಿಯೇ ಇದೆ.

ಮತ ಸ್ಥಾಪಕರೆಂದರೆ ಸಾಮಾನ್ಯ ವ್ಯಕ್ತಿಗಳಲ್ಲ: ಮನುಷ್ಯರು ಪ್ರಗತಿ ಮಾರ್ಗವನ್ನು ಬಿಟ್ಟು ತಮ್ಮ ಮನಸ್ಸಿಗೆ ತೋರಿದಂತೆ ಪ್ರವರ್ತಿಸಲಾರಂಭಿಸಿದಾಗ—ಮನುಷ್ಯರು ಭೋಗವೇ ಜೀವನದ ಸರ್ವಸ್ವವೆಂದು ನಂಬಿ ಕಲ್ಯಾಣಮಯನಾದ ಭಗವಂತನನ್ನು ಮರೆತು ಉಚ್ಛೃಂಖಲ ವೃತ್ತಿಗುಪಕ್ರಮಿಸಿದಾಗ—ಅವರನ್ನು ತಿದ್ದಿ ಸನ್ಮಾರ್ಗಕ್ಕೆ ತಂದ ಭಕ್ತಾಗ್ರಣಿಗಳೇ ಮತ ಸ್ಥಾಪಕರೆನಿಸಿಕೊಳ್ಳುವರು. ಆದುದರಿಂದ, ಜಗತ್ಕಲ್ಯಾಣ ಸಾಧಕವಾದ ಉದಾತ್ತ ತತ್ತ್ವಗಳು ಯಾವುದೊಂದು ಮತದಲ್ಲಿಯೇ ಇದ್ದರೂ, ಅವು ಒಟ್ಟು ಮನುಷ್ಯತ್ವಕ್ಕೇ ಬೋಧಿಸಲ್ಪಟ್ಟವುಗಳೆಂದು ಭಾವಿಸುವುದೇ ವಿವೇಕಿಗಳ ಲಕ್ಷಣ.

**ಅರಬ್ಬೀ ದೇಶದ ಸ್ಥಿತಿ**

ಮಹಮ್ಮದನು ಜನಿಸಿದುದು ಅರಬ್ಬೀ ದೇಶದಲ್ಲಿರುವ ಮಕ್ಕಾ ನಗರದಲ್ಲಿ. ಅವನು ಅವತರಿಸಿದಾಗ ಅರಬ್ಬೀ ದೇಶವು ಈಗಿನಂತಿರಲಿಲ್ಲ: ದೇಶವೆಲ್ಲ ಅಜ್ಞಾನಾಂಧಕಾರದಲ್ಲಿ ಮುಳುಗಿದ್ದಿತೆಂದರೂ ಅತಿಶಯೋಕ್ತಿಯಾಗಲಾರದು, ಅದು ಅಷ್ಟು ಮಟ್ಟಿಗೆ ಹೀನ ಸ್ಥಿತಿಗೆ ಬಂದಿದ್ದಿತು. ಅಲ್ಲಲ್ಲಿ ಕೆಲವು ಮಂದಿ ಧರ್ಮಾತ್ಮರೂ ಇದ್ದರು. ಆದರೂ, ಒಟ್ಟಿನಲ್ಲಿ ನೋಡಿದರೆ ಅಧರ್ಮವೂ ಅಸತ್ಯವೂ ದುರಹಂಕಾರವೂ ಮದ್ಯಪಾನವೇ ಮುಂತಾದ ದುರ್ಗುಣಗಳೂ ಎಲ್ಲೆಲ್ಲಿಯೂ ತಾಂಡವವಾಡುತ್ತ, ಕಾಡುಕಿಚ್ಚಿನಂತೆ ವ್ಯಾಪಿಸಿ ದೇಶವನ್ನೆಲ್ಲ ದಹಿಸುತ್ತಿದ್ದುವು. ಜನರಲ್ಲಿ ಎಲ್ಲಿ ನೋಡಿದರೂ ದ್ವೇಷ ವೈಷಮ್ಯಗಳೇ; ಎಲ್ಲಿ ನೋಡಿದರೂ ಕಕ್ಷಿ ಪ್ರತಿಕಕ್ಷಿ ವಿಭಾಗಗಳೇ; ಎಲ್ಲಿ ನೋಡಿದರೂ ಅಂತಃಕಲಹಗಳೇ; ರಕ್ತ ಪಾತವಂತೂ ತಪ್ಪಿದ ದಿನವೇ

ಇಲ್ಲ. ಜನರು ತಮ್ಮ ಕರ್ತವ್ಯವನ್ನೇ ಮರೆತು ಪಂಗಡಗಳನ್ನು ಕಟ್ಟಿ ಕೊಂಡು ದೊಂಬಿ ಮಾಡಲು ಪಕ್ರಮಿಸಿದರು. ಪ್ರಬಲವಾಗಿದ್ದ ಕೆಲವು ಮನೆತನಗಳವರಲ್ಲಿ ಪರಸ್ಪರ ದ್ವೇಷ ಭಾವವು ಹೊತ್ತಿ ಉರಿಯುತ್ತಿದ್ದಿತು; ಅವರು ತಮ್ಮ ತಮ್ಮ ಅನುಯಾಯಿಗಳೊಡಗೂಡಿ ಪರಸ್ಪರವಾಗಿ ಹೊಡೆದಾಡುತ್ತಿದ್ದರು.

ಅರಬ್ಬೀ ದೇಶಸ್ಥರೆಲ್ಲರೂ ವಿಗ್ರಹಾರಾಧಕರಾಗಿದ್ದರು. ಆದರೆ, ಭಾರತೀಯರಲ್ಲಿ ಆಚರಣೆಯಲ್ಲಿರುವಂತೆ, ವಿಗ್ರಹವು ಜಗತ್ಕರ್ತಾರನಾದ ಭಗವಂತನನ್ನು ನೆನಪಿಗೆ ತರುವ ಲಾಂಛನವೆಂಬ ಭಾವನೆಯಿಂದ ಅವರು ವಿಗ್ರಹಗಳನ್ನು ಪೂಜಿಸುತ್ತಿರಲಿಲ್ಲ; ಕಲ್ಲು ಮಣ್ಣಿನ ಬೊಂಬೆಗಳೇ ದೇವರೆಂಬ ಭಾವನೆಯಿಂದ ಅವರು ವಿಗ್ರಹಾರಾಧನೆ ಮಾಡುತ್ತಿದ್ದರು. ಅಂತು, ಈಗ್ಗೆ ಸುಮಾರು ಹದಿನಾಲ್ಕು ಶತಮಾನಗಳಿಗೆ ಹಿಂದೆ ಅರಬ್ಬೀ ದೇಶವು ಅವನತಿಯ ಚರಮ ಸೀಮೆಯನ್ನು ಮುಟ್ಟಿದ್ದಿತು. ಈ ತೆರದ ಅಧೋಗತಿಯಿಂದ ಅದನ್ನು ಉದ್ಧರಿಸಿದ ಪುಣ್ಯಾತ್ಮನೇ **ಮಹಮ್ಮದನು. ಇಸ್ಲಾಂ** ಮತವನ್ನು ಚಿರಸ್ಥಾಯಿಯಾಗಿ ಸ್ಥಾಪಿಸಿ, ನೀತಿ ಬಾಹಿರರಾಗಿದ್ದವರಿಗೆ ಧರ್ಮಬೋಧೆ ಮಾಡಿ ಉದ್ಧಾರ ಮಾಡಿದ ಮಹಾತ್ಮನೇ ಮಹಮ್ಮದನು. ಜಗತ್ತಿನಲ್ಲಿ ಶ್ರೇಷ್ಠವೆನಿಸಿರುವ ಮತಗಳಲ್ಲೊಂದಾದ ಮತವನ್ನು ಸ್ಥಾಪಿಸಿ ಜ್ಞಾನಜ್ಯೋತಿಯನ್ನು ಎತ್ತಿ ಹಿಡಿದ ಮಹಾಪುರುಷನೇ ಮಹಮ್ಮದನು.

ಭಗವದಂಶ ಸಂಭೂತರಾದ ಮಹಾ ಪುರುಷರು ಅವತರಿಸುವುದು ಧರ್ಮಾತ್ಮರ ಮನೆಯಲ್ಲಿಯೇ. ಮಕ್ಕಾ ನಗರದಲ್ಲಿ ಅಬ್ದುಲ್ಲಾ ಎಂಬ ಪುಣ್ಯಾತ್ಮನೊಬ್ಬನಿದ್ದನು. ಪತಿ ಪರಾಯಣೆಯಾದ ಆಮಿನಾ ಎಂಬಾಕೆಯು ಆತನ ಧರ್ಮಪತ್ನಿ. ಭಾಗ್ಯಶಾಲಿಗಳಾದ ಈ ದಂಪತಿಗಳೇ ಮಹಮ್ಮದನ ತಂದೆ ತಾಯಿಗಳು. ಮಹಮ್ಮದನು ಅವತರಿಸಿದ ಮನೆತನದಲ್ಲಿ ಪರೋಪಕಾರವು ವಂಶಾನುಗತವಾಗಿ ಬಂದಿದ್ದ ಅಮೋಘ ಗುಣ. ಮಹಮ್ಮದನ ಪಿತಾಮಹನ ಔದಾರ್ಯದ ಫಲವಾಗಿ, ಆ ಮನೆತನಕ್ಕೆ ಬಡತನವು ಬಂದೊದಗಿತು. ಆದರೇನು? ಇಂತಹ ಬಡತನವೂ ಶ್ಲಾಘ್ಯವಾದುದೇ

ಮಹಮ್ಮದನ ಜನನ

ಅಹುದು. ಆಸಮುದ್ರ ಪರ್ಯಂತವಾಗಿ ದಾನ ಮಾಡಿ, ಅದರ ಫಲವಾಗಿ ಬಡತನವನ್ನನುಭವಿಸಿದ ದರಿದ್ರ ಚಾರುದತ್ತನನ್ನು ಕೊಂಡಾಡದವರಾರು? ಯಜ್ಞ ಕಾಲದಲ್ಲಿ ಸಮಸ್ತ ಧನ ಕನಕ ವಸ್ತು ವಾಹನಾದಿಗಳನ್ನೂ ದಾನ ಮಾಡಿ, ಸುವರ್ಣಾಭಾವದಿಂದ ಮೃತ್ಪಾತ್ರೆಗಳನ್ನು ಬಳಸುತ್ತಿದ್ದ ರಘು ಚಕ್ರವರ್ತಿಯನ್ನು ಸ್ಮರಿಸಿದ ದಿನವೇ ಸುದಿನವೆಂದು ಭಾವಿಸದೆ ಇರು ವವರಾರು? ಪ್ರಕೃತದಲ್ಲಿ, ವಂಶಾನುಗತವಾಗಿ ಬಂದ ಔದಾರ್ಯದ ದೆಸೆಯಿಂದ ಕ್ರಮ ಕ್ರಮವಾಗಿ ಸಿರಿಯು ಮರೆಯಾಗಿ, ಅಬ್ದುಲ್ಲಾನ ಕಾಲಕ್ಕೆ ಬಡತನವು ಬಂದೊದಗಿತು. ಗೀತಾಚಾರ್ಯರು ಹೇಳಿರುವಂತೆ, ಯಾರನ್ನು ಪರಮಾತ್ಮನು ಅನುಗ್ರಹಿಸಲಿಚ್ಛಿಸುವನೋ ಅವರ ದ್ರವ್ಯ ವನ್ನು ಮೊದಲು ನಾಶ ಮಾಡಿ ಅವರ ಧರ್ಮಶ್ರದ್ಧೆಯನ್ನು ಒರೆಹಿಡಿದು ನೋಡುವನು. ಭಗವಂತನು ತನ್ನ ಅಂಶದ ಮತ ಪುರುಷನಾದ ಮಹಮ್ಮದನೆಂಬ ಮುಕ್ತಾಫಲವನ್ನು ಕರುಣಿಸುವುದಕ್ಕೆ ಮೊದಲು ಅಬ್ದುಲ್ಲಾನ ಮನೆತನದವರ ಧರ್ಮಾಭಿಮಾನವನ್ನೂ ಪರೋಪಕಾರ ಬುದ್ಧಿಯನ್ನೂ ಪರೀಕ್ಷಿಸಿ ನೋಡಿದನೆಂದು ಹೇಳಿದರೆ ತಪ್ಪಾದೀತೆ? ಅಂತು, ಆರ್ತರ ಸಹಾಯಕ್ಕೋಸುಗ, ಸಿರಿಯು ಸೂರೆಯಾದ ಮನೆತನ ದಲ್ಲಿ ಹುಟ್ಟಿಯೂ, ಅಬ್ದುಲ್ಲಾನು ಖಿನ್ನ ಮನಸ್ಕನಾಗದೆ ಸನ್ಮಾರ್ಗವೇ ಶರಣೆಂದು ನಂಬಿದ್ದನು. ಆಮಿನಾ ಬೀಬಿಯೂ ಆತನಿಗೆ ತಕ್ಕ ಮಡದಿ ಯಾಗಿದ್ದಳು. ಆಕೆಯ ಗರ್ಭ ಸುಧಾಂಬುಧಿಯಲ್ಲಿ ಮಹಮ್ಮದನೆಂಬ ಪುತ್ರ ರತ್ನವು ಕ್ರಿಸ್ತ ಶಕ ೫೭೦ನೆಯ ಸಂವತ್ಸರದ ಆಗಸ್ಟ್ ತಿಂಗಳು ೨೯ನೆಯ ತಾರೀಖಿನ ದಿನ ಜನನ ಹೊಂದಿ ಸ್ವಗೃಹವನ್ನೂ ಸ್ವದೇಶವನ್ನೂ ಬೆಳಗಿತು. ಆದರೆ ಪುತ್ರೋತ್ಸವದ ಆನಂದವನ್ನು ಅನುಭವಿಸುವ ಸುಯೋಗವನ್ನು ಅಬ್ದುಲ್ಲಾನು ಕೇಳಿಕೊಂಡು ಬಂದಿರಲಿಲ್ಲ. ಮಹಮ್ಮದನ ಜನನಕ್ಕೆ ಮುಂಚೆಯೇ ಆತನು ಪರಲೋಕ ಯಾತ್ರೆ ಮಾಡಿದ್ದನು. ಮಗನ ವೈಭವವನ್ನು ತಂದೆಯ ಅಂತರಾತ್ಮವು ಪರಲೋಕದಿಂದಲೇ ಮತ್ತಷ್ಟು ಚೆನ್ನಾಗಿ ಪರಿಶೀಲಿಸಿ ಆನಂದಿಸುವಂತೆ ಭಗವಂತನು ಅನುಗ್ರಹಿಸಿರ ಬಹುದೆ? ಅದು ದೂರದ ಆಸೆ, ಅರಿಯದ ಮಾತು; ಅದರ ಹಂಬಲು ನಮಗೇಕೆ? ಮಹಮ್ಮದನು ಹುಟ್ಟಿದಾಗ ಮಹಾ ಪುರುಷನ ಆಗಮನ

ವನ್ನು ಸೂಚಿಸುವ ಅದ್ಭುತವಾದ ಪ್ರಾಕೃತಿಕ ವೈಚಿತ್ರ್ಯ ವ್ಯಾಪಾರಗಳು ತಲೆದೋರಿದುವಂತೆ. ವಿಜ್ಞಾನ ಶರಣರಾದ ನವ ನಾಗರಿಕರಲ್ಲಿ ಕೆಲವರು ಇದನ್ನು ಒಪ್ಪದೆ ಇರಬಹುದು. ಆದರೂ, "ವಿಜ್ಞಾನಾತೀತವಾದ ವಸ್ತುವೇ ಇಲ್ಲವೆ?" ಎಂಬ ಪ್ರಶ್ನೆಯೇನೋ ನಮ್ಮ ಮನಸ್ಸಿನಿಂದ ಮರೆಯಾಗಲೊಲ್ಲದು.

ಮುಹಮ್ಮದನು ಜನಿಸುವ ಮೊದಲೇ ಅವನ ತಂದೆಯು ಮೃತನಾದನೆಂದು ಹೇಳಿದೆವಷ್ಟೆ. ಆಗ ಆತನಿಗೆ ಇನ್ನೂ ಇಪ್ಪತ್ತೈದು ವರುಷ ವಯಸ್ಸು. "ಸುಕೃತೀ ಗತಾಯುಃ" ಎಂಬುದು ಬಾಲ್ಯ ಅನೇಕ ಸಂದರ್ಭಗಳಲ್ಲಿ ನಿಜವಾಗುವುದು. ಆಮಿನಾ ಬೀಬಿಗೆ ಎಷ್ಟು ಚಿಕ್ಕ ವಯಸ್ಸಿನಲ್ಲಿ ಎಂತಹ ವಿಪತ್ತು ಒದಗಿತು! ಪಾಪ! ಪತಿಯ ಮರಣ ಕಾಲದಲ್ಲಿ ಆತನ ಬಳಿಯಲ್ಲಿರುವ ಭಾಗ್ಯವೂ ಆಕೆಗೆ ಲಭಿಸಲಿಲ್ಲ: ಯಾತ್ರಿಬ್ ನಗರಕ್ಕೆ ಪ್ರಯಾಣಮಾಡುತ್ತಿದ್ದು, ದಾರಿಯಲ್ಲಿ ಆತನು ಮೃತನಾದನು; ಗರ್ಭಿಣಿಯಾದ ಆಮಿನಾ ಬೀಬಿಯು ಆಗ ಊರಿನಲ್ಲಿದ್ದಳು. ವಿಧಿ ವಿಲಾಸಕ್ಕೆ ಎದುರು ನಿಲ್ಲುವವರಾರು?

ಪತಿ ಪರಾಯಣೆಯಾಗಿದ್ದ ಆ ಸಾಧ್ವೀ ಮಣಿಯು ವಿಧವೆಯಾದ ಬಳಿಕ ಹೆಚ್ಚು ಕಾಲ ಜೀವಿಸಿರಲಿಲ್ಲ. ತಂದೆಯನ್ನು ಕಂಡರಿಯದ ಹಸುಗೂಸಾದ ಮುಹಮ್ಮದನಿಗೆ ಆರು ವರುಷಗಳು ತುಂಬುವ ವೇಳೆಗೆ ಮಾತೃ ವಿಯೋಗವೂ ಪ್ರಾಪ್ತವಾಯಿತು. ಮರಣವೆಂದರೇನೆಂಬುದೇ ಮನಸ್ಸಿಗೆ ಬೋಧೆಯಾಗಲೊಲ್ಲದ ಚಿಕ್ಕ ವಯಸ್ಸಿನಲ್ಲಿ ಆ ಹಸುಳೆಗೆ ತಾಯಿ ತಂದೆಗಳಿಬ್ಬರ ವಿಯೋಗವೂ ಸಂಭವಿಸಿತು. ತಬ್ಬಲಿಯಾದ ಈ ಮಗುವನ್ನು ಅದರ ತಾತನು ಅಕ್ಕರೆಯಿಂದ ಪೋಷಿಸುತ್ತಿದ್ದನು. ಚಂದ್ರಹಾಸನಿಗೆ ಧಾತ್ರಿಯು ಹೇಗೋ ಹಾಗೆಯೇ ಮುಹಮ್ಮದನಿಗೆ ಅವನ ತಾತನೂ ಏಕಮಾತ್ರಾವಲಂಬನವಾದನು. ವಿಧಿಯು ಅದನ್ನೂ ನೋಡಿ ಸೈರಿಸಲಿಲ್ಲ: ಒಂಬತ್ತು ವರುಷಗಳು ತುಂಬುವ ವೇಳೆಗೆ ಮುಹಮ್ಮದನು ತಾತನನ್ನೂ ಕಳೆದುಕೊಂಡನು. ವಿಯೋಗದ ಮೇಲೆ ವಿಯೋಗವು ಒದಗಿತು. ತಾತನು ಮೃತ್ಯು ಶಯ್ಯೆಯಲ್ಲಿ ಮಲಗಿರುವಾಗ

ತನ್ನ ಮಗ ಅಬೂತಾಲಿಬ್ ಎಂಬಾತನಿಗೆ ಮೊಮ್ಮಗನನ್ನು ಒಪ್ಪಿಸಿ ತಾನು ಕಣ್ಣುಮುಚ್ಚಿಕೊಂಡನು. ಅಂದಿನಿಂದ ಮಹಮ್ಮದನು ತನ್ನ ಚಿಕ್ಕಪ್ಪನ ಪೋಷ್ಯವರ್ಗಕ್ಕೆ ಸೇರಿದನು. ಆದರೇನು? ತನ್ನನ್ನು ಅಕ್ಕರೆಯಿಂದ ಸಲಹುತ್ತ ತಾಯಿ ತಂದೆಗಳಿಬ್ಬರ ಸ್ಥಾನವನ್ನೂ ವಹಿಸಿದ್ದ ತಾತನು ಮೃತನಾದುದರಿಂದ ಮಹಮ್ಮದನು ಶೋಕಸಂತಪ್ತನಾಗಿ ಕಳೆಗುಂದಿದನು; ಚಿಕ್ಕಪ್ಪನ ಮನೆಯಲ್ಲಿ ಓಡಾಡುತ್ತಿದ್ದರೂ ಅವನ ಮನಸ್ಸು ಮಾತ್ರ ಯಾವುದೋ ಒಂದು ಸ್ವಪ್ನ ಪ್ರಪಂಚದಲ್ಲಿ ತೇಲಾಡುತ್ತಿದ್ದಿತು. ಮುಂದಿನ ಮಹತ್ತ್ವವನ್ನು ಸೂಚಿಸಲು ಅವನ ಮನಸ್ಸು, ಲಂಗರು ಹರಿದ ಹಡಗಿನಂತೆ, ಬಂಧವಿಮೋಚನೆಯನ್ನು ಪಡೆಯಿತು. ಮಹಮ್ಮದನು ಮನೆಯಲ್ಲಿ ಹಿಂಡು ಬಳಗದೊಡಗೂಡಿದ್ದೂ ಏಕಾಕಿಯಾಗಿದ್ದನು; ಹಾಲು ಹಸುಳೆಯಾಗಿದ್ದೂ ತನ್ನ ಕೈಗೆ ಸಿಕ್ಕದ ಯಾವುದೋ ಪ್ರಪಂಚದ ಫಲಗಳಿಗೆ ಕೈನೀಡುತ್ತಿದ್ದನು. ಅವನ ದುರ್ದಶೆಯನ್ನು ಕಂಡು ಮನ ಮರುಗದವರಾರು? ಆಲೋಚನಾಮಗ್ನನಾಗಿ ಕಾಲವನ್ನು ಕಳೆಯುತ್ತಿದ್ದ ಅವನ ಪುಟ್ಟ ತಲೆಯನ್ನು ಸ್ಪರ್ಶಿಸಿ ಆನಂದಪಡದವರಾರು? ಧೀರುವಲ್ಲದಿದ್ದರೂ ಮೃದು ಸ್ವಭಾವದವನಾಗಿದ್ದ ಅವನ ಮುಖವನ್ನು ಕಂಡು ಹಿಗ್ಗದವರಾರು? ಅವನ ಬಂಧುವರ್ಗದವರೆಲ್ಲರೂ ಅವನನ್ನು ಆದರಿಸುತ್ತಿದ್ದರು. ಅಬೂತಾಲಿಬ್ಬನಿಗಂತು ಮಹಮ್ಮದನೇ ಪ್ರೇಮ ಪುತ್ಥಳಿ, ಅವನ ಪಂಚ ಪ್ರಾಣ; ಹೆಚ್ಚೇಕೆ? ಹುಡುಗನ ಮನಸ್ಸಿಗೆ ತಾತನು ಸತ್ತ ದುಃಖವು ಅಂಟದಂತೆ ಮಾಡುವ ಭಾಗದಲ್ಲಿ ಅವನ ಚಿಕ್ಕಪ್ಪನು ಲೇಶಮಾತ್ರವೂ ಲೋಪ ಮಾಡಲಿಲ್ಲ. ಆದರೂ ಹಿರಿಯರ ಕಾಲದಲ್ಲಿ ಸಿರಿವಂತರಾಗಿದ್ದ ಆ ಮನೆತನದವರಿಗೆ ಬಡತನದ ಬಾಧೆ; ಆದಕಾರಣ ಮಹಮ್ಮದನು ನಿರಾತಂಕವಾಗಿ ಬಾಲಯೋಗ್ಯವಾದ ಆಟಪಾಟಗಳಲ್ಲಿ ಮಗ್ನನಾಗಿ ಕಾಲವನ್ನು ಕಳೆಯುವ ಹಾಗಿರಲಿಲ್ಲ; ಆ ಎಳೆಯ ವಯಸ್ಸಿನಲ್ಲಿಯೂ ಅವನು ಕೆಲಸ ಮಾಡಿದಲ್ಲದೆ ಕಡೆ ಹಾಯುವಂತಿರಲಿಲ್ಲ: ಚಿಗುರಿನಂತಿದ್ದ ತನ್ನ ಕೈಯಲ್ಲಿ ಚಾವಟಿಯನ್ನು ಹಿಡಿದು ತನ್ನ ಚಿಕ್ಕಪ್ಪನ ಕುರಿಯ ಮಂದೆಯನ್ನು ಕಾಯಬೇಕಾಗಿದ್ದಿತು. ಆದರೇನು? ಭಗವಂತನೇ ಅವನ ಹೃದಯಕ್ಕೆ ಅಮೃತ-

ಸೇಚನೆ ಮಾಡುತ್ತಿದ್ದನು ; ಪ್ರಕೃತಿ ಮಾತೆಯೇ ತನ್ನ ವೈಭವವನ್ನು ಅವನ ಮನಸ್ಸಿಗೆ ಬೋಧಿಸಿ ಅವನನ್ನು ಪರಿಣತನನ್ನಾಗಿ ಮಾಡುತ್ತಿದ್ದಳು. ಆಟವಾಡುವ ವಯಸ್ಸಿನಲ್ಲಿ ಒಂಟಿಯಾಗಿದ್ದು ಕೆಲಸ ಮಾಡುವುದೂ ಅವನಿಗೆ ಹಿತಕರವಾಗಿಯೇ ಇದ್ದಿತು. ಅವನ ದಯಾರ್ದ್ರ ಸ್ವಭಾವವನ್ನು ಪರಿಸ್ಫುಟಗೊಳಿಸಲು ಅದೂ ಒಂದು ವಿಧದಲ್ಲಿ ಸಹಾಯವನ್ನೇ ಮಾಡಿತು.

# ಎರಡನೆಯ ಅಧ್ಯಾಯ

## ಸಂಸಾರದ ಸುಖ ದುಃಖಗಳು

ತನ್ನ ದೇಶೀಯರು ಹಲವು ಪಂಗಡಗಳಾಗಿ ದ್ವೇಷಾಸೂಯೆಗಳಿಂದ ಕೂಡಿ ಆಗಾಗ ಹೊಡೆದಾಡುತ್ತಿದ್ದುದನ್ನು ಮುಹಮ್ಮದನು ತನ್ನ ಬಾಲ್ಯದಿಂದಲೂ ನೋಡುತ್ತಲೇ ಇದ್ದನು. ಸಮಾಜದ ದುರವಸ್ಥೆಯು ಅವನ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತು ಅವನ ಹೃದಯವನ್ನೇ ಮರುಕದಿಂದ ಕರಗಿಸಿಬಿಟ್ಟಿತು. ಈ ಸನ್ನಿವೇಶದಲ್ಲಿ ಅವನು ಯೌವನದ ಹೊಸಲನ್ನು ಮೆಟ್ಟಿದನು. ಅದುವರೆಗೂ ಅವನು ಓದು ಬರೆಹಗಳನ್ನು ಅಭ್ಯಾಸ ಮಾಡದಿದ್ದರೂ ತನ್ನ ದೇಶದ ಪುರಾತನ ಕಥೆಗಳನ್ನೂ ವೀರರ ಜೀವನ ಚರಿತ್ರೆಗಳನ್ನೂ ಚೆನ್ನಾಗಿ ಕೇಳಿ ಮನನ ಮಾಡಿದ್ದನು; ಅದರಿಂದ ಸಾಧ್ಯಾಸಾಧ್ಯವನ್ನು ಮುಟ್ಟಿಸ ವಿವೇಕವನ್ನೂ ಸಂಗ್ರಹ ಮಾಡಿದ್ದನು. ಅವನಿಗೆ ತನ್ನ ದೇಶಬಾಂಧವರಲ್ಲಿ ಕೇವಲ ಪ್ರೀತಿಯಿದ್ದಿತು. ಅಕಾರಣವಾಗಿ ಅವರು ಹೊಡೆದಾಡುವುದನ್ನು ಕಂಡು ಅವನು ವಿಷಾದಪಡುತ್ತಿದ್ದನು; ಅವರಲ್ಲಿ ಶಾಂತಿಯನ್ನು ನೆಲೆಗೊಳಿಸುವುದು ಸಾಧ್ಯವೇ ಎಂದು ತವಕಪಡುತ್ತಿದ್ದನು. ಆದರೆ ದರಿದ್ರ ಯುವಕನ ವಿವೇಕದ ನುಡಿಯನ್ನು ರಾಗಾಂಧತೆಯಿಂದ ಮತ್ತರಾದ ಬಲ್ಲಿದರು ಕೇಳುವ ಸಂಭವವುಂಟೆ? ಅದನ್ನರಿತು ಮುಹಮ್ಮದನೂ ಸುಮ್ಮನಿದ್ದನು. ಅವನ ಮನಸ್ಸಿನಲ್ಲಿ ಬಗೆಬಗೆಯ ಆಲೋಚನೆಗಳು ತರಂಗ ತರಂಗವಾಗಿ ಹೊರಹೊಮ್ಮುತ್ತಿದ್ದುವು. ಅವನು ಜನಸಂದಣಿಯ ಮಧ್ಯದಲ್ಲಿದ್ದೂ ಮೌನ ವ್ರತವನ್ನವಲಂಬಿಸಿದ್ದನು. ಕೇಳದವರಿಗೆ ಹೇಳ ಹೋಗುವುದೂ ಅವಿವೇಕವೇ ಅಲ್ಲವೆ? ಇದರ ಮೇಲೆ ದಾರಿದ್ರ್ಯದಗ್ಧರಾದವರ ಗುಣಗಳು ಶೋಭಿಸುವುದು ಅಪೂರ್ವ; ಅನೇಕ ಸಂದರ್ಭಗಳಲ್ಲಿ ಗುಣಗಳೂ ಅವಗುಣಗಳೆಂದೇ ಭಾವಿಸಲ್ಪಡುವುದೂ ಉಂಟು. ಒಟ್ಟು ಜನಪದಗಳ ವಿಷಯವೂ ಹೀಗೆಯೇ. ಗುಣಮಣಿಯಾದ ಭಾರತಮಾತೆಯೂ ಸಂಸ್ಕೃತಿಯ ವಿಷಯದಲ್ಲಿ ಕೂಡ ಇತರ ದೇಶಗಳವರ ಅವಹೇಳನಕ್ಕೆ ಗುರಿಯಾಗಿರುವುದೂ ಬಡತನದ ಬವಣೆಯಿಂದಲೇ.

ಯೌವನ

ಭಕ್ತ ಜನರ ಯೋಗಕ್ಷೇಮವನ್ನು ನಿರಂತರವೂ ವಹಿಸಿರುವ ಭಗವಂತನು ಹೆಚ್ಚು ಕಾಲ ಸುಮ್ಮನಿರಲಿಲ್ಲ; ಮುಹಮ್ಮದನಿಂದ ಮುಂದೆ ನಡೆಯಬೇಕಾಗಿದ್ದ ದೇಶೋದ್ಧಾರ ಕಾರ್ಯಕ್ಕೆ ಹವಣರಿತು ಸಾಧನ ಸಂಪತ್ತನ್ನು ಒದಗಿಸುವ ಸೋಪಾನ ಮಾರ್ಗವನ್ನು ಸಿದ್ಧಗೊಳಿಸಿದನು. ಮುಹಮ್ಮದನ ವಿವಾಹವೂ ಅದರಲ್ಲೊಂದು ಮೆಟ್ಟಿಲು. ಅವನ ದೂರ ಸಂಬಂಧಿಯಾದ ಖದೀಜಳೆಂಬ ರಮಣಿಯು ಸಿಧಿಗಳ ನಾಯಕಿಯೆನ್ನುವಷ್ಟು ಧನಾಢ್ಯೆಯಾಗಿದ್ದಳು. ಮುಹಮ್ಮದನು ಆಕೆಯ ಆಸ್ತಿ ಪಾಸ್ತಿಗಳ ಆಡಳಿತವನ್ನು ನೋಡಿಕೊಳ್ಳುವ ಕೆಲಸವನ್ನು ವಹಿಸಿ, ಆಕೆಯಲ್ಲಿ ಸೇವಾ ವೃತ್ತಿಯನ್ನು ಕೈಕೊಂಡನು. ಅವನು ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲಿ ತನ್ನ ಒಡತಿಯ ಕಾರ್ಯಕ್ಕಾಗಿ ಸಿರಿಯಾ ದೇಶಕ್ಕೆ ಹೋಗಿ ಬಂದನು. ಅವನ ಕಾರ್ಯ ಪಟುತ್ವವನ್ನೂ ಪ್ರಾಮಾಣಿಕತೆಯನ್ನೂ ವಿವೇಕವನ್ನೂ ಖದೀಜಳು ಬಹುವಾಗಿ ಮೆಚ್ಚಿದಳು. ಕಾಲ ಕ್ರಮದಲ್ಲಿ ಈ ಮೆಚ್ಚುಗೆಯೇ ಅನುರಾಗವಾಗಿ ಪರಿಣಮಿಸಿತು. ಆಕೆಯಲ್ಲಿ ಹಣದೊಡನೆ ಗುಣವೂ ಸಮ್ಮಿಳಿತವಾಗಿದ್ದಿತಲ್ಲದೆ ರೂಪ ಮಾಧುರ್ಯಕ್ಕೂ ಅಭಾವವಿರಲಿಲ್ಲ. ಆದರೆ, ವಯಸ್ಸನ್ನು ನೋಡಿದರೆ ಮಾತ್ರ, ದಾಂಪತ್ಯವು ಸಮಂಜಸವಾಗುವಂತೆ ಕಂಡುಬರಲಿಲ್ಲ; ಏಕೆಂದರೆ, ಮುಹಮ್ಮದನು ಇನ್ನೂ ಯುವಕನು; ಖದೀಜಳೋ ಅವನಿಗಿಂತಲೂ ಸುಮಾರು ಹದಿನೈದು ವರುಷ ದೊಡ್ಡವಳು. ಆದರೂ, ಮುಹಮ್ಮದನು ಆಕೆಯ ಸದ್ಗುಣಗಳಿಗೆ ಮನಸೋತು ಆಕೆಯನ್ನು ವರಿಸಿದನು. ವಿಜೃಂಭಣೆಯಿಂದ ವಿವಾಹವು ಜರುಗಿತು. ದಂಪತಿಗಳಿಬ್ಬರೂ ಪರಸ್ಪರ ಪ್ರೇಮಮಯರಾಗಿದ್ದರು. ವಿವಾಹವಾದ ಮೇಲೆ ಹೊಟ್ಟೆಯ ಪಾಡಿಗಾಗಿ ದುಡಿಯಬೇಕಾದ ಆವಶ್ಯಕತೆಯು ಮುಹಮ್ಮದನಿಗೆ ತಪ್ಪಿತು.

ವಿವಾಹ

ಅನುಕೂಲ ದಾಂಪತ್ಯವೂ ಒಂದು ಭಾಗ್ಯ ವಿಶೇಷವೇ ಸರಿ. ಮುಹಮ್ಮದನಿಗೆ ಭಗವಂತನು ಎರಡು ಕೈಗಳಿಂದಲೂ ಅದನ್ನು ಅನುಗ್ರಹಿಸಿದ್ದನು. ಖದೀಜಳು ತನ್ನ ಹೃದಯವನ್ನೇ ತನ್ನ ಪತಿಗೆ ಕಾಣಿಕೆಯಾಗಿ ಒಪ್ಪಿಸಿದಳು. ಮುಹಮ್ಮದನು ತನಗಿಂತ

ಅನುಕೂಲ ದಾಂಪತ್ಯ

ವಯಸ್ಸಿನಲ್ಲಿ ಚಿಕ್ಕವನೆಂದಾಗಲಿ, ನಿರ್ಗತಿಕನಾಗಿದ್ದು ತನ್ನ ಕಟಾಕ್ಷ ವೀಕ್ಷಣೆಯಿಂದ ಧನಿಕನಾಗಿ ತನ್ನಿಂದ ಅನುಗೃಹೀತನಾಗಿದ್ದನೆಂದಾಗಲಿ ಭಾವಿಸಿ ಅವನಲ್ಲಿ ಲೇಶಮಾತ್ರವೂ ಆಕೆಯು ಅಲಕ್ಷ್ಯವನ್ನಾಗಲಿ ಅಗೌರವವನ್ನಾಗಲಿ ತೋರಿಸಲಿಲ್ಲ; ಮುಹಮ್ಮದನೇ ತನ್ನ ಪ್ರಾಣೇಶ್ವರನೆಂದು ಭಾವಿಸಿ ಅವನನ್ನು ಪ್ರೀತಿಸಿದಳು. ತನ್ನ ಸಮಸ್ತ ಸಂಪತ್ತನ್ನೂ ಆ ಸಾಧ್ವಿಯು ಅವನ ಪದತಲಕ್ಕೆ ಸಮರ್ಪಿಸಿದಳು. ಅವನು ಅದನ್ನು ಸ್ವೀಕರಿಸಿದುದೇ ಮಹಾನುಗ್ರಹವೆಂದು ಭಾವಿಸಿ ಪ್ರೇಮಮಯಿಯಾದ ಆ ಸಾಧ್ವಿಯು ಸಂತೋಷದಿಂದ ಹಿಗ್ಗಿದಳು; ಸಮ ದುಃಖಿನಿಯಾಗಿ, ಸಹ ಧರ್ಮಿಣಿಯಾಗಿ, ಅವನನ್ನು ಓಲೈಸಿದಳು. ಮುಹಮ್ಮದನ ಕಣ್ಣಿಗೆ ದೇವ ದೂತನು ಗೋಚರಿಸಿದನೆಂಬ ಸಂಗತಿಯನ್ನು ಕೇಳಿ ಹಲವರು ತಿರಸ್ಕಾರ ಭಾವದಿಂದ ನಗುತ್ತಿದ್ದರೂ ಅದನ್ನು ಮೊಟ್ಟಮೊದಲು ಆದರದಿಂದ ನಂಬಿ ಪತಿಯ ಮಾಹಾತ್ಮ್ಯಗಾಗಿ ಅಭಿಮಾನದಿಂದ ತಲೆದೂಗಿದವಳು ಖದೀಜಳೇ. [ಇದರ ವಿಚಾರವನ್ನು ಮುಂದೆ ವಿಸ್ತಾರವಾಗಿ ತಿಳಿಸಲಾಗುವುದು.] ಹಲವರು ಅಪಹಾಸ್ಯ ಮಾಡಿ ಮುಹಮ್ಮದನನ್ನು ಸಂತಾಪಕ್ಕೆ ಗುರಿಮಾಡಿದಾಗ ಅವನ ಮನಸ್ಸನ್ನು ಸಮಾಧಾನಗೊಳಿಸಿ ಪ್ರೀತಿಯಿಂದ ಸಂತವಿಟ್ಟವಳು ಖದೀಜಳೇ. ಆಕೆಯು ಒಳ್ಳೆಯ ಸ್ವಭಾವದವಳಲ್ಲದೆಹೋಗಿದ್ದರೆ ಮುಹಮ್ಮದನು, ಯಾರೂ ನಂಬದ ಭಗವದನುಗ್ರಹದ ವಿಚಾರವನ್ನು ತನ್ನೊಡನೆ ತಿಳಿಸಿದಾಗ, ಆಕೆಯು ವ್ಯಂಗ್ಯವಾಗಿ ನಕ್ಕು, "ಇದು ನನ್ನ ಸಹಾಯದಿಂದ ದೊರೆತ ಸುಖ ಜೀವನದ ಮಹಿಮೆ, ಆಲಸತನದ ಚರಮ ಸೀಮೆಯ ಪಿತ್ತ ವಿಕಾರ, ಮಾಡಲು ಕೆಲಸವಿಲ್ಲದವರ ಚಿತ್ತ ಭ್ರಮಣೆ!" ಎಂದು ಹೇಳಿ ಅವನನ್ನು ಹಾಸ್ಯ ಮಾಡುತ್ತಿದ್ದಳೋ ಏನೊ! ಸತೀ ಧರ್ಮವನ್ನರಿತು ನಡೆಯುತ್ತಿದ್ದ ಖದೀಜಳಿಗೆ ಅಂತಹ ಯೋಚನೆಯೇ ಹುಟ್ಟಲಿಲ್ಲ.

ಪುತ್ರ ಶೋಕ

ಹಣದ ರಾಶಿಯ ಮೇಲೆ ಕುಳಿತಿದ್ದರೂ ಸುಖವನ್ನು ಕಾಣುವುದು ಸಾಧ್ಯವಿಲ್ಲದೆ ಇರಬಹುದು. ಪ್ರಪಂಚದಲ್ಲಿ ಒಬ್ಬೊಬ್ಬರಿಗೆ ಒಂದೊಂದು ವಿಧದಲ್ಲಿ ದುಃಖವನ್ನೊದಗಿಸು

ವುದೇ ವಿಧಿಯು ಸಂಕಲ್ಪಿಸಿರಬಹುದೇನೊ! ಕುರೈಷರಿಂದ ಬಹಿಷ್ಕೃತ್ಯ, ಆಗಿನ ಕಾಲದಲ್ಲಿ ಲಭಿಸುತ್ತಿದ್ದ ಸಮಸ್ತ ಸುಖ ಸಾಮಗ್ರಿಗಳನ್ನೂ ಪಡೆದಿದ್ದ ಆ ದಂಪತಿಗಳಿಗೆ ಪುತ್ರ ಶೋಕವು ಬಂದೊದಗಿತು. ಅವರಿಗೆ ಮೂವರು ಪುತ್ರರೂ ನಾಲ್ವರು ಪುತ್ರಿಯರೂ ಜನಿಸಿದರು. ಆದರೆ, ಮೂವರು ಪುತ್ರರೂ ಶೈಶವದಲ್ಲಿಯೇ ಮೃತರಾದರು. "ಪುತ್ರ ದುಃಖಂ ನಿರಂತರಂ" ಎಂಬ ಲೋಕೋಕ್ತಿಯಂತೆ, ಮಕ್ಕಳ ಸಾವಿನಿಂದ ಹುಟ್ಟಿ ಸರ್ವದಾ ಮನಸ್ಸನ್ನು ಕೊರೆಯುತ್ತಿರುವ ದುಃಖವು ಅನುಭವ ವೇದ್ಯವೇ ಹೊರತು ವರ್ಣನೆಗಳವಲ್ಲ. ದುಸ್ಸಹವಾದ ಪುತ್ರ ಶೋಕವು ತನ್ನನ್ನು ಬಾಧಿಸುತ್ತಿದ್ದರೂ ಮುಹಮ್ಮದನು ಕರ್ತವ್ಯ ವಿಮುಖನಾಗದೆ ತನ್ನ ಮೇಲೆ ಹೊತ್ತಿದ್ದ ಭಾವಿ ಮಹತ್ಕಾರ್ಯಕ್ಕೆ ಆತ್ಮ ನಿಷ್ಠೆಯಿಂದ ಅನುವಾಗುತ್ತಬಂದನು. ಅವನ ಸಹ ಧರ್ಮಿಣಿಯೂ ಅದಕ್ಕೆ ನೆರವಾದಳು. ವಿವಾಹವಾದನಂತರ ಸುಮಾರು ಹದಿನೈದು ವರುಷಗಳ ಅವಧಿಯು ಮುಹಮ್ಮದನ ಆತ್ಮ ಸಂಯಮದ ಮತ್ತು ಅಂತರಾತ್ಮ ಸಂಶೋಧನೆಯ ಕಾಲವೆಂದು ಹೇಳಬಹುದು.

ಆಗಿನ ಕಾಲಕ್ಕೆ ಮಕ್ಕಾನಗರವು ಬಹಳ ದೊಡ್ಡ ಪಟ್ಟಣ. ಅಲ್ಲಿ ದೊಡ್ಡ ದೊಡ್ಡ ಮನೆಗಳೂ ಮಹಲುಗಳೂ ಮಳಿಗೆಗಳೂ ತುಂಬಿದ್ದುವು; ವ್ಯಾಪಾರವು ವಿಶೇಷವಾಗಿ ನಡೆಯುತ್ತಿದ್ದಿತು. ಮಕ್ಕಾ ನಗರದಲ್ಲಿದ್ದ ಒಂದು ದೇವಾಲಯದಲ್ಲಿ ಮುನ್ನೂರರವತ್ತು ವಿಗ್ರಹಗಳನ್ನಿಟ್ಟು ಅವನ್ನು ದಿನಕ್ಕೊಂದರಂತೆ ವರ್ಷವೆಲ್ಲ ಪೂಜಿಸುತ್ತಿದ್ದರು. ಒಂದು ವಿಗ್ರಹಕ್ಕೆ ಒಂದು ದಿನ ಪೂಜೆಯಾದ ಮೇಲೆ ಅದೇ ವಿಗ್ರಹಕ್ಕೆ ಮತ್ತೊಮ್ಮೆ ಪೂಜೆಯು ಸಲ್ಲಬೇಕಾದರೆ ಸರಿಯಾಗಿ ಒಂದು ವರ್ಷವಾಗುತ್ತಿದ್ದಿತು. ಮುಹಮ್ಮದನ ತಾತನು ಜೀವಂತನಾಗಿದ್ದಾಗ ಮಕ್ಕಾ ನಗರದ ಪೌರ ಕಾರ್ಯಗಳು ಆತನ ಆಧಿಪತ್ಯದಲ್ಲಿ ದಕ್ಷತೆಯಿಂದ ನಡೆಯುತ್ತಿದ್ದುವು. ಆತನ ಮರಣಾನಂತರ ಅವುಗಳ ವ್ಯವಸ್ಥೆಯು ಹದಗೆಟ್ಟು ಜನರಲ್ಲಿ ಏಕಮತ್ಯವು ತಪ್ಪಿತು. ಜನರು ನೆಮ್ಮದಿಯಾಗಿ ಬಾಳುವಂತೆಯೂ ಅವರ ಸ್ವತ್ತುಗಳು ಸುರಕ್ಷಿತವಾಗಿರುವಂತೆಯೂ ನೋಡಿಕೊಳ್ಳಲು ದಂಡಾಧಿ

ಅನುಕಂಪ

ಕಾರಿಯು ಯಾವನೂ ಇರಲಿಲ್ಲ. ಯಾವನು ಬಲಶಾಲಿಯೋ ಅವನಿಗೇ ಯಾಜಮಾನ್ಯ. ಇದರಿಂದ, ಬಲಿಷ್ಠರೆಲ್ಲರೂ ತಮ್ಮ ತಮ್ಮ ಅನುಯಾಯಿಗಳೊಡಗೂಡಿ ಪರಸ್ಪರ ಹೋರಾಡುತ್ತಿದ್ದರು. ಪರ ಸ್ಥಳದಿಂದ ಮಕ್ಕಾ ನಗರಕ್ಕೆ ಬಂದವರಿಗೆ ವಿಷಮ ಸಂಕಟವೊದಗಿ ಅವರ ಹಣ ಕಾಸುಗಳು ಸುಲಿಗೆಯಾಗುತ್ತಿದ್ದುವು. ಅವರು ಹೆಂಗುಸರೊಡನೆ ಬಂದಿದ್ದರಂತೂ ಹೇಳಬೇಕಾದುದೇ ಇಲ್ಲ. ಪುಂಡು ಪೋಕರ ಹಾವಳಿಯಿಂದ ಅವರ ಮಾನವು ಸೂರೆಯಾಗುತ್ತಿದ್ದಿತು. ಒಮ್ಮೆ ಒಬ್ಬ ಕವಿಯು ಮಕ್ಕಾ ನಗರಕ್ಕೆ ಬಂದು ಕೊರೈಷ್ ಮನೆತನದ ಅಧಿನಾಯಕನ ಆಶ್ರಿತನಾಗಿದ್ದನು. ತುಂಟರು ಅವನನ್ನು ಬಹಿರಂಗವಾಗಿ ಬೀದಿಯಲ್ಲಿ ನಿಲ್ಲಿಸಿ ಅವನ ಸರ್ವಸ್ವವನ್ನೂ ಅಪಹರಿಸಿದರು. ಈ ವಿಧದ ಅತ್ಯಾಚಾರಗಳಿಂದ ಮುಹಮ್ಮದನು ಮನನೊಂದು ಕೆಲವು ಬಲಿಷ್ಠವಾದ ಮನೆತನಗಳ ಗುಣವಂತರಾದ ವೀರರನ್ನು ಒಟ್ಟುಗೂಡಿಸಿ ಒಂದು ಸಂಘವನ್ನು ಸ್ಥಾಪಿಸಿದನು. ಮಕ್ಕಾ ನಗರದವರೇ ಆಗಲಿ, ಹೊರಗಿನಿಂದ ಬಂದವರೇ ಆಗಲಿ, ಅವರು ಯಾವುದೊಂದು ತೊಂದರೆಗೂ ಒಳಗಾಗದಂತೆ ಸುರಕ್ಷಿತವಾಗಿ ಕಾಪಾಡಿ ಪುಂಡರ ಹಾವಳಿಯನ್ನಡಗಿಸುವುದೇ ಈ ಸಂಘದ ಉದ್ದೇಶ. ಮುಹಮ್ಮದನ ವಿವಾಹವಾದ ತರುಣದಲ್ಲಿಯೇ ಅವನು ಈ ಸಂಘವನ್ನು ಸ್ಥಾಪಿಸಿ, ಅದರ ಅಧ್ಯಕ್ಷನಾಗಿ ನಿಂತನು. ಕ್ರಿಸ್ತ ಶಕ ೫೯೫ನೆಯ ವರ್ಷದಲ್ಲಿ ಈ ಸಂಘವು ಹುಟ್ಟಿ ಇದರಿಂದ ದುರ್ಬಲರನ್ನು ಕಾಪಾಡಿ, ದುಷ್ಟರನ್ನು ನೆಗ್ಗುವ ಕೆಲಸವು ಚೆನ್ನಾಗಿ ನೆರವೇರಿತು. ಮುಹಮ್ಮದನ ಪರಿಶುದ್ಧ ಜೀವನವೂ, ಧನಿಕನಾಗಿದ್ದೂ ಡಾಂಭಿಕತನಕ್ಕೆ ದೂರನಾಗಿದ್ದ ಅವನ ಸರಳ ವರ್ತನೆಯೂ, ಸುಸಂಸ್ಕೃತವಾಗಿ ಮನೋಹರವಾಗಿದ್ದ ಅವನ ಸುಸ್ವಭಾವವೂ, ದೀನಾನಾಥರಲ್ಲಿ ಅವನು ತೋರಿಸುತ್ತಿದ್ದ ಕರುಣೆಯೂ, ಮಾನಧನನಾಗಿದ್ದ ಅವನ ಕರ್ತವ್ಯನಿಷ್ಠೆಯೂ ಎಲ್ಲರ ಮನಸ್ಸನ್ನೂ ಮುಗ್ಧಗೊಳಿಸಿದುವು. ಅವನಿಗೆ ''ಅಲ್-ಅಮೀನ್'' (ಎಂದರೆ, ಪ್ರಜೆಗಳ ಪ್ರಾಣ, ಮಾನ, ಧನ ರಕ್ಷಕ) ಎಂಬ ಹೆಸರು ರೂಢಿಯಾಗಿ, ಇದು ಜನರೆಲ್ಲರೂ ಕೊಟ್ಟ ಅಮೋಘವಾದ ಬಿರುದಿನಂತಿದ್ದಿತು. ಈ ಹೆಸರು ಬಂದುದು ಅಲಭ್ಯ ಲಾಭವಲ್ಲವೆ? ಈ ಬಿರುದನ್ನು ಸಾರ್ಥಕ

ಗೊಳಿಸುವ ಮತ್ತೊಂದು ಘಟನೆಯೂ ಸಂಧಿಸಿತು: ಜೈದ್ ಎಂಬ ಯುವಕನೊಬ್ಬನನ್ನು ಶತ್ರು ಪಕ್ಷದವರು ಸೆರೆ ಹಿಡಿದು ಖದೀಜಳ ಅಣ್ಣನ ಮಗನಿಗೆ ಗುಲಾಮನನ್ನಾಗಿ ವಿಕ್ರಯಿಸಿದರು. ಆತನು ಈ ಗುಲಾಮ ನನ್ನು ಖದೀಜಳಿಗೊಪ್ಪಿಸಲು, ಆಕೆಯು ಅವನನ್ನು ಮುಹಮ್ಮದನಿಗೆ ಕಾಣಿಕೆಯಾಗಿ ಸಮರ್ಪಿಸಿದಳು. ಮುಹಮ್ಮದನು ಆ ಯುವಕನಲ್ಲಿ ಅನುತಾಪವನ್ನು ತೋರಿಸಿ, ಅವನಿಗೆ ಸ್ವಾತಂತ್ರ್ಯವನ್ನು ಕೊಟ್ಟು ದಾಸ್ಯ ದಿಂದ ಬಿಡುಗಡೆ ಮಾಡಿದನು. ಆದರೆ, ಆ ಯುವಕನು ತನ್ನ ತಂದೆಯ ಬಳಿಗೆ ಹೋಗಲೊಲ್ಲದೆ, ಮುಹಮ್ಮದನ ಗುಣಕ್ಕೆ ಮನ ಸೋತು, ಅವನ ಬಳಿಯಲ್ಲಿಯೇ ಇರುವುದಾಗಿ ಸಂಕಲ್ಪಮಾಡಲು, ಮುಹಮ್ಮದನು ಅವನನ್ನು ತನ್ನ ಬಳಿಯಲ್ಲಿಯೇ ಇಟ್ಟುಕೊಂಡನು. ಅರಬ್ಬಿಯವರೆಲ್ಲರೂ ಇದನ್ನು ಕಂಡು ಬೆರಗಾದರು. ಮುಹಮ್ಮದನ ಈ ವಿಧದ ವರ್ತನೆಯು ಅವರೆಲ್ಲರಿಗೂ ಪ್ರಬೋಧಕವಾಗಿದ್ದಿತು.

ಮುಹಮ್ಮದನು ತನ್ನ ಚಿಕ್ಕಪ್ಪನಾದ ಅಬೂತಾಲಿಬನ ಉಪಕಾರ ವನ್ನು ಮರೆಯಲಿಲ್ಲ. ತಾನು ಖದೀಜಳ ಸಂಪತ್ತಿಗೆ ಒಡೆಯನಾದ ಉತ್ಸಾಹದಿಂದ, ಎಂದಿಗೂ ಕರ್ತವ್ಯ ವಿಮುಖನಾಗಿ

**ಉಪಕಾರ ಸ್ಮರಣೆ**

ಕೃತಘ್ನನಾಗಲಿಲ್ಲ. ಅವನು ಚಿಕ್ಕಪ್ಪನ ಉಪಕಾರ ವನ್ನು ಸ್ಮರಿಸಿಕೊಂಡು, ಆತನಿಗೆ ಸಹಾಯಮಾಡಿ ದುದಲ್ಲದೆ, ಆತನ ಮಗನಾದ ಅಲೀಯ ವಿದ್ಯಾಭ್ಯಾಸದ ಹೊರೆಯನ್ನೂ ತಾನೇ ವಹಿಸಿದನು; ಅಷ್ಟೇ ಅಲ್ಲ; ಅಲೀಯಲ್ಲಿ ಪುತ್ರವಾತ್ಸಲ್ಯವನ್ನಿಟ್ಟು ತನ್ನ ಪುತ್ರ ಶೋಕವನ್ನು ಮರೆಯಲು ಪ್ರಯತ್ನಿಸಿದನು; ಪರಿಣಾಮ ದಲ್ಲಿ, ತನ್ನ ಮಗಳಾದ ಫಾತಿಮಳನ್ನು ಅವನಿಗೇ ಕೊಟ್ಟು ಮದುವೆ ಮಾಡಿದನು.

# ಮೂರನೆಯ ಅಧ್ಯಾಯ

## ಭಗವತ್ಸಂದೇಶ

ಮುಹಮ್ಮದನ ವಿವಾಹಾನಂತರ ಹದಿನೈದು ವರುಷಗಳು ಕಳೆದು ಹೋದುವು. ಅಜ್ಞಾನ ವಶದಿಂದ ಮೋಹಾಂಧಕಾರದಲ್ಲಿ ತೇಲಿ ಮುಳು ಗುತ್ತಿದ್ದ ತನ್ನ ದೇಶ ಬಾಂಧವರ ದುಸ್ಥಿತಿಯನ್ನು

**ಅನುತಾಪ**

ನೋಡಿ ಮುಹಮ್ಮದನು ಅಹರ್ನಿಶವೂ ಮನಮರುಗು ತ್ತಿದ್ದನು. ಅವರು ಹಿಂಸ್ರ ಪಶುಗಳಂತೆ ಘಾತುಕ ರಾಗಿ, ಭೋಗ ಲಾಲಸರಾಗಿದ್ದುದರಿಂದ ಅವರ ಅತ್ಯಾಚಾರಗಳಿಗೆ ಕೊನೆ ಮೊದಲೇ ಇರಲಿಲ್ಲ. ಪರಸ್ಪರವಾಗಿ ಜಗಳವನ್ನು ಹೂಡಿ ಹೋರಾಡಿ ನರ ರಕ್ತವನ್ನು ಹರಿಸುವುದೆಂದರೆ ಅವರಿಗೆ ಲೀಲಾ ಜಾಲ. ಭಗವದ್ಭಕ್ತಿ ಯನ್ನಂತೂ ಅವರು ಕಂಡೇ ಅರಿಯರು; ವಿಗ್ರಹಗಳೇ ದೇವರೆಂದೆಣಿಸಿ ಪೂಜಿಸುತ್ತಿದ್ದರು. ವಿಗ್ರಹಗಳು ಲಾಂಛನ ಪ್ರಾಯವೆಂಬ ಹಿಂದೂಗಳ ಉದಾತ್ತ ತತ್ತ್ವಕ್ಕೂ ಅವರಿಗೂ ಬಹಳ ದೂರ. ದ್ಯೂತವೇ ಮುಂತಾದ ದುರ್ವ್ಯಸನಗಳಿಗೆ ಆಶ್ರಯ ಕೊಟ್ಟು ಪಶು ವೃತ್ತಿಯಿಂದ ಅವರೆಲ್ಲರೂ ಕಾಲವನ್ನು ಕಳೆಯುತ್ತಿದ್ದರು. ಮುಹಮ್ಮದನು ಇದನ್ನು ಕಂಡು ಬಹಳ ವ್ಯಥೆಪಡುತ್ತ ಅವರನ್ನು ಸನ್ಮಾರ್ಗಕ್ಕೆ ತರುವ ಮಾರ್ಗವು ಯಾವು ದೆಂದು ಹಗಲಿರುಳೂ ಚಿಂತಿಸುತ್ತಿದ್ದನು. ಕೊನೆಗೆ ಜುಗುಪ್ಸೆಯುಂಟಾಗಿ ಅವನು ಏಕಾಂತ ವಾಸದಲ್ಲಿಚ್ಛೆಪಟ್ಟು ಮರಳು ಕಾಡಿನ ಮಧ್ಯದಲ್ಲಿ ಹೀರಾ ಎಂಬ ಹೆಸರಿನ ಒಂದು ಗುಡ್ಡದಲ್ಲಿಯ ಪ್ರಶಸ್ತವಾದ ಗುಹೆಯನ್ನು ತನ್ನ ಆವಾಸ ಸ್ಥಾನವಾಗಿ ಮಾಡಿಕೊಂಡನು. ಹೊನ್ನಿನ ರಾಶಿಯ ಮೇಲೆ ಕುಳಿತಿದ್ದ ಮುಹಮ್ಮದನು ಈ ಗುಹೆಯಲ್ಲಿ ಕುಳಿತು ಪ್ರವೃತ್ತಿ ಮಾರ್ಗ ಲಬ್ಧವಾದ ಭೋಗವೇ ಜೀವನದ ಸರ್ವಸ್ವವಲ್ಲವೆಂಬ ಚಿಂತೆಯಿಂದ ಬೆಂದು ನಿರ್ವಿಣ್ಣನಾಗಿ ಅಧ್ಯಾತ್ಮ ವಿಷಯವನ್ನು ಯೋಚಿಸತೊಡಗಿದನು. ತರು ಲತೆಗಳ ಸುಳಿವೇ ಇಲ್ಲದೆ ಕಾದ ಮರಳಿನ ಮಧ್ಯದಲ್ಲಿದ್ದ ಬೆಟ್ಟದ ಮೇಲಣ ಶೀತಲವಾದ ಆ ಗುಹಾ ಪ್ರದೇಶವು ಮುಹಮ್ಮದನಿಗೆ ಸಿರಿವೀಡಾಗಿ ಸಂತೋಷವನ್ನು ಹುಟ್ಟಿಸಿತು. ಆದರೇನು? ಬೆಟ್ಟದಲ್ಲಿದ್ದ ಬೆಣಚು

ಕಲ್ಲುಗಳು ತತ್ತ್ವಾರ್ಥವನ್ನು ಅವನಿಗೆ ಬೋಧಿಸಬಲ್ಲುವೆ? ದಾವಾನಲನ ನೀಳ್ದ ನಾಲಗೆಯಂತಿದ್ದ ಕ..ದ ಮರಳಿನ ಕಾಡಿನಿಂದ ಅವನ ಜೀವನದ ಸಮಸ್ಯೆಯು ಪೂರ್ಣವಾಗಲಿಲ್ಲ. ನಕ್ಷತ್ರಗಳು ಅವನಿಗೆ ಉತ್ತರ ಹೇಳವು; ಸೂರ್ಯನು ಅವನಿಗೆ ದಾರಿ ತೋರಿಸನು; ಹಾಸ್ಯವದನನಾದ ಚಂದ್ರಮನಿಂದ ಅವನ ಮನಸ್ಸಿನ ಶಂಕೆಯು ಪರಿಹಾರವಾಗದು. ಎಲ್ಲಿ ನೋಡಿದರೂ ನಿಶ್ಶಬ್ದ, ಎಲ್ಲಿ ನೋಡಿದರೂ ಸಾರವಿಲ್ಲದ ಶೂನ್ಯತೆ; ಹೀಗಿದ್ದ ನಿರ್ಜನ ಪ್ರದೇಶದಲ್ಲಿ ಕುಳಿತು, ಸೃಷ್ಟಿಕರ್ತನ ಕಮನೀಯತೆಯನ್ನು ಕುರಿತು ಮುಹಮ್ಮದನು ಏಕಾಗ್ರ ಚಿತ್ತದಿಂದ ಆಲೋಚಿಸತೊಡಗಿದನು; ತನ್ನ ಮನಸ್ಸನ್ನು ಜ್ಞಾನದೀಪಿಕೆಯಿಂದ ಬೆಳಗಿಸಬೇಕೆಂದು ಅವನು ಭಗವಂತನಿಗೆ ಮೊರೆಯಿಟ್ಟನು; ದೇವದೇವನ ಧ್ಯಾನದಲ್ಲಿ ಮಗ್ನನಾಗಿ ಬಾಹ್ಯಸ್ಮರಣೆಯನ್ನು ಮರೆತನು. ಹೀಗೆ ಎಷ್ಟೋ ಕಾಲ ಕಳೆಯಿತು.

ಮುಹಮ್ಮದನು ಧ್ಯಾನಾಸಕ್ತನಾಗಿರಲು, ಒಮ್ಮೆ ಗುಡುಗಿಗಿಂತಲೂ ಹೆಚ್ಚಿನ ಗಡಾವಣೆಯುಳ್ಳ ಧ್ವನಿಯೊಂದು ಅವನಿಗೆ ಕೇಳಿಸಿತು. ಮುಹಮ್ಮದನು ಅದನ್ನು ಆಲಿಸಿ ಕೇಳಲು, ಆ ವಾಣಿಯು ಧೀರತೆಯಿಂದ ತುಂಬಿದ ಗಂಭೀರ ಧ್ವನಿಯಿಂದ, "ಸಂಕೀರ್ತನ ಮಾಡು" ಎಂದು ಹೇಳಿದ ಹಾಗಾಯಿತು. ಆಗ ಅರ್ಧರಾತ್ರಿಯ ನಿಶೀಥ ಸಮಯ; ಎಲ್ಲಿ ನೋಡಿದರೂ ನಿಶ್ಶ... ಮೂರು ಸಾರಿ ಅದೇ ಮಾತೇ ಅವನ ಕಿವಿಗೆ ಕೇಳಿಸಿತು. ಮುಹಮ್ಮದನು ತನ್ನ ಮನಸ್ಸನ್ನು ತಾನೇ ನಂಬಲಾರದೆ ಕೊನೆಗೆ ಧೈರ್ಯ ತಂದುಕೊಂಡು, "ಏನನ್ನು ಸಂಕೀರ್ತನ ಮಾಡಲಿ?" ಎಂದು ಕೇಳಿದನು. "ನಿನ್ನ ಒಡೆಯನಾದ ಭಗವಂತನ ನಾಮ ಸಂಕೀರ್ತನ ಮಾಡಿ ಅವನ ಸಂದೇಶವನ್ನು ಎಲ್ಲರಿಗೂ ಸಾರು" ಎಂಬ ನುಡಿಗಳು ಅವನಿಗೆ ಕೇಳಬಂದುವು. ಅನಿರ್ವಚನೀಯವಾದೊಂದು ಭವ್ಯ ದೃಶ್ಯವನ್ನೂ ಕಂಡು ಗಡಗಡನೆ ನಡುಗುತ್ತ ಅವನು ಖದೀಜಳ ಬಳಿಗೆ ಓಡಿಬಂದನು. ಪತಿಯ ಅವಸ್ಥೆಯನ್ನು ನೋಡಿ ಆಕೆಯೂ ಭ್ರಾಂತಳಾದಳು. ಮುಹಮ್ಮದನು, "ಖದೀಜಾ, ಖದೀಜಾ! ನನಗೇನೋ ಸಂಭವಿಸಿದೆ, ನೋಡು, ನೋಡು," ಎಂದು ಹೇಳಿ ಮೂರ್ಛಿತನಾದನು. ಮುಹಮ್ಮದನ ಈ

ದೈವಿಕ ಸಂದೇಶ

ಸ್ಥಿತಿಯನ್ನು ಕಂಡು ಖದೀಜಳು ಅಪ್ರತಿಭಳಾಗಿ ಅವನಿಗೆ ಶೈತ್ಯೋಪಚಾರ ಮಾಡಲು, ಮಹಮ್ಮದನು ಮೂರ್ಛೆಯಿಂದೆಚ್ಚತ್ತು, "ಖದೀಜಾ, ಖದೀಜಾ! ನಾನು ಕಣಿ ಹೇಳುವವನು; ನನಗೆ ಹುಚ್ಚು ಹಿಡಿದು ಹೋಗಿದೆ" ಎಂದು ಹೇಳಿದನು. ಖದೀಜಳು, "ನನ್ನ ಭಾಗಕ್ಕೆ ದೇವರಿದ್ದಾನೆ; ಇಂತಹದೊಂದೂ ನಿಮಗೆ ಸಂಭವಿಸುವುದಿಲ್ಲವೆಂದು ನನಗೆ ನಂಬಿಕೆ. ಏಕೆಂದರೆ, ನೀವು ಸತ್ಯವಾದಿ, ಶ್ರದ್ಧಾಳು, ಅಪಕಾರಕ್ಕೆ ಪ್ರತೀಕಾರ ಮಾಡದ ಸದಯ ಹೃದಯರು ; ಇದರ ಮೇಲೆ ಬಂಧು ಮಿತ್ರರಲ್ಲಿ ಕೇವಲ ಪ್ರೀತಿಯುಳ್ಳವರು. ಪ್ರಿಯನೇ! ಅದ್ಭುತವಾದುದೇನನ್ನಾದರೂ ನೋಡಿದಿರಾ? ಇದೇಕೆ ಹೀಗೆ ಭ್ರಾಂತರಾಗಿರುವಿರಿ?" ಎಂದು ಆದರದಿಂದ ಕೇಳಿದಳು. ಅದಕ್ಕೆ ಮಹಮ್ಮದನು ತನ್ನ ಅನುಭವವನ್ನೆಲ್ಲ ಆಕೆಗೆ ವಿಸ್ತರಿಸಿ ತಿಳಿಸಲು, ಆಕೆಯು ಆನಂದ ಭರಿತಳಾಗಿ, "ಇದು ಸಂತೋಷದ ಸುದ್ದಿ, ನೀವು ಇದಕ್ಕಾಗಿ ಹಿಗ್ಗಬೇಕಲ್ಲವೆ! ಪ್ರಾಣನಾಥ! ಸಮಾಧಾನ ಹೊಂದಿರಿ. ನೀವು ನಮ್ಮ ದೇಶ ಬಾಂಧವರೆಲ್ಲರಿಗೂ ಉದ್ಧಾರಕರಾಗುವಿರಿ" ಎಂದು ಉತ್ತರ ಹೇಳಿದಳು. ತರುವಾಯ, ಆಕೆಯು ತನ್ನ ಸಮೀಪ ಬಂಧುವಾದ ವರಕನೆಂಬಾತನ ಬಳಿಗೆ ಹೋಗಿ ಈ ಸಂತೋಷ ವಾರ್ತೆಯನ್ನು ತಿಳಿಸಲು, ವೃದ್ಧನೂ ಅಂಧನೂ ಆಗಿದ್ದ ಆ ವರಕನು, ಯೆಹೂದ್ಯರ ಮತ್ತು ಕ್ರೈಸ್ತರ ಮತ ಗ್ರಂಥಗಳನ್ನು ಬಲ್ಲವನಾದುದರಿಂದ, ಖದೀಜಳು ಹೇಳಿದ ವಾರ್ತೆಯನ್ನು ಕೇಳಿ, "ಶುಭ ವಾರ್ತೆ! ಶುಭ ವಾರ್ತೆ! ಮೋಜನನಿಗೂ ಯೇಸು ಕ್ರಿಸ್ತನಿಗೂ ಪ್ರತ್ಯಕ್ಷವಾಗಿದ್ದ ದೇವದೂತನೇ ಮಹಮ್ಮದನಿಗೂ ಒಲಿದಿದ್ದಾನೆ. ಮಹಮ್ಮದನು ಭಗವಂತನ ಪರವಾಗಿ ಮತಬೋಧಕನಾಗುತ್ತಾನೆ, ಇದು ನಿಜ" ಎಂದು ಉತ್ತರ ಹೇಳಿದನು. ಈ ಸುದ್ದಿಯೇನೋ ದೇಶದಲ್ಲೆಲ್ಲ ಹರಡಿತು; ಆದರೂ ಖದೀಜಳೂ ವರಕನೂ ಹೊರತು ಉಳಿದವರಾರೂ ಒಡನೆಯೇ ಅದನ್ನು ನಂಬಲಿಲ್ಲ. ವರಕನೂ ಮಹಮ್ಮದನೂ ಸಂಧಿಸಿದಾಗ ವರಕನು, "ನಾನು ಭಗವಂತನ ಮೇಲೆ ಆಣೆಯಿಟ್ಟು ಹೇಳುತ್ತೇನೆ: ಅವನೇ ನಿನ್ನನ್ನು ತನ್ನ ಪರವಾದ ಮತಬೋಧಕನನ್ನಾಗಿ ಆರಿಸಿದ್ದಾನೆ. ನಿನಗೆ ಒಲಿದವನು ದೇವ ದೂತನೇ. ಈ ದೇಶದ ಜನರು ನಿನ್ನ ಹೇಳಿಕೆಯನ್ನು ನಂಬುವುದಿಲ್ಲ.

ಅವರು ನಿನ್ನನ್ನು ಸುಳ್ಳುಗಾರನೆನ್ನುವರು, ಹಿಂಸೆಮಾಡುವರು, ನಿನ್ನೊಡನೆ ಯುದ್ಧಕ್ಕೆ ಬರುವರು, ನಿನ್ನನ್ನು ದೇಶಭ್ರಷ್ಟನನ್ನಾಗಿ ಮಾಡುವರು. ನಾನು ಅಂದಿನ ವರೆಗೂ ಬದುಕಿರಬಾರದೆ! ನಿನ್ನ ಕಡೆಯವನಾಗಿ ಆಗ್ಗೆ ಹೋರಾಡಬೇಕೆಂಬ ಆಸೆಯು ನನಗಿದೆ; ನನ್ನೀ ಆಸೆಯು ನೆರವೇರಿದರೆ ಸಾಕು " ಎಂದನು.

ಸಾಕ್ಷಾತ್ಕಾರ

ಮುಹಮ್ಮದನು ಅಲ್ಲಿಗೇ ಸುಮ್ಮನಾಗಲಿಲ್ಲ. ಸಕ್ಕರೆಯ ಸವಿಯನ್ನು ಕಂಡ ಮನುಷ್ಯನು ಮತ್ತೆ ಸಕ್ಕರೆಯನ್ನು ಪಡೆಯಲು ಯತ್ನಿಸದೆ ಸುಮ್ಮನಿರಬಲ್ಲನೆ? ಅತಿಮಾನುಷವಾದ ಭವ್ಯ ವಾಣಿಯನ್ನು ಮತ್ತೊಮ್ಮೆ ಕೇಳಲು ಪ್ರಯತ್ನಿಸಿ ಅವನು ಭಗವಂತನನ್ನು ಧ್ಯಾನಮಾಡಿದನು; ಅದರಿಂದ ಫಲವಾಗದೆ ಹೋಗಲು, ಪರಿತಾಪಪಟ್ಟು ತೊಳಲಿದನು; ವಾಣಿಯು ಕೇಳಿಸಲಿಲ್ಲ; ಶೋಕಗ್ರಸ್ತನಾಗಿ ಕಾತರ ಸ್ವರದಿಂದ ದೀನನಾಗಿ ಒರಲಿದನು. ಅವನ ರೋದನ ಧ್ವನಿಗೆ ಹೀರಾ ಪರ್ವತದ ಬಂಡೆಗಳ ಹೊರತು ಮತ್ತಾರೂ ಮಾರ್ದನಿ ಕೊಡಲಿಲ್ಲ. ತನ್ನ ಆಸೆಯು ಈಡೇರದೆ ಹೋದುದನ್ನು ಕಂಡು, ಅವನ ಮನೋವ್ಯಥೆಗೆ ಪಾರವೇ ಇಲ್ಲದಂತಾಗಿ ಜೀವನದಲ್ಲಿಯೇ ಜುಗುಪ್ಸೆಯುಂಟಾಯಿತು. ತೊಳಲಿ ಬಳಲಿ ಸಾಕಾಗಿ ಅವನು ಆತ್ಮಹತ್ಯದ ಪ್ರಯತ್ನ ಮಾಡಿದನು. ಕರುಣಾ ಸಿಂಧುವಾದ ಭಗವಂತನು ಆಗ ತನ್ನ ದೇವದೂತನನ್ನು ಮತ್ತೊಮ್ಮೆ ಕಳುಹಿಸಿ, ಮುಹಮ್ಮದನಿಗೆ ಕರ್ತವ್ಯ ಬೋಧೆ ಮಾಡಿಸಿದನಂತೆ : ಇದು ಮುಹಮ್ಮದೀಯರ ನಂಬಿಕೆ. ಹಿಂದೂಗಳಲ್ಲಿಯೂ ಎಷ್ಟೋ ಮಂದಿ ಭಗವದ್ಭಕ್ತರ ಅನುಭವವೂ ಇದೇ ರೀತಿಯಾಗಿದ್ದಿತೆಂದು ನಾವೆಲ್ಲರೂ ಕೇಳಿದ್ದೇವೆ. ಊಹಾಪೋಹ ಜ್ಞಾನವಿಲ್ಲದೆ ಪ್ರತ್ಯಕ್ಷ ಪ್ರಮಾಣ ಪಟುಗಳಾದ ನಾಸ್ತಿಕರ ಹೊರತು ಉಳಿದವರು ಇಂತಹದನ್ನು ಸಾಮಾನ್ಯವಾಗಿ ನಂಬುತ್ತಾರೆ. ನಾಸ್ತಿಕರಲ್ಲಿ ನಾಸ್ತಿಕರೆನಿಸಿದವರೂ ಸಹ ಈ ಪ್ರಪಂಚವು ತನಗೆ ತಾನೇ ಸೃಷ್ಟಿಯಾಯಿತೆನ್ನುವ ಹಾಗಿಲ್ಲ; ಅವರು ಹಾಗೆ ಹೇಳುವುದೂ ಇಲ್ಲ. ಆದುದರಿಂದ ಅವರೂ ಅರೆವಾಸಿ ಆಸ್ತಿಕರಾದಂತೆಯೇ ಆಯಿತು. 'ಅವರ ನಾಸ್ತಿಕತೆಯ ಮುಖವಾಡವು ಈ ಜನ್ಮದಲ್ಲಿಯಾಗಲಿ, ತಪ್ಪಿದರೆ ಮುಂದಣ ಜನ್ಮ

ದಲ್ಲಿಯಾಗಲಿ ಎಂದೋ ಒಂದು ದಿನ ಕಳಚಿ ಬಿದ್ದೇಹೋಗುವುದು ; ಬಳಿಕ ಅವರು ಪೂರ್ಣ ಆಸ್ತಿಕರೇ ಆಗುತ್ತಾರೆ' ಎಂಬುದು ಹಿಂದೂಗಳ ನಂಬಿಕೆ.

**ಮತ ಬೋಧೆ**

ಮೇಲೆ ಹೇಳಿದಂತೆ ಸಾಕ್ಷಾತ್ಕಾರವನ್ನು ಪಡೆದ ಬಳಿಕ ಮುಹಮ್ಮದನು ಅನಿರ್ವಚನೀಯವಾದೊಂದು ಸ್ಥಿತಿಯನ್ನು ಹೊಂದಿ ಗುಹೆಯನ್ನು ಬಿಟ್ಟು ಮನೆಗೆ ಬಂದನು. ಖದೀಜಳು ಎಲ್ಲ ಸಂಗತಿಗಳನ್ನೂ ಕೇಳಿ ತಿಳಿದುಕೊಂಡಳು; ಹಿಂದಿನಂತೆಯೇ ಅವನನ್ನು ಆದರಿಸುತ್ತಿದ್ದಳು. ಆ ಬಳಿಕ ಮುಹಮ್ಮದನು ದೈವಿಕ ಸಂದೇಶವನ್ನು ಜನರಿಗೆ ಬೋಧಿಸಿ ಅವರ ಅಜ್ಞಾನವನ್ನು ತೊಲಗಿಸಲು ಸೊಂಟಕಟ್ಟಿದನು ; ಜನಗಳ ಮೇಲ್ಮೆಗಾಗಿ ಹೆಣಗಾಡುವ ದೀಕ್ಷೆಯನ್ನು ವಹಿಸಿ, ಅದಕ್ಕೋಸುಗವೇ [illegible]ಂಡ ಮುಂದೆ ತನ್ನ ಜೀವನವನ್ನು ಕಾಣಿಕೆಯಾಗಿ ಸಮರ್ಪಿಸಿದನು. ಅವನ ಉಪದೇಶವನ್ನು ಕೇಳಿ ಅನೇಕರು ಅಪಹಾಸ್ಯ ಮಾಡಲಾರಂಭಿಸಿದರು ; ಕೆಲವರು ಗಲಭೆ ಮಾಡಿ ಅವನನ್ನು ಹಿಂಸಿಸುತ್ತಿದ್ದರು. ಮುಹಮ್ಮದನು ಇದೊಂದಕ್ಕೂ ಸಗ್ಗದೆ ತನ್ನ ಪ್ರಯತ್ನವನ್ನು ಮುಂದುವರಿಸಿ ಕಾಲಾನು ಕ್ರಮದಲ್ಲಿ ಪ್ರಬಲನಾದನು. ಅವನು ಬೋಧಿಸುತ್ತಿದ್ದ ಇಸ್ಲಾಂ ಮತಕ್ಕೆ ಪ್ರಾಶಸ್ತ್ಯವುಂಟಾಯಿತು. ಪೂರ್ವಸಂಪ್ರದಾಯ ಶರಣರಾಗಿದ್ದವರು ಕೆಲವರು, ಅವನು ಮತ ಬೋಧೆಯನ್ನು ನಿಲ್ಲಿಸುವುದಾದರೆ ಅವನನ್ನು ಮಕ್ಕಾ ನಗರಕ್ಕೆ ದೊರೆಯಾಗಿ ಮಾಡಿ, ದೇಶದಲ್ಲೆಲ್ಲ ಸ್ಫುರದ್ರೂಪಿಯೆನಿಸಿದ ಕನ್ಯೆಯನ್ನು ತಂದು ಅವನಿಗೆ ವಿವಾಹ ಮಾಡುವುದಾಗಿ ತಿಳಿಸಿದರು. ಪ್ರಬಲರಾದ ಆ ದೊಡ್ಡಮನುಷ್ಯರೊಡ್ಡಿದ ದುರಾಸೆಯ ಬಲೆಗೆ ಮುಹಮ್ಮದನು ಬೀಳದೆ ಹೋದುದನ್ನು ಕಂಡು ಜನರೆಲ್ಲರೂ ಅಚ್ಚರಿಗೊಂಡರು. ಮುಹಮ್ಮದನು, "ಬಲಗೈಯಲ್ಲಿ ಹಿಡಿಯಲು ಸೂರ್ಯನನ್ನೂ, ಎಡಗೈಯಲ್ಲಿ ಹಿಡಿಯಲು ಚಂದ್ರನನ್ನೂ ನೀವು ಆಕಾಶದಿಂದ ಕಳಚಿ ತಂದು ನನಗೆ ಕೊಟ್ಟರೂ ನಾನೇನೂ ಭಗವಂತನ ಆಜ್ಞೆಯನ್ನು ಉಲ್ಲಂಘಿಸಿ ಮತ ಬೋಧೆಯನ್ನು ನಿಲ್ಲಿಸಲೊಲ್ಲೆನು" ಎಂದು ಧೈರ್ಯವಾಗಿ ಉತ್ತರಕೊಟ್ಟನು.

ಮೂಲ ಸ್ಥಾನದಲ್ಲಿ ಮಹಾನದಿಯು ಕೂಡ ಸಣ್ಣಗಿರುತ್ತದೆ. ಮತ ಸ್ಥಾಪಕರ ಅನುಯಾಯಿಗಳ ವಿಷಯವೂ ಹೀಗೆಯೇ. ಯಾವನು ಬೋಧಿಸಿದ ಇಸ್ಲಾಂ ಮತದಲ್ಲಿ ಇಂದು ಕೋಟ್ಯಂತರ

ಶಿಷ್ಯ ವರ್ಗ

ಜನ ಸಂಖ್ಯೆ ಇರುವುದೋ ಆ ಮಹಮ್ಮದನ ಬೋಧೆಯನ್ನು ಮೊಟ್ಟಮೊದಲು ನಂಬಿ ಅವನಲ್ಲಿ ಶಿಷ್ಯೆಯಾದವಳು ಅವನ ಪತ್ನಿಯಾದ ಖದೀಜಳೇ! ಆಕೆಯು ತನ್ನ ಪತಿಯ ಮೂಲಕ ದೊರೆತ ದೈವಿಕ ಸಂದೇಶವನ್ನು ನಂಬಿ, ತಮ್ಮ ದೇಶದವರಂತೆ ತಾನೂ ಅದುವರೆಗೆ ಆಚರಿಸುತ್ತಿದ್ದ ವಿಗ್ರಹಾರಾಧನೆಯನ್ನು ಪರಿತ್ಯಜಿಸಿ, ಹೊಸ ವಿಧದ ಆರಾಧನಾ ಕ್ರಮವನ್ನನುಸರಿಸಿದಳು. ಇಷ್ಟೇ ಅಲ್ಲ; ಇತರರು ಮಹಮ್ಮದನನ್ನು ಅಪಹಾಸ್ಯ ಮಾಡಿ ದ್ವೇಷಿಸತೊಡಗಿದಾಗ, ಅವನಿಗೆ ಧೈರ್ಯ ಹೇಳಿ ಹುರಿದುಂಬಿಸಿದವಳೂ ಆಕೆಯೇ. ಮಹಮ್ಮದನ ಎರಡನೆಯ ಶಿಷ್ಯನು ಅಲೀ. ಈ ಇಬ್ಬರು ಶಿಷ್ಯರೊಡನೆ ಮಹಮ್ಮದನು ಮರಳು ಕಾಡಿನ ನಿರ್ಜನ ಪ್ರದೇಶವನ್ನು ಸೇರಿ ಸರ್ವೇಶ್ವರನಾದ ಭಗವಂತನನ್ನು ಅವರೊಡನೆ ತಾನೂ ಧ್ಯಾನಿಸುತ್ತಿದ್ದನು. ಒಮ್ಮೆ ಅವರು ಮೂವರೂ ಭಗವಂತನನ್ನು ಹೀಗೆ ಧ್ಯಾನಿಸುತ್ತಿರುವಲ್ಲಿ, ಅಲೀಯ ತಂದೆಯು ಅಲ್ಲಿಗೆ ಬಂದು, "ನಮ್ಮ ಸಂಪ್ರದಾಯ ವಿರುದ್ಧವಾದ ಪದ್ಧತಿಯು ಇದೇನು? ನೀನು ಬೋಧಿಸುತ್ತಿರುವ ಈ ಮತವು ಯಾವುದು?" ಎಂದು ಪ್ರಶ್ನೆಮಾಡಿದನು. ಆಗ ಮಹಮ್ಮದನು, "ಭಗವಂತನ ಸಂದೇಶವನ್ನನುಸರಿಸಿ ನಾನು ಈ ಮತವನ್ನು ಬೋಧಿಸುತ್ತಿದ್ದೇನೆ; ಅಜ್ಞಾನಾಂಧಕಾರದಲ್ಲಿ ತತ್ತರಿಸುತ್ತಿರುವವರನ್ನು ಜ್ಞಾನ ಜ್ಯೋತಿಯ ಬೆಳಕಿಗೆ ಕರೆದೊಯ್ಯುತ್ತೇನೆ. ಚಿಕ್ಕಪ್ಪಾ! ನೀನು ಬಹಳ ಯೋಗ್ಯನು; ನೀನು ಈ ಮತಕ್ಕೆ ಸೇರಿ ಇದನ್ನು ಹರಡಲನುಕೂಲಿಸುವಂತೆ ನನಗೆ ಸಹಾಯಮಾಡಬೇಕೆಂದು ಬೇಡಿಕೊಳ್ಳುತ್ತೇನೆ" ಎಂದನು. ಆಗ ಅಬೂತಾಲಿಬನ ಮನಸ್ಸಿನ ಒಳ ತೋಟಿಯನ್ನು ಕೇಳಬೇಕೆ? ಇತ್ತ, ಅಣ್ಣನ ಮಗನ ನವಿ ನುಡಿಯ ಪ್ರಾರ್ಥನೆ; ಅತ್ತ, ಸಂಪ್ರದಾಯ ಬದ್ಧವಾಗಿ ನಡೆದುಬಂದಿದ್ದ ಗೊಡ್ಡು ನಂಬಿಕೆಯನ್ನು ಬಿಡಲಾರದ ಕಳವಳ. ಈ ವಿಧದ ಭಾವ ವೈವಿಧ್ಯದಸುಳಿಗೆ ಸಿಕ್ಕಿದ್ದ ಆತನು ಕೊನೆಗೆ, "ಹಿರಿಯರ

ಕಾಲದಿಂದ ನಡೆದುಬಂದಿರುವ ಮತವನ್ನು ನಾನು ಬಿಡಲಾರೆನು; ಆದರೆ ನನ್ನ ದೇಹದಲ್ಲಿ ಉಸಿರಾಡುತ್ತಿರುವ ವರೆಗೂ ನಿನ್ನ ಮೇಲೆ ಯಾವನೊಬ್ಬನೂ ಕೈಮಾಡದಂತೆ ನೋಡಿಕೊಳ್ಳುತ್ತೇನೆ'' ಎಂದು ಉತ್ತರ ಹೇಳಿದನು. ಬಳಿಕ ಅಬೂತಾಲಿಬನು ತನ್ನ ಮಗನನ್ನು ಕುರಿತು, ''ಅಲೀ! ನೀನು ಯಾವ ಮತವನ್ನನುಸರಿಸುವೆ?'' ಎಂದು ಕೇಳಲು, ಮುಹಮ್ಮದನು ಬೋಧಿಸುತ್ತಿದ್ದ ಮತವನ್ನು ತಾನು ಅಂಗೀಕರಿಸುವೆನೆಂದು ಅಲೀಯು ಉತ್ತರ ಹೇಳಿದನು. ಆ ಮುದುಕನು ಅದಕ್ಕೆ, ''ಹಾಗೆಯೇ ಮಾಡು ಮಗೂ! ಹಾಗೆಯೇ ಮಾಡು. ಸನ್ಮಾರ್ಗವನ್ನು ಬಿಟ್ಟು ಮುಹಮ್ಮದನು ನಿನ್ನನ್ನು ಮತ್ತೆಲ್ಲಿಗೂ ಕರೆದೊಯ್ಯುವುದಿಲ್ಲ; ಅವಶ್ಯವಾಗಿ ಅವನನ್ನು ಅನುವರ್ತಿಸು'' ಎಂದು ಉತ್ತರ ಹೇಳಿ ಹೊರಟು ಹೋದನು. ಮುಂದೆ, ಜೈದನೆಂಬವನು ಮುಹಮ್ಮದನ ಶಿಷ್ಯವರ್ಗಕ್ಕೆ ಸೇರಿದನು. ಆ ಬಳಿಕ ಕೊರೈಷ್ ಮನೆತನದ ಅಬ್ದುಲ್ಲಾ ಎಂಬಾತನು ಮುಹಮ್ಮದನನ್ನು ಗುರುವಾಗಿ ಸ್ವೀಕರಿಸಿದನು. ಪ್ರಬಲವಾಗಿದ್ದ ಈ ಮನೆತನದವನು ಮುಹಮ್ಮದನ ಶಿಷ್ಯನಾದುದನ್ನು ಕಂಡು ಇತರ ದೊಡ್ಡ ದೊಡ್ಡ ಮನೆತನಗಳಲ್ಲಿ ಸುಪ್ರಸಿದ್ಧರಾಗಿದ್ದ ಐದು ಮಂದಿ ಅದೇ ಮಾರ್ಗವನ್ನನುಸರಿಸಿದರು. ಅಲ್ಲಿಂದ ಮುಂದೆ ಅನೇಕರು ಮುಹಮ್ಮದನ ಅನುಯಾಯಿಗಳಾಗುತ್ತ ಬಂದರು; ಬಡವರೂ ಬಲ್ಲಿದರೂ ಸಹ ಅವನ ಶಿಷ್ಯರಾದರು.

ನಾವು ಮೊದಲೇ ತಿಳಿಸಿರುವಂತೆ, ಅರಬ್ಬೀಸ್ಥಾನದಲ್ಲಿ ವಿಗ್ರಹಾರಾಧನೆಯು ನಡೆಯುತ್ತಿದ್ದುದು ಸರಿಯಷ್ಟೆ. ಅದನ್ನು ತಪ್ಪಿಸುವುದಕ್ಕಾಗಿ ಮುಹಮ್ಮದನು ಹೆಣಗತೊಡಗಿದನು.

**ಬಲವದ್ವಿರೋಧ**

ಈ ಸಂದರ್ಭದಲ್ಲಿ ನಾವು ಒಂದು ಅಂಶವನ್ನು ಜ್ಞಾಪಕದಲ್ಲಿಟ್ಟಿರಬೇಕು: ಅರಬ್ಬೀಯುವರು ಹಿಂದೂಗಳಂತೆ ವಿಗ್ರಹಗಳು ಕೇವಲ ಲಾಂಛನ ಪ್ರಾಯವೆಂದು ನಂಬಿ ದೇವತಾರಾಧನೆ ಮಾಡುತ್ತಿರಲಿಲ್ಲ.—''ಏಕಮೇವಾऽದ್ವಿತೀಯಂ ಬ್ರಹ್ಮ'' (ಪರಮಾತ್ಮನಿರುವವನೊಬ್ಬನೇ, ಇಬ್ಬರಿಲ್ಲ); ''ಏಕಂ ಸದ್ವಿಪ್ರಾ ಬಹುಧಾ ವದಂತಿ'' (ಒಬ್ಬನೇ ಆಗಿರುವ ಪರಬ್ರಹ್ಮನಿಗೆ ವಿಪ್ರರು ವಿವಿಧ ನಾಮ

ರೂಪಗಳನ್ನು ಕಲ್ಪಿಸಿ ಅಧಿಕಾರಿ ಭೇದದಿಂದ ಬಗೆ ಬಗೆಯಾಗಿ ಹೇಳುತ್ತಾರೆ): ಎಂಬಿವೇ ಮುಂತಾದ ಶ್ರುತಿ ವಾಕ್ಯಗಳು ಆರ್ಯರ ದೇವತಾ ಭಾವನೆಯ ನಿಜ ಸ್ವರೂಪವನ್ನು ತಿಳಿಸುತ್ತವೆ. ಅರಬ್ಬೀಯವರು ಭಗವಂತನು ಒಬ್ಬನೇ ಎಂಬುದನ್ನು ನಂಬಿರದೆ ಹಲವು ದೈವಗಳಿರುವುವೆಂದೂ ವಿಗ್ರಹಗಳೇ ದೇವರುಗಳೆಂದೂ ವರುಷದಲ್ಲಿ ಒಂದೊಂದು ದಿನವೂ ಒಂದೊಂದು ವಿಗ್ರಹವನ್ನು ಪೂಜಿಸಬೇಕೆಂದೂ ನಂಬಿದ್ದರಷ್ಟೆ!

ನ ಕಾಷ್ಠೇ ವಿದ್ಯತೇ ದೇವೋ ನಪಾಷಾಣೇ ನ ಮೃಣ್ಮಯೇ।
ಭಾವೇಹಿ ವಿದ್ಯತೇ ದೇವೋ ತಸ್ಮಾದ್ಭಾವೋಹಿ ಕಾರಣಂ ॥

[ಮರದಲ್ಲಾಗಲಿ ಕಲ್ಲಿನಲ್ಲಾಗಲಿ ಮೃಣ್ಮಯ ವಿಗ್ರಹದಲ್ಲಾಗಲಿ ದೇವರಿಲ್ಲ; ದೇವರಿರುವುದು ಭಾವದಲ್ಲಿ ಮಾತ್ರ. ಆದುದರಿಂದ, ಭಾವವೇ ಕಾರಣ.] ಎಂಬುದೇ ಮುಂತಾದ ಶ್ಲೋಕಗಳನ್ನು ನೋಡಿದರೂ ಸಹ, ನಮ್ಮ ಭಾರತೀಯ ವಿಗ್ರಹಾರಾಧನೆಗೂ ಅರಬ್ಬೀಯವರ ವಿಗ್ರಹಾರಾಧನೆಗೂ ಪರಸ್ಪರ ವ್ಯತ್ಯಾಸವು ಎಷ್ಟುಮಟ್ಟಿನದೆಂಬುದು ಗೊತ್ತಾಗುತ್ತದೆ. ಅಂತು, ಮಹಮ್ಮದನು ವಿಗ್ರಹಾರಾಧನೆಯನ್ನು ಖಂಡಿಸಿದನು. ಇದು ಸಂಪ್ರದಾಯ ಶರಣರಿಗೆ ಸರಿಬೀಳಲಿಲ್ಲ. ಆಗಿನ ಕಾಲದಲ್ಲಿ ಬಹಳ ಪ್ರಬಲರಾಗಿದ್ದ ಕೊರೈಷ್ ಮನೆತನದವರು, ಹಿಂದೆ ಹೇಳಿದಂತೆ, ಅವನಿಗೆ ವಿರೋಧಿಗಳಾಗಿದ್ದು, ಅವರಲ್ಲಿ ಒಬ್ಬನೇನೋ ಮಹಮ್ಮದನ ಶಿಷ್ಯನಾಗಿದ್ದನು. ಆದರೇನು? ಆಗ ಮಕ್ಕಾ ನಗರದಲ್ಲಿ ದೊರೆಯೇ ಇಲ್ಲದೆ, ಬಲಿಷ್ಠರಾದವರು ಪ್ರಬಲಿಸಿ ದಾಂಧಲೆಮಾಡಿ, ದೊರೆತಷ್ಟು ದ್ರವ್ಯವನ್ನು ವಿವಿಧ ವಿಧಗಳಲ್ಲಿ ದೋಚುತ್ತಿದ್ದರು. ಇಂಥವರಲ್ಲಿ ಕೊರೈಷ್ ಮನೆತನದವರೇ ಹೆಚ್ಚು ಬಲಿಷ್ಠರಾಗಿದ್ದು ಮಹಮ್ಮದನ ಮತ ಬೋಧೆಗೆ ಎದುರು ಬಿದ್ದುದರಿಂದ ಅವನಿಗೆ ಬಲವದ್ವಿರೋಧವು ಪ್ರಾಪ್ತವಾಯಿತು.

ಪ್ರಬಲರಾದ ಕೊರೈಷ್ ಮನೆತನದವರು ಅವನ ಶತ್ರುಗಳಾದ ಬಳಿಕ ಅವನ ಸತ್ವ ಪರೀಕ್ಷೆಗೆ ಮೊದಲಾಯಿತೆಂದೇ ಹೇಳಬಹುದು.

ಕಷ್ಟ ಪರಂಪರೆ

ಅವರು ಹಲವು ವಿಧಗಳಲ್ಲಿ ಅವನಿಗೆ ಕಿರುಕುಳವನ್ನುಂಟುಮಾಡುತ್ತಿದ್ದರು: ಮಹಮ್ಮದನು ಬೋಧೆ ಮಾಡಲಾರಂಭಿಸಿದರೆ ಸಾಕು, ಶತ್ರು ಪಕ್ಷದವರು

ಅವನನ್ನು ಹಾಸ್ಯ ಮಾಡುವುದಕ್ಕೂ ಅಣಕಿಸುವುದಕ್ಕೂ ಸಿದ್ಧವಾಗಿ ಸಾಲು ಸಾಲಾಗಿ ನಿಲ್ಲುವರು; ಅವನು ಧ್ಯಾನಕ್ಕೆ ಕುಳಿತುಕೊಳ್ಳುವ ಸ್ಥಳದಲ್ಲಿ ಮುಳ್ಳನ್ನು ಹರಡುವರು; ಅವನೂ ಅವನ ಶಿಷ್ಯರೂ ಧ್ಯಾನಕ್ಕೆ ಕುಳಿತಾಗಲೆಲ್ಲ ಅವರ ಮೇಲೆ ಕಸವನ್ನೂ ಕೊಚ್ಚೆಯನ್ನೂ ರೊಜ್ಜನ್ನೂ ತಂದು ಸುರಿಯುವರು. ಅವರು ಮುಹಮ್ಮದನಿಗೆ ಭೂತವು ಹಿಡಿದಿದೆ ಯೆಂದು ಪ್ರವಾದವನ್ನೆಬ್ಬಿಸಿ ಹರಡತೊಡಗಿದರು. ಏತನ್ಮಧ್ಯೇ ಮತ್ತೊಂದು ವಿಚಿತ್ರವು ನಡೆಯಿತು: ವ್ಯಾಪಾರಕ್ಕಾಗಿಯೂ ಇತರ ಕೆಲಸ ಗಳಿಗಾಗಿಯೂ ಮಕ್ಕಾ ನಗರಕ್ಕೆ ಬರುತ್ತಿದ್ದವರಲ್ಲಿ ಅನೇಕರು ಮುಹಮ್ಮದನು ಬೋಧಿಸುತ್ತಿದ್ದ ಭಗವತ್ಸಂದೇಶವನ್ನು ಆದರದಿಂದಲೂ ಆಸಕ್ತಿಯಿಂದಲೂ ಲಾಲಿಸತೊಡಗಿದರು. ಇದನ್ನು ಕಂಡ ಅವನ ಶತ್ರುಪಕ್ಷದವರ ದ್ವೇಷಾಸೂಯೆಗಳಿಗೆ ಪಾರವಿಲ್ಲದಂತಾಯಿತು. ಅವರು ಮಧ್ಯಮಾರ್ಗದಲ್ಲಿ ಅಲ್ಲಲ್ಲಿ ನಿಂತು, ತಮ್ಮ ನಗರದ ಕಡೆಗೆ ಬರುತ್ತಿದ್ದವರೆಲ್ಲರಿಗೂ, ಮುಹಮ್ಮದನ ಮಾತುಗಳಿಗೆ ಕಿವಿಗೊಡಗೂಡದೆಂದು ಬೋಧಿಸತೊಡಗಿದರು. ಅವರ ಕಿರುಕುಳವು ಅಲ್ಲಿಗೇ ನಿಲ್ಲಲಿಲ್ಲ: ಅವರೆಲ್ಲರೂ ಮುಹಮ್ಮದನ ಚಿಕ್ಕಪ್ಪನ ಬಳಿಗೆ ಹೋಗಿ ಆ ಹುಚ್ಚನ ವಿಗಡತನವನ್ನು ಅವನಾದರೂ ಬಿಡಿಸಬೇಕೆಂದು ಕೇಳಿಕೊಂಡರು. ಆ ವೃದ್ಧವೀರನಿಗೆ ಮುಹಮ್ಮದನು ಬೋಧಿಸುತ್ತಿದ್ದ ಮತದಲ್ಲಿ ಶ್ರದ್ಧೆಯಿರದಿದ್ದರೂ ಅವನನ್ನು ಅನ್ಯಾಯವಾಗಿ ಶತ್ರುಪಕ್ಷದವರು ಕಾಡುತ್ತಿದ್ದುದನ್ನು ಕಂಡು ರೋಷವುಂಟಾಯಿತು. ಗುಣಪಕ್ಷಪಾತಿಯೂ, ಪರಮತ ಸಹಿಷ್ಣುತೆಯುಳ್ಳವನೂ ಆಗಿದ್ದ ಆ ಅಧರ್ಮಭೀರುವು ಕ್ರೋಧ ಕಂಪಿತ ಕಳೇಬರನಾಗಿ ತನ್ನ ಬಳಿಗೆ ಬಂದಿದ್ದವರನ್ನು ಮುಖ ಮುರಿದು ಕಳುಹಿಸಿದನು. ಅಷ್ಟೇ ಅಲ್ಲ; ಆಶುಕವಿತೆಯಲ್ಲಿ ಪರಿಣತನಾಗಿದ್ದ ಆ ವೃದ್ಧನು ತನ್ನ ಧಮನಿಯಲ್ಲಿಯೂ ತನ್ನ ವಂಶದವರ ಧಮನಿಯಲ್ಲಿಯೂ ರಕ್ತದ ಶೇಷಬಿಂದುವು ಒಂದು ಉಳಿದಿರುವವರೆಗೂ ನಿರಪರಾಧಿಗಳಿಗೆ ಪರಪೀಡೆಯನ್ನು ತಪ್ಪಿಸುವುದರಲ್ಲಿ ತಾವೆಂದಿಗೂ ಅಲಸರಾಗಿರುವುದು ಸಾಧ್ಯವಿಲ್ಲವೆಂಬ ಪದ್ಯವೊಂದನ್ನು ರಚಿಸಿ, ಸಿಂಹಗರ್ಜನೆಯಿಂದ ಅದನ್ನು ಹೇಳಿ, ತನ್ನ ಬಳಿಗೆ ಬಂದಿದ್ದವರು ಲಜ್ಜೆಯಿಂದ ಓಡಿಹೋಗುವಂತೆ ಮಾಡಿದನು. ಕೊರೈಷ್ ಮನೆತನ

ದವರು ಮುಹಮ್ಮದನನ್ನು ಹಿಂಸಿಸುತ್ತಿದ್ದ ವಿಧಾನಗಳನ್ನು ಕೇಳಿ ಬೇಸತ್ತು, ಯಾತ್ರಿಬ್ ದೊರೆಯು ಕೂಡ ಅವರ ವರ್ತನೆಯು ಅನುಚಿತ ವೆಂದೂ, ಪ್ರಾಮಾಣಿಕ ಸ್ವಭಾವದವನೆಂದು ಪ್ರಸಿದ್ಧನಾಗಿದ್ದ ಮುಹ ಮ್ಮದನು ಬೋಧಿಸುತ್ತಿದ್ದ ತತ್ತ್ವಗಳನ್ನು ಅನ್ಯ ಮತ ಸಹಿಷ್ಣುತೆಯಿಂದ ಅವರೆಲ್ಲರೂ ಲಾಲಿಸಬೇಕಾದುದೇ ನ್ಯಾಯವೆಂದೂ ಅವರಿಗೆ ಬುದ್ಧಿಯ ಮಾತುಗಳನ್ನು ಬರೆದು ಕಳುಹಿಸಿದನು. ಕೊರೈಷರ ಶಿಲಾ ಕಠಿನ ಹೃದಯದ ಮೇಲೆ ಇವು ಯಾವುದರಿಂದಲೂ ಸತ್ಪರಿಣಾಮವಾಗಲಿಲ್ಲ; ಮುಹಮ್ಮದನನ್ನು ಅವರು ಹಿಂಸಿಸುವುದು ಲೇಶ ಮಾತ್ರವೂ ಕಡಿಮೆ ಯಾಗಲಿಲ್ಲ; ಆದರೇನು? ಹಿಂಸೆ ಹೆಚ್ಚಿದಷ್ಟೂ ಮುಹಮ್ಮದನ ಹೃದ ಯವು ಹುರಿಗೂಡಿ ಪಟುವಾಯಿತು. ತನ್ನ ಹಿಂಸಕರಲ್ಲಿ ಕೂಡ ಅವನು ದ್ವೇಷ ಭಾವವನ್ನವಲಂಬಿಸದೆ ಮೃದು ವಚನಗಳಿಂದಲೇ ಅವರಿಗೂ ಧರ್ಮ ಬೋಧೆ ಮಾಡಲುಪಕ್ರಮಿಸಿದನು. ದೈವ ಸಂದೇಶದ ಬಲದಿಂದ ತಾನು ರಚಿಸಿದ್ದ **ಖುರ್ರಾನ್** ಎಂಬ ಗ್ರಂಥವನ್ನು ಅವರು ಓದಿ ಕೃತಾರ್ಥ ರಾಗಬೇಕೆಂದು ಮುಹಮ್ಮದನು ಅವರಿಗೆ ಉಪದೇಶ ಮಾಡಿದನು. ಅಹಂಕಾರದಿಂದ ಮತ್ತರಾಗಿದ್ದ ಅವರಿಗೆ ಅದು ರುಚಿಸಲಿಲ್ಲವೆಂದು ಹೇಳಬೇಕೆ?

ಮುಹಮ್ಮದನ ಅಧ್ಯವಸಾಯ ಬಲದಿಂದ ಅನೇಕರು ಅವನ ಶಿಷ್ಯ ರಾದುದನ್ನು ಕಂಡು ಅವನ ವಿರೋಧಿಗಳಿಗೆ ಮೊದಲೇ ಇದ್ದ ರೋಷವು

ಶಿಷ್ಯರಿಗೆ ಕಿರುಕುಳ

ಮತ್ತಷ್ಟು ಹೆಚ್ಚಿತು. ಸರ್ವ ಸಾಹಸ ಮಾಡಿ ಮುಹ ಮ್ಮದನ ಪ್ರಯತ್ನಗಳು ಸಫಲವಾಗದಂತೆ ಮಾಡ ಬೇಕೆಂದು ಅವರು ಛಲವನ್ನು ತೊಟ್ಟರು. ಕೊರೈಷ್ ಬುಡಕಟ್ಟಿನವರೇ ಮಕ್ಕಾ ನಗರದ ದೇವಸ್ಥಾನದ ಆಡಳಿತವನ್ನು ನೋಡು ತ್ತಿದ್ದವರು. ಅದರಿಂದ ಅವರಿಗೆ ಲಾಭವಿದ್ದುದಲ್ಲದೆ, ಅವರ ಪ್ರಾಬಲ್ಯವು ಹೆಚ್ಚುವುದಕ್ಕೂ ಕಾರಣವಾಗಿದ್ದಿತು. ಮುಹಮ್ಮದನು ಬೋಧಿಸುತ್ತಿದ್ದ ಮತವು ತಲೆಯೆತ್ತಿ, ಮುನ್ನೂರ ಅರವತ್ತು ವಿಗ್ರಹಗಳ ಪೂಜೆಯು ನಿಂತು ಹೋದರೆ, ಅವರ ಪ್ರಾಬಲ್ಯದ ಬುಡಕ್ಕೇ ಕೊಡಲಿ ಬೀಳುವಂತಿದ್ದಿತು. ಆದಕಾರಣ, ಕುಡಿಗಳನ್ನೂ ಕೊಂಬೆಗಳನ್ನೂ ಕತ್ತರಿಸಿಹಾಕಿದರೆ ಮರವೇ

ಒಣಗಿಹೋಗುವಂತೆ, ಹೊಸ ಮತದ ಅನುಯಾಯಿಗಳಿಗೆ ತಕ್ಕ ಶಿಕ್ಷೆಯನ್ನು ಮಾಡಿದಲ್ಲಿ ತಮ್ಮ ಉದ್ದೇಶವು ಈಡೇರುವುದೆಂದಾಲೋಚಿಸಿ ತಮ್ಮ ತಮ್ಮಲ್ಲಿಯೇ ಒಳಸಂಚು ಒಪ್ಪಂದಗಳನ್ನು ಮಾಡಿಕೊಂಡು ಅವರೆಲ್ಲರೂ ಒಕ್ಕಟ್ಟಾಗಿ ನಿಂತರು. ಮಹಮ್ಮದನ ಶಿಷ್ಯರಿಗೆ ಉಳಿಗಾಲವಿಲ್ಲದಂತೆ ಹಿಂಸೆಗೆ ಪ್ರಾರಂಭವಾಯಿತು: ಕೆಲವರು ಕಾರಾಗೃಹದಲ್ಲಿ ಬಂಧನಕ್ಕೊಳಗಾದರು; ಕೆಲವರು ಆಹಾರ ದೊರೆಯದಂತಾಗಿ ವ್ಯಥೆಗೆ ಸಿಕ್ಕಿದರು; ಮತ್ತೆ ಕೆಲವರಿಗೆ ಪ್ರಹಾರಗಳು ಬಿದ್ದುವು. ಕೆಲವರನ್ನು ಮರಳುಕಾಡಿಗೊಯ್ದು, ಅಲ್ಲಿ ಬಿಸಿಲಿನಿಂದ ಕಾದು ಕೆಂಡವನ್ನುಗುಳುವಂತಿದ್ದ ಮರಳಿನ ರಾಶಿಯ ಮೇಲೆ ಮಲಗಿಸಿ, ಹೊಸ ಮತವನ್ನು ಬಿಡದೆ ಹೋದರೆ ನೀರು ನೆರಳಿಲ್ಲದೆ ಅವರು ಸಾಯುವಂತೆ ಮಾಡುವೆವೆಂದು ಹೆದರಿಸಿದರು; ಬಿಲಾಲ್ ಎಂಬವನನ್ನು ಕೆಂಡದಂತೆ ಕಾದುಹೋಗಿದ್ದ ಮರಳಿನ ಮೇಲೆ ಮಲಗಿಸಿ, ಅವನು ಮೇಲಕ್ಕೇಳದಂತೆ ಅವನ ಎದೆಯ ಮೇಲೆ ದೊಡ್ಡ ಕಲ್ಲನ್ನು ಹೇರಿ, "ನೀನು ಸಾಯುವ ವರೆಗೂ ಅಥವಾ, ಇಸ್ಲಾಂ ಮತವನ್ನು ಬಿಟ್ಟೆನೆಂದು ಹೇಳುವ ವರೆಗೂ ಹೀಗೆಯೇ ಬಿದ್ದಿರಬೇಕು" ಎಂದು ಹೆದರಿಸಿದರು. ಆ ಶ್ರದ್ಧಾಳುವು ತನಗೊದಗಿದ ಆ ಚಿತ್ರಹಿಂಸೆಯನ್ನು ಸಹಿಸಿಕೊಂಡು, ತನಗೆ ಅಂತರ್ದಾಹವುಂಟಾಗಿ ನಾಲಗೆಯ ದ್ರವವೇ ಒಣಗಿಹೋದುದನ್ನೂ ಲಕ್ಷ್ಯವಾಡದೆ, "ದೇವರು ಒಬ್ಬನೇ, ದೇವರು ಒಬ್ಬನೇ" ಎಂದು ಸಾರಿ ಸಾರಿ ಹೇಳುತ್ತಿದ್ದನು. ಅನೇಕ ದಿನಗಳು ಹೀಗೆ ಕಳೆದು, ಕೊನೆಗೆ ಅವನು ಮರಣೋನ್ಮುಖನಾದರೂ ತಾನು ಇಸ್ಲಾಂ ಮತವನ್ನು ಬಿಡುವುದಾಗಿ ಹೇಳದೆ ಅಹರ್ನಿಶಿಯಲ್ಲಿಯೂ ಭಗವಂತನನ್ನು ಧ್ಯಾನಿಸುತ್ತಿದ್ದನು. ಕೊನೆಗೆ, ಮಹಮ್ಮದನ ಶಿಷ್ಯನಾದ ಅಬ್ದುಲ್ಲಾನು ಅವನನ್ನು ಈ ಕಷ್ಟದಿಂದ ಬಿಡುಗಡೆ ಮಾಡಿದನು. ನಿರಪರಾಧಿಗಳಾದ ತನ್ನ ಶಿಷ್ಯರಿಗುಂಟಾಗುತ್ತಿದ್ದ ಚಿತ್ರಹಿಂಸೆಗಳನ್ನು ನೋಡಿ ನೋಡಿ ಮಹಮ್ಮದನು ವ್ಯಥೆಯಿಂದ ಕೊರಗುತ್ತ, ಕಷ್ಟಪಡುತ್ತಿರುವವರಿಗೆ ಸಹಾಯ ಮಾಡಿ ಅವರನ್ನು ಕಷ್ಟದಿಂದ ಬಿಡಿಸಲು ಸಾಮರ್ಥ್ಯವಿಲ್ಲದೆ, ಆ ಕರುಣಾಹೃದಯನು ಇಹಲೋಕದಲ್ಲಿಯೇ ನರಕಯಾತನೆಯನ್ನನುಭವಿಸಿದನು.

ಕೊನೆ ಕೊನೆಗೆ, ಮುಹಮ್ಮದನ ಶಿಷ್ಯರು ಜೀವದಿಂದುಳಿದಿರುವ ಭರವಸೆಯೇ ತಪ್ಪಿಹೋಗುತ್ತ ಬರಲು, ಅವರೆಲ್ಲರನ್ನೂ ನೆರೆಯ ರಾಜ್ಯವಾದ ಅಬಿಸಿನಿಯಾ ದೇಶಕ್ಕೆ ವಲಸೆಹೋಗಿರೆಂದು ಸಲಹೆ ಹೇಳಿದನು. ಬಹು ಮಂದಿ ಶಿಷ್ಯರು ತಮ್ಮ ಗುರುವಿನ ಸಲಹೆಯನ್ನು ಕೇಳಿ, ಸ್ವಲ್ಪ ಕಾಲ ತಲೆಯನ್ನು ಮರೆಯಿಸಿಕೊಂಡಿದ್ದು ಮತ್ತೆ ಮಕ್ಕಾ ನಗರಕ್ಕೆ ಬರೋಣವೆಂದು ನಿರ್ಧರಿಸಿ, ಅಬಿಸಿನಿಯಾ ದೇಶಕ್ಕೆ ಹೊರಟುಹೋದರು. ಅಲ್ಲಿಯ ದೊರೆಯು ಕ್ರೈಸ್ತ ಮತದವನಾದರೂ ಅನ್ಯ ಮತ ದ್ವೇಷಿಯಲ್ಲ. ಗುಣ ಪಕ್ಷಪಾತಿಯಾದ ಆ ದೊರೆಯು ಆಗಂತುಕರನ್ನು ಆದರದಿಂದ ಬರಮಾಡಿಕೊಂಡು ಹಳೆಯ ಮತವನ್ನು ಅವರು ಬಿಟ್ಟುದಕ್ಕೇನು ಕಾರಣವೆಂದು ಕೇಳಿದನು. ಅಬೂತಾಲಿಬನ ಮಗನಾದ ಜಾಫರನು ದೊರೆಯೊಡನೆ, "ಮಹಾ ಸ್ವಾಮಿ! ನಾವು ಅಜ್ಞಾನಾಂಧಕಾರದಲ್ಲಿ ಬಿದ್ದು ಪಶುಗಳಂತೆ ಜೀವಿಸುತ್ತಿದ್ದೆವು; ಸತ್ತ ಮೃಗಗಳ ಮಾಂಸವನ್ನು ತಿನ್ನುತ್ತಿದ್ದೆವು; ಹೊಲಸು ನುಡಿಗಳನ್ನು ಆಡುತ್ತಿದ್ದೆವು; ದಯೆಯೂ ದಾಕ್ಷಿಣ್ಯವೂ ಅತಿಥಿ ಸತ್ಕಾರವೂ ನಮ್ಮ ಮನಸ್ಸಿನಿಂದ ದೂರವಾಗಿದ್ದುವು; ಬಲಿಷ್ಠರು ಯಾರೋ ಅವರ ಕೈಯೇ ಮೇಲಾಗಿ, ಇತರರೆಲ್ಲರೂ ಅವರ ಅನುವರ್ತಿಗಳಾಗಿರಬೇಕೆಂಬುದು ಹೊರತು ಮತ್ತೆ ಯಾವ ನಿಯಮ ನಿಬಂಧನೆಗಳೂ ನಮಗೆ ತಿಳಿದಿರಲಿಲ್ಲ. ಇಂತಹ ದುಸ್ಸ್ಥಿತಿಯಿಂದ ನಮ್ಮನ್ನು ಪಾರು ಮಾಡಿ ಉದ್ಧರಿಸಲು ಭಗವಂತನು ಒಬ್ಬ ಮಹಾ ಪುರುಷನನ್ನು ನಮಗೆ ಅನುಗ್ರಹಿಸಿದನು. ಆತನು ಸತ್ಯವಾದಿ, ಪ್ರಾಮಾಣಿಕನು, ಪರಿಶುದ್ಧ ಹೃದಯನು. ಭಗವಂತನು ಒಬ್ಬನೇ ಹೊರತು ಇಬ್ಬರಿಲ್ಲ ಎಂಬ ಘನವಾದ ತತ್ತ್ವವನ್ನು ಆತನು ನಮಗೆ ಬೋಧಿಸಿದನು. ವರುಷದಲ್ಲಿ ದಿನಕ್ಕೊಬ್ಬ ದೇವರೆಂಬ ನಂಬಿಕೆಯಿಂದ ನಾವು ಪೂಜಿಸುತ್ತಿದ್ದ ಮುನ್ನೂರರವತ್ತು ವಿಗ್ರಹಗಳ ಆರಾಧನೆಯು ತಪ್ಪು ನಡೆವಳಿಕೆಯೆಂಬುದನ್ನು ಆತನು, ನಮಗೆ ಮನವಟ್ಟು ಮಾಡಿ ಕೊಟ್ಟನು. ನಮ್ಮ ನೆರೆಹೊರೆಯವರ ಹಕ್ಕು ಬಾಧ್ಯತೆಗಳನ್ನು ಮನ್ನಿಸಿ, ನಾವೆಲ್ಲರೂ ಸತ್ಯ ಭಾಷಿಗಳಾಗಿಯೂ ಕರುಣ ಹೃದಯರಾಗಿಯೂ ಇರಬೇಕೆಂದು ಆತನು ನಮಗೆ ವಿವೇಕವನ್ನು ಹೇಳಿದನು. ದುರಾಚಾರಗಳಿಗೆ

ವಿಮುಖರಾಗಿಯೂ, ಪರೋಪಕಾರಿಗಳಾಗಿಯೂ ಇದ್ದುಕೊಂಡು ಭಗವಂತನ ಧ್ಯಾನ ಮಾಡುವುದನ್ನು ನಾವು ಆತನಿಂದ ಕಲಿತು ಧನ್ಯರಾದೆವು. ನಮ್ಮ ದೇಶದವರು ಕೆಲವರಿಗೆ ನಮ್ಮ ನಡತೆಯು ಸರಿಬೀಳದೆ ನಾವು ಹಳೆಯ ಮತವನ್ನೇ ಮತ್ತೆ ಅವಲಂಬಿಸಿ ವರ್ತಿಸುವಂತೆ ಮಾಡಬೇಕೆಂಬ ಉದ್ದೇಶದಿಂದ ಅವರು ನಮ್ಮನ್ನು ಹಿಂಸಿಸತೊಡಗಿದರು. ಅಲ್ಲಿ ನಮಗೆ ಕ್ಷೇಮವಿಲ್ಲವೆಂದು ಬಗೆದು ತಮ್ಮ ರಾಜ್ಯಕ್ಕೆ ನಾವೆಲ್ಲರೂ ಬಂದಿದ್ದೇವೆ. ತಾವು ನಮ್ಮೆಲ್ಲರನ್ನೂ ಶತ್ರುಗಳ ಕಾಟದಿಂದ ಪಾರು ಮಾಡಿ ಸುರಕ್ಷಿತವಾಗಿ ಕಾಪಾಡಬೇಕೆಂದು ಬೇಡಿಕೊಳ್ಳುವೆವು'' ಎಂದು ಅರಿಕೆ ಮಾಡಿಕೊಂಡನು. ಮುಹಮ್ಮದನ ಶತ್ರು ಪಕ್ಷದವರೂ ಸುಮ್ಮನಿರಲಿಲ್ಲ; ಅಬಿಸಿನಿಯಾ ದೊರೆಯು ಮರೆ ಹೊಕ್ಕಿದ್ದವರನ್ನು ತಮ್ಮ ವಶಕ್ಕೆ ಬಿಟ್ಟುಕೊಡಬೇಕೆಂದು ಅವರೆಲ್ಲರೂ ಆ ದೊರೆಯನ್ನು ಕೇಳಿದರು. ಆದರೆ ಕೊಟ್ಟ ಭಾಷೆಗೆ ತಪ್ಪದವನಾದ ಆ ದೊರೆಯು ತನಗೆ ಶರಣಾಗತರಾಗಿ ಬಂದಿದ್ದವರಲ್ಲಿ ಒಂದು ಪಿಳ್ಳೆಯನ್ನೂ ಬಿಟ್ಟುಕೊಡಲಿಲ್ಲ. ಆದುದರಿಂದ, ಕೊರೈಷ್ ಬುಡಕಟ್ಟಿನವರ ಪ್ರಾರ್ಥನೆಯು ಸಾರ್ಥಕವಾಗದೆ ಅವರೆಲ್ಲರೂ ಅವಮಾನದಿಂದ ತಲೆತಗ್ಗಿಸುವಂತಾಯಿತು.

**ಆಸೆಯ ಬಲೆ**

ಶತ್ರು ಪಕ್ಷದವರು ಮತ್ತೆ ಸಂಧಾನ ಕೌಶಲವನ್ನು ತೋರಿಸತೊಡಗಿದರು. ದುರಾಶೆಯ ಬಲೆಯನ್ನೊಡ್ಡಿ ಬೇಟೆಯನ್ನು ಹಿಡಿಯಲಿಚ್ಛಿಸಿ ಅವರಲ್ಲಿ ಕೆಲವರು ಮುಹಮ್ಮದನ ಬಳಿಗೆ ಬಂದು, ''ನೀನು ಈ ಪ್ರಯತ್ನವನ್ನು ಬಿಡು; ಇದರಿಂದ ಧನಾರ್ಜನೆಯು ನಿನ್ನ ಉದ್ದೇಶವಾಗಿದ್ದರೆ, ನಮ್ಮಲ್ಲಿ ಯಾರೊಬ್ಬರ ಬಳಿಯಲ್ಲಿಯೂ ಇಲ್ಲದಷ್ಟು ಧನವನ್ನು ನಾವೆಲ್ಲರೂ ನಿನಗೆ ಶೇಖರಮಾಡಿ ಕೊಡುವೆವು; ಘನತೆ ಗೌರವಗಳನ್ನು ಸಂಪಾದಿಸಬೇಕೆಂಬ ಉದ್ದೇಶವಿದ್ದರೆ ನೀನೇ ನಮ್ಮೆಲ್ಲರಿಗೂ ಅಧಿನಾಯಕನೆಂದು ನಾವೆಲ್ಲರೂ ಒಪ್ಪಿಕೊಂಡು ನಿನ್ನನ್ನು ಗೌರವಿಸುವೆವು; ನೀನು ಈ ಪ್ರಯತ್ನವನ್ನು ಬಿಟ್ಟುಬಿಡು. ಅಥವಾ, ರಾಜ್ಯವನ್ನು ಕಟ್ಟಬೇಕೆಂಬ ಆಸೆಯು ನಿನಗಿದ್ದರೆ ನಿನ್ನನ್ನು ನಮ್ಮ ದೊರೆಯಾಗಿ ಸ್ವೀಕರಿಸಿ ಒಲೈಸುವೆವು; ಅಲ್ಲದೆ, ಯಾವುದಾದರೂ ಪಿಶಾಚಿಯು ನಿನ್ನಲ್ಲಿ ಆವೇಶವಾಗಿದ್ದು

ಈ ಕೆಲಸಗಳನ್ನು ನಿನ್ನಿಂದ ನಡೆಯಿಸುತ್ತಿದ್ದರೆ, ನಾವು ಭೂತ ವೈದ್ಯರಿಗೆ ಯಥೇಷ್ಟವಾಗಿ ಹಣವನ್ನು ಕೊಟ್ಟು, ಅದನ್ನು ಓಡಿಸುವೆವು'' ಎಂದು ಮೊರೆಯಿಟ್ಟರು. ಮುಹಮ್ಮದನು ಅಣು ಮಾತ್ರವೂ ತನ್ನ ಮನಸ್ಸನ್ನು ಬದಲಾಯಿಸದೆ ಹಿಂದಿನಂತೆಯೇ ಖುರಾನಿನ ಮೇರೆಗೆ ಧರ್ಮಬೋಧೆ ಮಾಡತೊಡಗಿದನು. ಅಲ್ಲದೆ, ಅವನು ಅವರೆಲ್ಲರಿಗೂ ಖುರಾನನ್ನು ತೋರಿಸಿ, ಅದರಲ್ಲಿ ತಾನು ತಿಳಿಸಿದ್ದ ದೈವಿಕ ಸಂದೇಶಕ್ಕನುಸಾರವಾಗಿ ವರ್ತಿಸುವುದರಿಂದಲೇ ಅವರೆಲ್ಲರೂ ಉದ್ಧಾರವಾಗಿ, ಪಾಪದಿಂದ ಪಾರಾಗ ಬೇಕೆಂದು ತಿಳಿಸಿದನು.

ಕೌತುಕ ಪ್ರದರ್ಶನ ಮಾಡಲು ಬಿನ್ನಹ

ಅವರೆಲ್ಲರೂ ಇದನ್ನು ಕೇಳಿ ಸುಮ್ಮನಾಗಲಿಲ್ಲ. ಮುಹಮ್ಮದನು ಭಗವಂತನ ಸಂದೇಶವನ್ನು ಸಾರುತ್ತಿದ್ದುದು ನಿಜವಾಗಿದ್ದಪಕ್ಷಕ್ಕೆ, ಆತನು ತಮಗೆ ಅತಿಮಾನುಷವಾದ ಕೌತುಕವನ್ನು ಪ್ರದರ್ಶಿಸುವುದಾದರೆ, ಆತನ ಸಂದೇಶವನ್ನು ತಾವು ನಂಬುವುದಾಗಿ ಬಿನ್ನವಿಸಿದರು. ಇದನ್ನು ಕೇಳಿ ಮುಹಮ್ಮದನು ಅವರೆಲ್ಲರಿಗೂ ನಿಸ್ಸಂಶಯವಾದ ಪ್ರತ್ಯುತ್ತರವನ್ನು ಹೀಗೆ ಹೇಳಿದನು:—''ಭಗವಂತನು ಅತಿಮಾನುಷವಾದ ಕೌತುಕಗಳನ್ನು ಪ್ರದರ್ಶಿಸುವುದಕ್ಕಾಗಿ ನನ್ನನ್ನು ಕಳುಹಿಸಿಲ್ಲ; ನಿಮ್ಮೆಲ್ಲರಿಗೂ ಧರ್ಮಬೋಧೆ ಮಾಡುವುದಕ್ಕಾಗಿಯೇ ನನ್ನನ್ನು ಕಳುಹಿಸಿದ್ದಾನೆ. ಮನುಷ್ಯರ ಮಧ್ಯದಲ್ಲಿದ್ದುಕೊಂಡು ಮನುಷ್ಯರಿಗೆ ಕರ್ತವ್ಯವನ್ನು ಬೋಧಿಸುವುದಕ್ಕಾಗಿ ಮನುಷ್ಯ ರೂಪದಲ್ಲಿಯೇ ನನ್ನನ್ನು ಕಳುಹಿಸಿರುವನು. ದೇವದೂತರು ಇಲ್ಲಿಗೆ ಬರುವಹಾಗಿದ್ದರೆ, ಆತನು ತನ್ನ ದೂತನನ್ನೇ ನೇರವಾಗಿ ಇಲ್ಲಿಗೆ ಕಳುಹಿಸಿ ಅವನಿಂದ ನಿಮಗೆ ತತ್ತ್ವಬೋಧೆ ಮಾಡಿಸುತ್ತಿದ್ದನು. ಭಗವಂತನ ಗುಟ್ಟು ನನಗೆ ತಿಳಿದಿದೆಯೆಂದಾಗಲಿ, ಭಗವಂತನ ಸಂಪದವು ನನಗೆ ಅನುಗ್ರಹಿಸಲ್ಪಟ್ಟಿದೆಯೆಂದಾಗಲಿ, ನಾನು ದೇವಲೋಕದವನೆಂದಾಗಲಿ ನಾನು ಎಂದೂ ಹೇಳಿದವನಲ್ಲ. ಭಗವಂತನ ದಯೆಯಿಲ್ಲದೆ ನನ್ನ ದೇಹವನ್ನೇ ನನ್ನ ಸ್ವಾಧೀನದಲ್ಲಿಟ್ಟುಕೊಳ್ಳಲಾರದ ನಾನು ಎಷ್ಟರವನು? ಭಗವಂತನ ಸಂದೇಶವನ್ನು ಮನುಷ್ಯರಿಗೆ ಸಾರಿ ಹೇಳುವ ಸಾಮಾನ್ಯನು ನಾನು. ಕರುಣಾಮಯನೂ ಸರ್ವಶಕ್ತನೂ

ಆಗಿರುವ ಭಗವಂತನನ್ನು ಒಟ್ಟು ಸೃಷ್ಟಿಯೇ ಕೊಂಡಾಡುತ್ತಲಿದೆ. ಅವನು ಪವಿತ್ರನೂ ವಿವೇಕಿಯೂ ಆಗಿದ್ದಾನೆ. ಕೌತುಕಗಳು ಬೇಕೆ? ನಿಮ್ಮ ಸುತ್ತಲೂ ಇರುವ ಸಾವಿರಾರು ಕೌತುಕಗಳನ್ನು ಕಣ್ಣುತುಂಬ ನೋಡಿರಿ: ಸೂರ್ಯ ಚಂದ್ರರೂ, ಲೆಕ್ಕವಿಲ್ಲದಷ್ಟು ನಕ್ಷತ್ರಗಳೂ ಕ್ರಮ ವಾಗಿ ಉದಯಾಸ್ತಮಯವಾಗುತ್ತ ನೀಲಾಕಾಶದಲ್ಲಿ ಬೆಳಗುತ್ತಿರುವ ನೊಬಗನ್ನು ನೋಡಿರಿ. ಮಳೆಯು ಹನಿಗಳು ಕೋಟ್ಯಂತರವಾಗಿ ಭೂಮಿಯ ಮೇಲೆ ಬಿದ್ದು ಪೈರು ಪಚ್ಚೆಗಳಿಗೆ ಜೀವ ಕಳೆ ತುಂಬುವುದನ್ನು ನೋಡಿರಿ. ಸುವರ್ಣ ಕಾಂತಿಯಿಂದ ಕಂಗೊಳಿಸುವ ಖರ್ಜೂರ ಫಲ ಗಳನ್ನು ನೋಡಿರಿ. ಇವೆಲ್ಲವೂ ಕೌತುಕಗಳೇ ಅಲ್ಲವೆ? ಭಗವಂತನಿರು ವುದಕ್ಕೆ ನಿಮಗೆ ಕುರುಹುಗಳು ಬೇಕೆ? ದಡ್ಡರೆಂದರೆ ನೀವೇ ಸರಿ; ಏಕೆಂದರೆ, ಒಟ್ಟು ಸೃಷ್ಟಿಯೇ ಈ ಕುರುಹುಗಳಿಂದ ತುಂಬಿದೆ. ನಿಮ್ಮ ನಿಮ್ಮ ದೇಹ ರಚನೆಯನ್ನೇ ನೋಡಿಕೊಳ್ಳಿರಿ; ಅದು ಎಷ್ಟು ಅದ್ಭುತ ವಾಗಿದೆ! ದೇಹದ ನಾನಾ ಅಂಗಗಳೂ ಎಷ್ಟು ಕ್ರಮವಾಗಿ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತವೆ! ಹಗಲು ಇರುಳುಗಳು, ಜನನ ಮರಣ ಗಳು, ಸ್ವಪ್ನ ಸುಷುಪ್ತಿಗಳು, ಮಳೆ ಗಾಳಿಗಳು, ಕತ್ತಲೆ ಬೆಳಕುಗಳು, ಫಲ ಪುಷ್ಪಗಳು, ಈ ಪ್ರಪಂಚ ವ್ಯಾಪಾರದ ವೈವಿಧ್ಯತೆಯ ಮಧ್ಯದಲ್ಲಿ ಕಂಡುಬರುವ ಸಾಮರಸ್ಯತೆಯಿಂದ ತುಂಬಿದ ಏಕೀ ಭಾವವು, ಮನುಷ್ಯ ತ್ವಕ್ಕೆ ಸೇರಿ ಬಗೆ ಬಗೆಯಾಗಿರುವ ಜನಗಳ ಪರಸ್ಪರ ಸಂಬಂಧವು— ಇವೆಲ್ಲವನ್ನೂ ನೋಡಿದರೆ ಸೃಷ್ಟಿ ಕಲಾ ಕೋವಿದನಾದ ಭಗವಂತನೊಬ್ಬ ನಿರುವನೆಂಬುದು ಮನಸ್ಸಿಗೆ ಗೊತ್ತಾಗುವುದಿಲ್ಲವೆ? ಇವಕ್ಕಿಂತಲೂ ಹೆಚ್ಚಿನ ಕುರುಹುಗಳು ಬೇಕೆ? ಇವಕ್ಕಿಂತಲೂ ಹೆಚ್ಚಿನ ಕೌತುಕ ಗಳೇಕೆ?''

ಮೂರ್ಖರಾದ ಶತ್ರು ಪಕ್ಷದವರು ಇದೊಂದನ್ನೂ ಗ್ರಹಿಸಲಿಲ್ಲ. ಗೋರ್ಕಲ್ಲ ಮೇಲೆ ಸುರಿದ ಮಳೆಯಂತೆ, ಮುಹಮ್ಮದನ ಉಪದೇಶವು ಅವರ ಮನಸ್ಸಿಗೆ ಹಿಡಿಯಲಿಲ್ಲ; ಮತ್ತೊಮ್ಮೆ ಮುಹ ಮ್ಮದನಿಗೆ ಅವನ ಚಿಕ್ಕಪ್ಪನಿಂದ ಬುದ್ಧಿವಾದವನ್ನು ಹೇಳಿಸಲು ಮಾಡಿದ ಪ್ರಯತ್ನವೂ ವ್ಯರ್ಥವಾಯಿತು.

**ಮೂರ್ಖತನ**

ಎಷ್ಟು ಕಷ್ಟಗಳು ಬಂದರೂ ಬರಲೆಂಬುದಾಗಿ ಕಲ್ಲು ಮನಸ್ಸಿನಿಂದ ನಿಂತಿದ್ದ ಮುಹಮ್ಮದನ ಮೇಲೆ ಅವರ ಪ್ರಯತ್ನಗಳು ಯಾವುವೂ ನಡೆಯದೆ ಹೋದುವು. ಅಷ್ಟೇ ಅಲ್ಲ; ಶತ್ರು ಪಕ್ಷದವರಲ್ಲಿ ಅಗ್ರ ಗಣ್ಯನಾದ ಓಮರನೆಂಬವನೇ ಮುಹಮ್ಮದನ ಶಿಷ್ಯನಾದನು. ಮುಹಮ್ಮದನನ್ನು ಕೇವಲ ದ್ವೇಷಿಸುತ್ತಿದ್ದವನು ಹೀಗಾಗಲು ಒಂದು ಸಂದರ್ಭವೊದಗಿತು: ಒಮ್ಮೆ ಓಮರನು ತನ್ನ ತಂಗಿಯ ಮನೆಗೆ ಹೋಗಿದ್ದಾಗ ಅಲ್ಲಿ ಒಂದು ಪುಸ್ತಕವನ್ನು ಓದುತ್ತಿದ್ದರು; ಅದರಲ್ಲಿಯ ವಿಷಯಗಳು ಓಮರನ ಮನಸ್ಸಿಗೆ ಬಹಳ ಅಚ್ಚುಮೆಚ್ಚಾದುವು. ಒಂದು ಅಧ್ಯಾಯವು ಮುಗಿಯುವವರೆಗೂ ಅವನು ಅದನ್ನು ಮನಸ್ಸಿಟ್ಟು ಕೇಳಿ ಅದರಲ್ಲಿದ್ದ ಉಪದೇಶ ವಾಕ್ಯಗಳ ಸ್ವಾರಸ್ಯವನ್ನರಿತು ತಲೆದೂಗಿ, ಅದು ಯಾವ ಪುಸ್ತಕವೆಂದು ಕೇಳಿದನು. ಅದು ಮುಹಮ್ಮದನು ರಚಿಸಿದ್ದ ಖುರಾನೆಂದು ಹೇಳಲು, ಅವನಿಗೆ ಬಹಳ ಆಶ್ಚರ್ಯವಾಯಿತು. ವಿಚಾರ ಶೂನ್ಯನಾಗಿ ತಾನು ಮುಹಮ್ಮದನನ್ನು ಕಾಡಿದುದಕ್ಕೆ ಅವನಿಗೆ ಬಹಳ ವ್ಯಥೆಯುಂಟಾಗಿ, ಪಶ್ಚಾತ್ತಾಪದಿಂದ ಅವನ ಮನಸ್ಸು ಖಿನ್ನವಾಯಿತು. ಕೂಡಲೆ ಅವನು ಮುಹಮ್ಮದನ ಬಳಿಗೆ ಓಡಿಬಂದು ತನ್ನನ್ನೂ ಶಿಷ್ಯವರ್ಗಕ್ಕೆ ಸೇರಿಸಿಕೊಂಡು ಉದ್ಧರಿಸಬೇಕೆಂದು ಮುಹಮ್ಮದನನ್ನು ಭಕ್ತಿಯಿಂದ ಬೇಡಿಕೊಂಡನು. ವೀರಶ್ರೇಷ್ಠನಾದ ಓಮರನು ತನ್ನ ಪಕ್ಷಕ್ಕೆ ಸೇರಿದುದರಿಂದ ಮುಹಮ್ಮದನಿಗೆ ಒಂದು ಆನೆಯ ಬಲವು ದೊರೆತಂತಾಯಿತು. ವಿವೇಕಿಗಳಾದ ಅಬ್ದುಲ್ಲಾ, ಹಂಜ, ಅಲೀ ಮುಂತಾದವರ ಜೊತೆಗೆ ಓಮರನೂ ಶಿಷ್ಯನಾಗಿ ಸೇರಿದುದು ಮುಹಮ್ಮದನ ಮತಕ್ಕೆ ಶಕ್ತಿಯುಂಟಾಯಿತು. ಮುಹಮ್ಮದನಿಗೆ ಹೊಸ ಹೊಸ ಶಿಷ್ಯರು ದೊರೆತುದನ್ನೂ, ಅತ್ತ ಅಬಿಸಿನಿಯಾಕ್ಕೆ ಹೋಗಿದ್ದ ತಮ್ಮ ಪಕ್ಷದವರು ನಾಚಿಕೆಯಿಂದ ಹಿಂದಿರುಗಿದುದನ್ನೂ ಕಂಡು ಶತ್ರು ಪಕ್ಷದವರಿಗೆ ರೋಷವುಂಟಾಯಿತು. ಹಾಗಾದರೂ ಮುಹಮ್ಮದನ ಶತ್ರುಗಳು ತಮ್ಮ ಮೂರ್ಖತನವನ್ನು ಬಿಡಲಿಲ್ಲ; ಮುಹಮ್ಮದನನ್ನೂ ಅವನ ಮನೆತನದವರನ್ನೂ ಅವನ ಶಿಷ್ಯರನ್ನೂ ಧ್ವಂಸಮಾಡಬೇಕೆಂದು ನಿರ್ಧರಮಾಡಿದರು. ಇದು ನಡೆದುದು

ಕ್ರಿಸ್ತ ಶಕ ೬೧೬ನೆಯ ಸಂವತ್ಸರದಲ್ಲಿ. ಅಲ್ಲಿಂದ ಮುಂದೆ ಮೂರು ವರುಷಗಳ ಕಾಲ ಮುಹಮ್ಮದನ ಕಡೆಯವರು ಬಹಳ ಹಿಂಸೆಯನ್ನನುಭವಿಸಬೇಕಾಯಿತು. ಶತ್ರು ಪಕ್ಷದವರು ಅವರೊಡನೆ ವಿವಾಹ ಮುಂತಾದ ವ್ಯವಹಾರಗಳನ್ನು ಬಿಟ್ಟು ಯಾವಾಗಲೂ ಅವರನ್ನು ಹಿಂಸಿಸುತ್ತಲೇ ಇದ್ದುದರಿಂದ ಮುಹಮ್ಮದನ ಕಡೆಯವರು ಊರಿನಿಂದಾಚೆಗಿದ್ದ ಒಂದು ಗಿರಿದುರ್ಗವನ್ನು ಸೇರಿದರು. ಶತ್ರುಗಳು ಅದಕ್ಕೆ ಮುತ್ತಿಗೆ ಹಾಕಿ ದುರ್ಗದೊಳಗಿದ್ದ ಜನರನ್ನು ಅಸಾಧಾರಣವಾದ ಕಷ್ಟಕ್ಕೆ ಗುರಿಮಾಡಿ ಕ್ರಿಸ್ತ ಶಕ ೬೧೯ನೆಯ ಸಂವತ್ಸರದ ವರೆಗೂ ಮುತ್ತಿಗೆಯನ್ನು ತೆಗೆಯಲಿಲ್ಲ. ಕೊನೆಗೂ ಮುಹಮ್ಮದನಾಗಲಿ ಅವನ ಅನುಯಾಯಿಗಳಾಗಲಿ ತಮ್ಮ ಮತವನ್ನು ಬಿಡಲು ಒಪ್ಪದೆ ಹೋಗಲು, ಶತ್ರುಗಳು ತಮ್ಮ ಘೋರ ಕೃತ್ಯಕ್ಕೆ ತಾವೇ ನಾಚಿಕೊಂಡರು. ಜುಬೈರನೆಂಬೊಬ್ಬ ಪುಣ್ಯಾತ್ಮನೂ, ಹಿಷಾಮನೆಂಬೊಬ್ಬ ಆಪದ್ಬಾಂಧವನೂ ಮುಹಮ್ಮದನ ಸಹಾಯಕ್ಕೆ ಬಂದು ಗಿರಿದುರ್ಗದಲ್ಲಿದ್ದವರೆಲ್ಲರೂ ಮಕ್ಕಾ ನಗರಕ್ಕೆ ಮತ್ತೆ ಬರಲು ಅವಕಾಶವನ್ನು ಕಲ್ಪಿಸಿದರು.

ಬಂಧು ವಿಯೋಗ

ಮೂರನೆಯ ವರುಷವು (ಎಂದರೆ, ಕ್ರಿಸ್ತ ಶಕ ೬೨೦ನೆಯ ಸಂವತ್ಸರವು) ಮುಹಮ್ಮದನಿಗೆ ಬಂಧು ವಿಯೋಗ ದುಃಖವನ್ನೊದಗಿಸಿತು : ಮುಹಮ್ಮದನನ್ನು ಬಾಲ್ಯದಿಂದಲೂ ಆದರದಿಂದ ಪೋಷಿಸಿ, ಶತ್ರು ಬಾಧೆಯಿಂದ ಸಂರಕ್ಷಿಸಿ, ಕೇವಲ ಬೆಂಬಲವಾಗಿದ್ದ ಅವನ ಚಿಕ್ಕಪ್ಪನು ಮೃತನಾದನು. ಇದಾದ ಸ್ವಲ್ಪ ಕಾಲದಲ್ಲಿಯೇ ಖದೀಜಳೂ ಇಹಲೋಕವನ್ನು ಬಿಟ್ಟಳು. ಪತ್ನೀ ವಿಯೋಗವಂತೂ ಮುಹಮ್ಮದನಿಗೆ ಅಪಾರವಾದ ಶೋಕವನ್ನುಂಟು ಮಾಡಿತು. ಇತರರೊಬ್ಬರೂ ಮುಹಮ್ಮದನ ಸಂದೇಶವನ್ನು ನಂಬದೆ ಇದ್ದಾಗ, ಅವನಿಗೆ ತಕ್ಕಷ್ಟು ಮನಸ್ಥೈರ್ಯವೂ ಇಲ್ಲದೆ ಇದ್ದಾಗ, ಅವನಿಗೆ ಧೈರ್ಯ ಹೇಳಿ ಅವನ ಮೊಟ್ಟಮೊದಲನೆಯ ಶಿಷ್ಯಳಾದವಳೇ ಖದೀಜೆ. ಮುಹಮ್ಮದನು ಧನಿಕನಾದುದು ತನ್ನಿಂದಲೇ ಎಂಬ ಬಿಂಕದಿಂದ ಖದೀಜೆಯು ಒಂದು ದಿನವೂ ಬೀಗಿದವಳಲ್ಲ. ಪತಿಯನ್ನು ಗೌರವಿಸಿ ಪ್ರೀತಿಯಿಂದ ಕಾಣುವುದು ತನ್ನ ಕರ್ತವ್ಯವೆಂದು ಆಕೆ

ಭಾವಿಸಿದ್ದಳು. ಇಂತಹ ಪ್ರಿಯ ಪತ್ನಿಯೂ ಚಿಕ್ಕಪ್ಪನೂ ಇಬ್ಬರೂ ಮೃತರಾದುದರಿಂದ ಮುಹಮ್ಮದನಿಗುಂಟಾದ ದುಃಖವನ್ನು ವರ್ಣಿಸಲು ಸಾಧ್ಯವಿಲ್ಲ.

## ನಾಲ್ಕನೆಯ ಅಧ್ಯಾಯ

## ಮಕ್ಕಾ ನಗರ ಪರಿತ್ಯಾಗ

ಅಬೂತಾಲಿಬನ ಮರಣಾನಂತರ ಮುಹಮ್ಮದನಿಗೆ ಶತ್ರುಗಳ ಕಾಟವು ಇಮ್ಮಡಿಯಾಯಿತು. ಮುಹಮ್ಮದನ ಪಕ್ಷಪಾತಿಯೂ ಸದ್ಗುಣ ಮಂಡಿತನೂ ಆಗಿದ್ದ ಆತನು ಜೀವಂತನಾಗಿರುವ ವರೆಗೂ ಅವರ ವಿಗಡತನಕ್ಕೆ ಸ್ವಲ್ಪ ತಡೆಯಿದ್ದಿತು. ಅವನು ಮೃತನಾದ ಬಳಿಕ ಅವರಿಗೆ ನಿರಾತಂಕವಾಯಿತು. ಮುಹಮ್ಮದನು ಬೋಧಿಸುತ್ತಿದ್ದ ಇಸ್ಲಾಂ ಮತದ ಗುರುತೇ ಮಕ್ಕಾ ನಗರದಲ್ಲಿಲ್ಲದಂತೆ ಮಾಡಲು ತಮಗೆ ಒಳ್ಳೆಯ ಸಮಯವು ದೊರೆತಿತೆಂದು ಬಗೆದು ಅವರೆಲ್ಲರೂ ತಮ್ಮ ಘಾತುಕತನಕ್ಕೆ ಪ್ರಾರಂಭಿಸಿದರು. ಈ ಬಗೆಯ ದುಸ್ಥಿತಿಯೊದಗಿದುದಕ್ಕಾಗಿ ಮುಹಮ್ಮದನಿಗೆ ಬಹಳ ವ್ಯಥೆಯುಂಟಾದರೂ ಅವನು ನಿರಾಶ ಹೃದಯನಾಗದೆ, ಇದ್ದುದರಲ್ಲಿ ಧೈರ್ಯತಂದುಕೊಂಡು ಭಗವತ್ಸೇವೆಗೆ ಬದ್ಧ ಕಂಕಣನಾಗಿ ನಿಂತನು. ವಿಘ್ನಗಳು ಒದಗಿದಷ್ಟೂ ಅವುಗಳನ್ನು ಅಡಗುಮೆಟ್ಟಿ ಕಾರ್ಯ ಸಾಧನೆಗಾಗಿ ಉತ್ಸಾಹದಿಂದ ಸೆಟ್ಟಗೆ ನಿಲ್ಲುವುದೇ ಮಹಾತ್ಮರ ಲಕ್ಷಣ. ಮಕ್ಕಾ ನಗರದಲ್ಲಂತು ಮುಹಮ್ಮದನ ಬೋಧನೆಯನ್ನು ಕೇಳುವ ಹೊಸಬರೇ ಇಲ್ಲದಂತಾಯಿತು ; ತಾಯೆಫ್ ನಗರದವರಾದರೂ ತನ್ನ ಸಂದೇಶವನ್ನು ಲಾಲಿಸಬಹುದೆಂದಾಲೋಚಿಸಿ, ಅವನು ತನ್ನ ಆಪ್ತ ಸೇವಕನಾದ ಜೈದನೊಡನೆ ಅಲ್ಲಿಗೆ ಹೋಗಿ, ಆ ನಾಗರಿಕರಿಗೆ ತಮ್ಮ ದುರಾಚಾರಗಳನ್ನು ಬಿಟ್ಟು ನೂತನ ವಿಧದಲ್ಲಿ ಭಗವಂತನನ್ನು ಆರಾಧಿಸಬೇಕೆಂದು ಉಪದೇಶಿಸಿದನು. ಅವರೆಲ್ಲರೂ ರೇಗಿ, ತಮ್ಮ ಸಂಪ್ರದಾಯಗಳನ್ನು ಬಿಡುವಂತೆ ಬೋಧಿಸಲು ಮುಹಮ್ಮದನಿಗೆ ಅಧಿಕಾರವಿಲ್ಲವೆಂದು ಹೇಳಿ, ಅವನನ್ನು ನಗರದಿಂದಾಚೆಗೆ ಓಡಿಸಿದರು. ತುಂಟರು ಗುಂಪು ಸೇರಿ ಅವನನ್ನು ಮೂದಲಿಸಿ ಹಾಸ್ಯಮಾಡಿ ಗದರಿಸುತ್ತ ಕಲ್ಲುಗಳನ್ನು ಬೀರಿ ಓಡಿಸಿಕೊಂಡು ಹೋದರು. ಅಷ್ಟರಲ್ಲಿ ಕತ್ತಲೆಯಾಗಲು, ಅವರೆಲ್ಲರೂ ತಮ್ಮ ಊರಿಗೆ ಹಿಂದಿರುಗಿದರು. ಮುಹ

ಶತ್ರುಗಳ ಕಾಟ

ಮ್ಮದನಿಗೆ ಅವರೆಸೆದ ಕಲ್ಲುಗಳು ತಗುಲಿ ಗಾಯಗಳಾಗಿ ರಕ್ತವು ಹರಿಯುತ್ತಿದ್ದಿತು. ಓಡಿಹೋಡಿ ಆಯಾಸದಿಂದ ಅವನು ಬಳಲಿಹೋಗಿದ್ದನು. ಕಲ್ಲುಗಳನ್ನೂ ಮುಳ್ಳುಗಳನ್ನೂ ತುಳಿದು ತುಳಿದು ಮುಂದಕ್ಕೆ ಒಂದು ಹಜ್ಜೆಯನ್ನಿಡುವುದೂ ಅವನಿಗೆ ಅಸಾಧ್ಯವಾಯಿತು. ಬಾಯಾರಿಕೆಯಿಂದ ಅವನ ನಾಲಗೆಯು ಒಣಗಿಹೋಗಿದ್ದಿತು. ಸಮೀಪದಲ್ಲಿದ್ದ ಖರ್ಜೂರದ ಮರಗಳ ಕೆಳಗೆ ಕುಳಿತು, ದುಃಖ ಕಾತರನಾಗಿದ್ದ ಮುಹಮ್ಮದನು ಭಗವಂತನನ್ನುದ್ದೇಶಿಸಿ, "ದೇವ! ನಾನು ದೈನ್ಯ ಭಾವದಿಂದ ನಿನ್ನ ಮರೆ ಹೊಕ್ಕು ನನ್ನ ಸಂಕಟವನ್ನು ನಿನಗೆ ಹೇಳಿಕೊಳ್ಳುತ್ತಿದ್ದೇನೆ. ನನ್ನ ಆಶೆಯೂ ಉತ್ಸಾಹವೂ ಮಹತ್ತರವಾಗಿದ್ದರೂ ಯಾರೂ ನನ್ನನ್ನು ಲಕ್ಷಿಸುವಂತಿಲ್ಲ. ಎಲೈ ಕರುಣಾಳುವೆ! ಎಲೈ ಅಶಕ್ತ ಪೋಷಕನೆ! ನನ್ನನ್ನು ಕೈಬಿಡಬೇಡ; ಪರಕೀಯರಾಗಲಿ ಶತ್ರುಗಳಾಗಲಿ ನನ್ನನ್ನು ಘಾಸಿಪಡಿಸಲು ಅವಕಾಶ ಕೊಡಬೇಡ. ನಿನ್ನಲ್ಲಿ ನಾನು ಅಪರಾಧಿಯಾಗದಿದ್ದರೆ ಸಾಕು; ಆಗ ನಾನು ಕ್ಷೇಮವಾಗಿಯೇ ಇರಬಹುದು. ನೀನೇ ನನಗೆ ದಿಕ್ಕು. ಅಜ್ಞಾನಾಂಧಕಾರವನ್ನು ಹೋಗಲಾಡಿಸುವ ನಿನ್ನ ಜ್ಞಾನ ಪ್ರಭೆಯಿಂದಲೇ ನನಗೆ ಸನ್ಮಾರ್ಗವು ಗೋಚರಿಸಬೇಕು. ನಿನ್ನ ದಯೆಯಿಂದಲೇ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ನನಗೆ ಸುಖ ಶಾಂತಿಗಳು ಲಭಿಸಬೇಕು. ಪ್ರಭುವೇ! ನಿನ್ನ ಕೃಪಾ ಕಟಾಕ್ಷದಿಂದ ನನ್ನನ್ನು ನೋಡಿ, ನನ್ನ ಕಷ್ಟಗಳನ್ನು ಕೊನೆಗಾಣಿಸು. ನೀನು ಬಿಟ್ಟು ನನಗೆ ಮತ್ತಾರೂ ಸಹಾಯಕರಿಲ್ಲ. ದೇವ! ರಕ್ಷಿಸು, ರಕ್ಷಿಸು, ನನ್ನನ್ನು ರಕ್ಷಿಸು" ಎಂದು ಮೊರೆಯಿಟ್ಟನು.

ಮುಹಮ್ಮದನು ಮತ್ತೆ ಮಕ್ಕಾ ನಗರಕ್ಕೆ ಹೋಗಿ ಮೊದಲಿನಂತೆಯೇ ಪರಿತಾಪಕ್ಕೊಳಗಾಗಿ ಎಲ್ಲ ವಿಧದ ಕಷ್ಟಗಳನ್ನೂ ಅನುಭವಿಸಿದನು. ಅವನು ಮಕ್ಕಾ ನಗರದ ಜನರೊಡನೆ ಸೇರುವುದನ್ನೇ ಬಿಟ್ಟು ಪರಸ್ಥಳದಿಂದ ಅಲ್ಲಿಗೆ ಬಂದವರಿಗೆ ಆಗಾಗ ಬೋಧನೆ ಮಾಡುತ್ತ, ಅವರಿಗಾದರೂ ತನ್ನ ಮತದಲ್ಲಿ ಆದರ ಹುಟ್ಟಿ, ಅವರ ಮೂಲಕ ಇತರರು ತನ್ನ ಹೊಸ ಮತದ ತತ್ತ್ವಗಳನ್ನು ತಿಳಿಯಬಹುದೆಂದೆಣಿಸಿದನು. ಶತ್ರುಗಳ ಬಾಧೆಯ ಮಧ್ಯದಲ್ಲಿಯೂ ಅವನು ಉತ್ಸಾಹ ಹೀನನಾಗಿ

ಕಳೆಗುಂದಲಿಲ್ಲ. ಕ್ರಿಸ್ತ ಶಕ ೬೨೦ನೆಯ ಸಂವತ್ಸರದಲ್ಲಿ ಯಾತ್ರಿಬ್ ನಗರದಿಂದ ಅಲ್ಲಿಗೆ ಬಂದಿದ್ದ ಆರು ಮಂದಿ ಅವನ ಉಪದೇಶವನ್ನು ಸ್ವೀಕರಿಸಿ ಮಹಮ್ಮದೀಯರಾದರು. ಇದನ್ನು ಕಂಡು ಮಹಮ್ಮದನ ಮನಸ್ಸಿಗೆ ಬಹಳ ಉತ್ಸಾಹದೋರಿ, ದೈವಾಜ್ಞೆಯಿಂದ ತಾನು ಹಿಡಿದಿದ್ದ ಕಾರ್ಯವು ಪರಿಣಾಮದಲ್ಲಿ ಸಫಲವಾಗದಿರದೆಂಬ ಅಚಲವಾದ ಭರವಸೆಯುಂಟಾಯಿತು. ಆದರೂ, ಆಗಿನ ಸ್ಥಿತಿಯಲ್ಲಿ ಅದು ಕಸ್ನಡಿಯೊಳಗಿನ ಗಂಟಿನಂತಿದ್ದಿತು. ಮೃತ್ಯುವಿನ ದವಡೆಯಲ್ಲಿದ್ದಂತಿದ್ದ ಮನುಷ್ಯನು ಎಂದಿಗಾದರೂ ತನ್ನ ಕಾರ್ಯವು ಸಫಲವಾದೀತೆಂಬ ನಿರೀಕ್ಷಣೆಯನ್ನೂ, ಭಗವಂತನು ತನ್ನನ್ನು ಕೈಬಿಡುವುದಿಲ್ಲವೆಂಬ ನಂಬಿಕೆಯನ್ನೂ ಇಟ್ಟುಕೊಂಡು ಕಾರ್ಯಪಟುವಾಗಿ ಕಾಲ ಹರಣ ಮಾಡುವುದೆಂದರೆ ಸಾಮಾನ್ಯವೆ? ಅಂತಹ ವಿಷಮ ಸಮಯದಲ್ಲಿಯೂ ಮಹಮ್ಮದನು, "ನಾನು ಒಂದು ವೇಳೆ ಹೆಚ್ಚು ಕಾಲ ಬದುಕಿರದಿದ್ದರೂ ನಾನು ಹರಡಿದ ಸತ್ಯವಾಕ್ಯಗಳು ಸುಳ್ಳನ್ನು ಬಡಿದೋಡಿಸಿ ಅಜ್ಞಾನಾಂಧಕಾರವನ್ನು ತೊಲಗಿಸುವ ಜೀವಜ್ಯೋತಿಗಳಾಗಿ ನಿಲ್ಲುವ ದಿನವು ಬಂದೇ ಬರುತ್ತದೆ" ಎಂದು ಖುರಾನಿನಲ್ಲಿ ಬರೆದಿಟ್ಟನು. ಶತ್ರುಗಳ ಬಾಧೆಯಿಂದ ಸಂತಪ್ತನಾಗಿ ಜೀವಕ್ಕೆ ಹೊಣೆಯನ್ನು ಬೇಡುತ್ತಿರುವ ಸ್ಥಿತಿಯಲ್ಲಿದ್ದ ಮನುಷ್ಯನು ಹೀಗೆ ಬರೆದಿಡುವುದೆಂದರೆ ಅದ್ಭುತ ಪ್ರಸಂಗವಲ್ಲವೆ?

ಶತ್ರುಗಳನ್ನು ಮತ್ತಷ್ಟು ರೋಷಭೀಷಣರನ್ನಾಗಿ ಮಾಡುವ ಸನ್ನಿವೇಶವು ಕ್ರಿಸ್ತ ಶಕ ೬೨೨ನೆಯ ಸಂವತ್ಸರದಲ್ಲೊದಗಿತು. ಎರಡು ವರುಷಗಳ ಹಿಂದೆ ಮಹಮ್ಮದೀಯ ಮತವನ್ನು ಸ್ವೀಕರಿಸಿದ ಮತಾಭಿಮಾನಿಗಳಾದ ಆರು ಮಂದಿಯ ಬೋಧನೆಯಿಂದ ಮಾರನೆಯ ವರುಷ ಯಾತ್ರಿಬ್ ನಗರದಿಂದ ಮತ್ತೆ ಆರು ಮಂದಿ ಮಹಮ್ಮದನ ಬಳಿಗೆ ಬಂದು ಅವನ ಶಿಷ್ಯರಾದರು. ಈ ಹನ್ನೆರಡು ಮಂದಿಯೂ ತಮ್ಮ ಸದ್ಗುರುವಿನ ಮಾಹಾತ್ಮ್ಯೆಯನ್ನು ಸಾರುತ್ತ ತಮ್ಮೂರಿಗೆ ಹಿಂದಿರುಗಿದರು. ಒಂದು ವರುಷ ಕಳೆಯುವ ವೇಳೆಗೆ ಅವರು ಎಪ್ಪತ್ತೈದು ಮಂದಿಯೊಡನೆ ಮತ್ತೆ ಮಕ್ಕಾ ನಗರಕ್ಕೆ ಬಂದು, ಯಾವ ಗಿರಿವನ ಮಧ್ಯದಲ್ಲಿ ಆ ಹನ್ನೆರಡು

ಮುಂದಿಯೂ ಹಿಂದೆ ಇಸ್ಲಾಂ ಮತವನ್ನು ಸ್ವೀಕರಿಸಿದ್ದರೋ, ಅದೇ ಗಿರಿವನ ಮಧ್ಯದಲ್ಲಿ—ಅಕಾಬಾ ಪರ್ವತದ ತಪ್ಪಲಿನಲ್ಲಿ—ಸಭೆ ಸೇರಿದರು. ಮುಹಮ್ಮದನ ಸಮೀಪ ಬಂಧುವಾದ ಅಬ್ಬಾಸ್ ಎಂಬಾತನು ಅಂದಿನ ಸಭಾಧ್ಯಕ್ಷನಾದನು. ವಿನೀತ ಭಾವದಿಂದ ಕೂಡಿದ ಮುಹಮ್ಮದನು ಅಂದು ಪ್ರೇಕ್ಷಕನಾಗಿ ಸಭೆಯಲ್ಲಿ ಸುಮ್ಮನೆ ಕುಳಿತಿದ್ದನು. ಆಗಂತುಕರೆಲ್ಲರೂ ಇಸ್ಲಾಂ ಮತಕ್ಕೆ ಸೇರಬೇಕೆಂಬುದೇ ಅಂದಿನ ಸಭೆಯ ಉದ್ದೇಶ. ಆದರೆ, ಸಭಾಧ್ಯಕ್ಷನು ಆ ಮತಕ್ಕೆ ಸೇರಿದವನಲ್ಲದಿದ್ದರೂ, ಇಸ್ಲಾಂ ಮತವು ಅಭಿವೃದ್ಧಿಯಾಗಬೇಕೆಂಬುದು ವಿಶಾಲ ಮತಿಯಾದ ಆತನ ಹಾರೈಕೆ. ಇಸ್ಲಾಂ ಮತಕ್ಕೆ ಸೇರಿ ಮುಹಮ್ಮದನನ್ನು ಯಾತ್ರಿಬ್ ನಗರಕ್ಕೆ ಕರೆದೊಯ್ಯುವ ಸಂಕಲ್ಪದಿಂದ ಮಕ್ಕಾ ನಗರಕ್ಕೆ ಬಂದಿದ್ದ ಆಗಂತುಕರೆಲ್ಲರೂ ಉತ್ಸಾಹದಿಂದ ಸಭಾಧ್ಯಕ್ಷನ ಭಾಷಣವನ್ನು ಆಲಿಸಿ ಕೇಳಿದರು. ಇಸ್ಲಾಂ ಮತವನ್ನವಲಂಬಿಸಿ ಮುಹಮ್ಮದನನ್ನು ಯಾತ್ರಿಬ್ ನಗರಕ್ಕೆ ಕರೆದುಕೊಂಡುಹೋಗುವುದರ ದೆಸೆಯಿಂದ ಅವರೆಲ್ಲರಿಗೂ ಕಷ್ಟನಷ್ಟಗಳುಂಟಾಗಿ ಅಪಾಯವು ಒದಗಬಹುದೆಂದು ಆತನು ಎಚ್ಚರಿಕೆ ಹೇಳಿದನು. ಅಭಿಮಾನಶಾಲಿಗಳಾದ ಅವರೆಲ್ಲರೂ ಮುಕ್ತಕಂಠದಿಂದ ತಾವು ಸಾಧಕ ಬಾಧಕಗಳೆಲ್ಲವನ್ನೂ ಸಮಗ್ರವಾಗಿ ಪರ್ಯಾಲೋಚಿಸಿರುವೆವೆಂದೂ, ಎಂತಹ ವಿಪತ್ತು ಬಂದೊದಗಿದರೂ ಅದನ್ನು ಎದುರಿಸಲು ಸಿದ್ಧವಾಗಿರುವೆವೆಂದೂ ತಿಳಿಸಿದರು. ಇಷ್ಟಾದರೂ ಮುಹಮ್ಮದನು ಮೌನವಾಗಿ ಕುಳಿತಿದ್ದುದನ್ನು ಕಂಡು ಅವರಿಗೆ ತಾಳ್ಮೆ ತಪ್ಪಿ, "ಗುರುದೇವ ! ಮೌನ ಮುದ್ರೆಯನ್ನೊಡೆದು ವಾಕ್ಯ ಸುಧೆಯನ್ನನುಗ್ರಹಿಸು. ನಿನಗಾಗಿಯೂ ನೀನು ನಂಬಿರುವ ಭಗವಂತನಿಗಾಗಿಯೂ ನಾವು ಯಾವ ವಿಧದ ಪ್ರತಿಜ್ಞೆ ಮಾಡುವುದಕ್ಕೂ ಸಿದ್ಧರಾಗಿದ್ದೇವೆ. ನಿನ್ನಂತೆಯೇ ನಾವೂ ಭಗವಂತನನ್ನಾರಾಧಿಸಿ ಧನ್ಯರಾಗುತ್ತೇವೆ" ಎಂದು ಹೇಳಿದರು. ಮುಹಮ್ಮದನು ಖುರಾನಿನ ವಾಕ್ಯಗಳನ್ನು ವಿವರಿಸಿ ಹೇಳಿ, ಪ್ರಪಂಚಕ್ಕೆ ಏಕಮಾತ್ರಾವಲಂಬನವಾಗಿ ಅದ್ವಿತೀಯನಾಗಿರುವ ಭಗವಂತನನ್ನು ಆರಾಧಿಸಿ ಎಲ್ಲರೂ ಧನ್ಯರಾಗಬೇಕೆಂಬುದೇ ಇಸ್ಲಾಂ ಮತದ ತತ್ತ್ವವೆಂದು ಬೋಧಿಸಿದನು. ಅವಕ್ಕನುಗುಣವಾಗಿ ತಾವೆಲ್ಲರೂ ನಡೆಯುವೆ

ವೆಂದೂ, ಮಹಮ್ಮದನ ಆಜ್ಞೆಗಳೆಲ್ಲವನ್ನೂ ತಾವು ನೆರವೇರಿಸುವೆವೆಂದೂ, ಆತನನ್ನು ಸುರಕ್ಷಿತವಾಗಿ ನೋಡಿಕೊಳ್ಳುವ ಪ್ರಯತ್ನದಲ್ಲಿ ತಮ್ಮ ಪ್ರಾಣವನ್ನಾದರೂ ಅರ್ಪಿಸುವೆವೆಂದೂ ಅವರೆಲ್ಲರೂ ಪ್ರತಿಜ್ಞೆ ಮಾಡಿದರು. ಆದರೂ ಅವರಿಗೆ ಎರಡು ಸಂಶಯಗಳು ಬಂದುವು: ಇಸ್ಲಾಂ ಮತಕ್ಕಾಗಿ ಆವಶ್ಯಕತೆಯೊದಗಿದಾಗ ತಮ್ಮ ಪ್ರಾಣವನ್ನೇ ಸಮರ್ಪಿಸಿದರೆ ತಮಗೆ ಬರುವ ಪ್ರತಿಫಲವೇನು? ಎಂಬುದೇ ಮೊದಲನೆಯದು. ಪರಲೋಕದಲ್ಲಿ ಲಭಿಸುವ ಸೌಖ್ಯವೇ ಅದರ ಪ್ರತಿಫಲವೆಂದು ಮಹಮ್ಮದನು ಉತ್ತರ ಹೇಳಿ ಅವರನ್ನು ಸಮಾಧಾನಪಡಿಸಿದನು. ಉಚ್ಚ ದಸೆಯೊದಗಿದಾಗ ಮಹಮ್ಮದನು ತಮ್ಮ ಉಪಕಾರವನ್ನು ಮರೆತು ತನ್ನ ಕಡೆಯವರನ್ನು ಸೇರಿಕೊಳ್ಳಲು ಮತ್ತೆ ಮಕ್ಕಾ ನಗರಕ್ಕೆ ಹೋಗಬಹುದಲ್ಲವೆ? ಎಂಬುದು ಎರಡನೆಯ ಸಂಶಯ. ಇದಕ್ಕೆ ಮಹಮ್ಮದನು, "ಇಲ್ಲ, ನಾನೆಂದಿಗೂ ಹಾಗೆ ಮಾಡೆನು. ನೀವೆಲ್ಲರೂ ನನಗೆ ಆಪ್ತರಾದ ಅನುಬಂಧಿಗಳು. ನಿಮ್ಮ ಪ್ರಾಣವೇ ನನ್ನ ಪ್ರಾಣ, ನನ್ನ ಪ್ರಾಣವೇ ನಿಮ್ಮ ಪ್ರಾಣ" ಎಂದು ಹೇಳಿ ಆ ಸಂಶಯವನ್ನೂ ನಿವಾರಣೆ ಮಾಡಿದನು. ಅವರೆಲ್ಲರೂ ಮಹಮ್ಮದನ ಕೈಮೇಲೆ ಕೈಹಾಕಿ ತಮ್ಮ ಪ್ರತಿಜ್ಞೆಯನ್ನು ನೆರವೇರಿಸುವುದಾಗಿ ಭಾಷೆಯಿತ್ತು, ತಮ್ಮೂರಿಗೆ ಬರಬೇಕೆಂದು ಮಹಮ್ಮದನನ್ನು ಪ್ರಾರ್ಥಿಸಿ, ಎಲ್ಲರೂ ಹೊರಡಲನುವಾದರು. ಆದರೆ ಕುಸುಮ ಮಧ್ಯದಲ್ಲಿ ಕೀಟವಿದ್ದುದನ್ನು ಅವರು ಯಾರೂ ನೋಡಲಿಲ್ಲ: ಮಹಮ್ಮದನ ಶತ್ರು ಪಕ್ಷಕ್ಕೆ ಸೇರಿದ ಗೂಢಚಾರನೊಬ್ಬನು ತಮ್ಮ ಮಧ್ಯದಲ್ಲಿ ಸೇರಿಕೊಂಡಿದ್ದು ಮರೆಯಾದುದು ಅವರಲ್ಲೊಬ್ಬರಿಗೂ ಗೋಚರವಾಗಲಿಲ್ಲ.

**ವಧೆಯ ಪ್ರಯತ್ನ**

ಸಭೆಯು ಸಮರ್ಪಕವಾಗಿ ಜರುಗಿದುದನ್ನು ಕೇಳಿ ಮಹಮ್ಮದನ ಶತ್ರುಗಳೆಲ್ಲರೂ ರೋಷದಿಂದ ಉನ್ಮತ್ತರಾದರು. ತಾಯಿಬೇರನ್ನು ಕಡಿದುಹಾಕಿದರೆ ಮರವು ತನಗೆ ತಾನೇ ಒಣಗಿ ಹೋಗುವುದೆಂದು ಭಾವಿಸಿ, ಕರ್ತವ್ಯವನ್ನು ಯೋಚಿಸುವುದಕ್ಕಾಗಿ ಅವರೂ ಒಂದು ಸಭೆಯನ್ನು ಸೇರಿಸಿದರು. ಮಹಮ್ಮದನನ್ನು ಮಕ್ಕಾ ನಗರದಿಂದ ಓಡಿಸಿಬಿಡುವುದು

ಉತ್ತಮವೆ ಅಥವಾ, ಅವನನ್ನು ಯಾವಜ್ಜೀವವೂ ಸೆರೆಯಲ್ಲಿಡುವುದು ಉತ್ತಮವೆ ಎಂಬ ಪ್ರಶ್ನೆಗಳು ಆ ಸಭೆಯಲ್ಲಿ ಹುಟ್ಟಿದುವು. ಇವೆರಡೂ ಸಭಿಕರಿಗೆ ಸೂಕ್ತ ತೋರದೆ ಮುಹಮ್ಮದನನ್ನು ಕೊಲ್ಲುವುದೇ ಉತ್ತಮವೆಂದು ಕೊನೆಗೆ ನಿರ್ಧರಿಸಿದರು. ಆ ಬಳಿಕ ಅವನನ್ನು ಹೇಗೆ ಕೊಲ್ಲಬೇಕೆಂಬ ಚರ್ಚೆ ಹುಟ್ಟಿ, "ತಮ್ಮಲ್ಲಿ ಯಾವನಾದರೂ ಒಬ್ಬನು ಅವನನ್ನು ಕೊಂದರೆ, ಅಪರಾಧಿಯು ಯಾವನೆಂಬುದು ಹೊರಬಿದ್ದು ಮುಹಮ್ಮದನ ಕಡೆಯವರಿಂದ ಅವನಿಗೂ ಅವನ ಬಂಧುಗಳಿಗೂ ಅಪಾಯವು ಬಂದೊದಗಬಹುದು; ಆದರೆ, ಹಲವು ಮನೆತನಗಳವರು ಒಟ್ಟಿಗೆ ಸೇರಿ ಒಂದೊಂದು ಮನೆತನದವರೂ ಒಬ್ಬೊಬ್ಬ ಪ್ರತಿನಿಧಿಯನ್ನು ಕಳುಹಿಸಿ ಮುಹಮ್ಮದನನ್ನು ಕೊಲ್ಲಿಸುವುದಾದರೆ ಇಂತಹ ಭಯಕ್ಕೆ ಅವಕಾಶವಿರದು. ಆದಕಾರಣ ಹೀಗೆ ಮಾಡುವುದೇ ಸರಿ" ಎಂದು ಸಿದ್ಧಾಂತವಾಯಿತು. ಅವರೆಲ್ಲರೂ ಒಂದು ದಿನ ರಾತ್ರಿ ಮುಹಮ್ಮದನ ಮನೆಯ ಮುಂಭಾಗದಲ್ಲಿ ಸಶಸ್ತ್ರರಾಗಿ ನಿಂತಿದ್ದು, ಮುಹಮ್ಮದನು ಹೊರಗೆ ಬಂದೊಡನೆಯೇ ಅವನನ್ನು ಕೊಲ್ಲಬೇಕೆಂದು ಉದ್ದೇಶಿಸಿದ್ದರು. ಈ ಒಳಸಂಚನ್ನು ಅರಿತಿದ್ದ ಮುಹಮ್ಮದನು ಹಸಿರು ಬಣ್ಣದ ತನ್ನ ಉಡುಪನ್ನು ಅಲೀಗೆ ತೊಡಿಸಿ ಅವನನ್ನು ತನ್ನ ಮಂಚದ ಮೇಲೆ ಮಲಗಿಸಿ ತಾನು ಮನೆಯ ಹಿಂಭಾಗದಿಂದ ಪಲಾಯನ ಮಾಡಿ ಅಬ್ದುಲ್ಲಾನ ಮನೆಯನ್ನು ಸೇರಿದನು. ಕೂಡಲೆ ಅವರಿಬ್ಬರೂ ತಲೆತಪ್ಪಿಸಿಕೊಂಡು ಮಕ್ಕಾ ನಗರವನ್ನು ಬಿಟ್ಟು ಹೊರಟುಹೋದರು.

ಬೇಟೆಯು ಹೀಗೆ ತಪ್ಪಿಸಿಕೊಂಡು ಹೋದ ವೃತ್ತಾಂತವನ್ನು ಕೇಳಿ ಶತ್ರು ಪಕ್ಷದವರೆಲ್ಲರೂ ರೋಷದಿಂದ ಉನ್ಮತ್ತರಾಗಿ ಮುಹಮ್ಮದನಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ನಿಶ್ಚಯಿಸಿ, ಮುಹಮ್ಮದನನ್ನು ಹಿಡಿದು ತಂದವರಿಗೆ ಬಹುಮಾನವನ್ನು ಕೊಡುವುದಾಗಿ ಪ್ರಕಟಿಸಿದರು. ಮುಹಮ್ಮದನೂ ಅವನೊಡನಿದ್ದ ಅಬ್ದುಲ್ಲಾನೂ ಒಮ್ಮೆ ಶತ್ರುಗಳ ಕೈಗೆ ಸಿಕ್ಕುವಂತಹ ವಿಷಮ ಸ್ಥಿತಿಯೂ ಒದಗಿತು. ಆಗ ಅಬ್ದುಲ್ಲಾನು ಭಯದಿಂದ ನಡುಗುತ್ತ, "ಅಯ್ಯೋ! ನಾವು ಇಬ್ಬರೇ ಇದ್ದೇವಲ್ಲಾ!" ಎಂದು ಆರ್ತಸ್ವರದಿಂದ ಹೇಳಲು, ಮುಹಮ್ಮದನು ಅಚಲವಾದ ದೈವಭಕ್ತಿ

ಯಿಂದ, “ಇಲ್ಲ, ನಾವು ಮೂವರು ಇದ್ದೇವೆ: ಸರ್ವವ್ಯಾಪಿಯಾದ ಭಗವಂತನೂ ನಮ್ಮೊಡನಿದ್ದಾನೆ” ಎಂದು ಉತ್ತರ ಕೊಟ್ಟನು. ಭಗವಂತನ ದಯೆಯಿಂದಲೇ ಅವರು ಶತ್ರುಗಳ ಕೈಗೆ ಸಿಕ್ಕದೆ ತಲೆ ತಪ್ಪಿಸಿಕೊಂಡು ಓಡಿಹೋಗಿ ಒಂದು ಗುಹೆಯಲ್ಲಿ ಮೂರು ದಿನ ಅಡಗಿಕೊಂಡಿದ್ದರು. ಅಬ್ದುಲ್ಲಾನ ಮಗಳು ಅವರಿಬ್ಬರಿಗೂ ಆ ಮೂರು ದಿನಗಳೂ ರಾತ್ರಿಯ ವೇಳೆ ಆಹಾರವನ್ನು ತಂದುಕೊಡುತ್ತಿದ್ದಳು. ಮೂರನೆಯ ದಿನ ರಾತ್ರಿ ಅವರಿಬ್ಬರೂ ಬಹಳ ಕಷ್ಟಪಟ್ಟು ಎರಡು ಒಂಟೆಗಳನ್ನು ಸಂಪಾದಿಸಿ ಯಾತ್ರಿಬ್ ನಗರದ ಕಡೆಗೆ ಹೊರಟರು. ಇದರ ಸುಳಿವನ್ನರಿತ ಕೆಲವರು, ಮುಹಮ್ಮದನನ್ನು ಹಿಡಿದರೆ ತಮಗೆ ಬಹುಮಾನವು ದೊರೆಯುವುದೆಂಬ ಆಸೆಯಿಂದ, ಅವರನ್ನು ಅಟ್ಟಿಕೊಂಡು ಓಡಿದರು. ಅವರಲ್ಲಿ ಕುದುರೆಯ ಸವಾರನೊಬ್ಬನು ಮುಹಮ್ಮದನನ್ನು ಮುಟ್ಟಬಂದರೂ ದೈವವಶದಿಂದ ಅವನಿಗೆ ತೊಂದರೆ ಕೊಡದೆಹೋದುದು ಮಾತ್ರವಲ್ಲದೆ ಅವನ ದೈವಭಕ್ತಿಯನ್ನೂ ಸಾತ್ವಿಕತೆಯನ್ನು ಸೂಚಿಸುವ ಮುಖಭಾವವನ್ನು ಕಂಡು, ಅವನ ಕಲ್ಲೆದೆಯೂ ಕರಗಿ ಪಶ್ಚಾತ್ತಾಪ ಹುಟ್ಟಿ, ಕ್ಷಮಾಪಣೆಯನ್ನು ಬೇಡಿ ಹೊರಟುಹೋದನು.

ಅಬ್ದುಲ್ಲಾನಿಗೆ ಅಬೂಬಕರ್ ಎಂಬ ರೂಢಿಯಾದ ಮತ್ತೊಂದು ಹೆಸರಿದ್ದಿತು. ಮುಹಮ್ಮದನೂ ಅಬೂಬಕರನೂ ಅಲ್ಲಿಂದ ಮುಂದೆ ಪ್ರಯಾಣ ಮಾಡಿ ಮೂರು ದಿನಗಳನಂತರ ಯಾತ್ರಿಬ್ ನಗರದ ಸರಹದ್ದಿಗೆ ಸೇರಿದ ಕೋಬಾ ಎಂಬ ಹಳ್ಳಿಗೆ ತಲುಪಿದರು. ಮಾರ್ಗಾಯಾಸದಿಂದ ಬಳಲಿಹೋಗಿದ್ದುದರಿಂದ ಮುಂದೆ ಹೋಗಲಾರದೆ ಅವರು ಆ ಹಳ್ಳಿಯಲ್ಲಿಯೇ ಇಳಿದು ಅಲ್ಲಿಯ ಪ್ರಾಕೃತಿಕ ಸೌಂದರ್ಯಕ್ಕೆ ಬೆರಗಾಗಿ ಅಲ್ಲಿಯೇ ಕೆಲವು ದಿನಗಳನ್ನು ಕಳೆದರು. ಆ ವೇಳೆಗೆ ಅಲೀಯೂ ಅಲ್ಲಿಗೆ ಬಂದು ಸೇರಿದನು. ಮುಹಮ್ಮದನು ತಲೆ ತಪ್ಪಿಸಿಕೊಂಡು ಹೋದ ರೋಷವನ್ನು ಶತ್ರುಗಳು ಹಿಂದುಳಿದಿದ್ದ ಅಲೀಯ ಮೇಲೆ ತೀರಿಸಿಕೊಂಡರೂ, ಅಲೀಯು ಕೆಚ್ಚೆದೆಯ ಶೂರನಾಗಿದ್ದುದರಿಂದ, ಶತ್ರುಗಳ ಕೈಯಿಂದ ತಪ್ಪಿಸಿಕೊಂಡು ಮಕ್ಕಾದಿಂದ ಹೊರಟು ಹಗಲು ಹೊತ್ತು ಗಿರಿಗಹ್ವರಗಳಲ್ಲಡಗಿಕೊಂಡಿದ್ದು ರಾತ್ರಿಯ ವೇಳೆಯೇ ಪಯಣ

ಮಾಡುತ್ತ ಕೋಬಾ ಗ್ರಾಮವನ್ನು ಸೇರಿದನು. ಕೆಲವು ದಿನಗಳು ಕಳೆದ ಬಳಿಕ, ಯಾತ್ರಿಬ್ ನಗರದಲ್ಲಿದ್ದ ಮುಹಮ್ಮದನ ಶಿಷ್ಯರು ಕೋಬಾ ಗ್ರಾಮಕ್ಕೆ ಬಂದು, ಅವನನ್ನು ಅಟ್ಟಹಾಸದಿಂದ ಮೆರೆವಣಿಗೆ ಮಾಡಿಕೊಂಡು ತಮ್ಮೂರಿಗೆ ಕರೆದುಕೊಂಡು ಹೋದರು. ಕ್ರಿಸ್ತ ಶಕ ೬೨೨ನೆಯ ಸಂವತ್ಸರದ ಜೂಲೈ ತಿಂಗಳು ೨ನೆಯ ತಾರೀಖಿನ ದಿನ ಮುಹಮ್ಮದನು ಯಾತ್ರಿಬ್ ನಗರವನ್ನು ಸೇರಿದನು. ಅಂದಿನಿಂದ **ಹಿಜಿರಾ** ಎಂಬ ಮುಹಮ್ಮದೀಯ ಶಕವು ಪ್ರಾರಂಭವಾಯಿತು. ಅಂದಿನಿಂದ ಯಾತ್ರಿಬ್ ನಗರವೇ ಮುಹಮ್ಮದನ ವಾಸಸ್ಥಾನವಾಯಿತು.

# ಐದನೆಯ ಅಧ್ಯಾಯ

## ಉನ್ನತಿಯ ಅಂಕುರ

ಮಹಮ್ಮದನು ಯಾತ್ರಿಬ್ ನಗರವನ್ನು ಸೇರಿದ ಬಳಿಕ ಅವನ ಉನ್ನತಿಯ ಕಾಲವು ಸಮೀಪಿಸಿತೆಂದು ಹೇಳಬಹುದು. ಅಲ್ಲಿಯ ಜನರೆಲ್ಲರೂ ಅವನನ್ನು ಗೌರವಿಸತೊಡಗಿದರು. ಎಲ್ಲರಿಗೂ ಅವನಲ್ಲಿ ಆದರ ವಿಶ್ವಾಸಗಳು ಹುಟ್ಟಿದುವು. ಅವನ ಮುಖಕಾಂತಿಯನ್ನೂ ಅವನ ಚಿತ್ತಾಕರ್ಷಕ ಸ್ವಭಾವವನ್ನೂ ನೋಡಿದೊಡನೆಯೇ ಅವನು ಮಹಾಪುರುಷನೆಂದು ಭಾಸವಾಗುತ್ತಿದ್ದಿತು. ಹಿಂದೆ ಅಶ್ವಾರೋಹಿಯಾಗಿ ಬೆನ್ನಟ್ಟಿ ಬಂದ ಕೊಲೆಗಾರನಿಗೆ ಕೂಡ ಅವನನ್ನು ಕೊಲ್ಲಲು ಕೈ ಬಾರದೆ ಪಶ್ಚಾತ್ತಾಪವು ಹುಟ್ಟಿದುದಕ್ಕೆ ಇದೇ ಕಾರಣ. ಅವನಿಗೆ ಈಗ ಶತ್ರುಗಳಾಗಿ ನಿಂತಿದ್ದ ಕೊರೈಷ್ ಮನೆತನದವರು ಸಹ ಅವನ ಬೋಧನೆಯ ದೆಸೆಯಿಂದ ತಮ್ಮ ಸ್ವಾರ್ಥಸಾಧನೆಗೆ ಅವಕಾಶವು ತಪ್ಪಿಹೋಗುವುದೆಂಬ ಭಯದಿಂದ ಅವನನ್ನು ದ್ವೇಷಿಸುತ್ತಿದ್ದರೇ ವಿನಾ ಇದಕ್ಕೆ ಮೊದಲು ಅವನನ್ನು 'ಅಲ್ ಅಮೀನ್' ಎಂಬ ಬಿರುದಿನಿಂದ ಗೌರವಿಸಿ ಪ್ರೀತಿಸುತ್ತಿದ್ದರು. ಕಷ್ಟಗಳ ಮೇಲೆ ಕಷ್ಟಗಳೊದಗಿ ಮಹಮ್ಮದನು ಪುಟಕ್ಕಿಟ್ಟ ಚಿನ್ನದಂತಾಗಿದ್ದನು. ಅವನಲ್ಲಿ ವ್ಯಕ್ತಿ ವೈಶಿಷ್ಟ್ಯವನ್ನೂ ವ್ಯಕ್ತಿ ಗೌರವವನ್ನೂ ಕೊಡುವ ಎಲ್ಲ ಸದ್ಗುಣಗಳೂ ಜಗದೀಶ್ವರನ ಅನುಗ್ರಹದಿಂದ ಜನ್ಮತಃ ಅಂಕುರ ರೂಪದಲ್ಲಿ ನೆಲೆಗೊಂಡಿದ್ದು ಮುಂದೆ ಹುರುಪುಗೊಂಡು ಪರಿಸ್ಫುಟವಾದುವು. ಅವನು ದೀನರ ಮೊರೆಯನ್ನು ಲಾಲಿಸದೆ, ಆರ್ತರಿಗೂ ಅನಾಥರಿಗೂ ತನ್ನ ಕೈಯಲ್ಲಾದ ಸಹಾಯವನ್ನು ಮಾಡದೆ, ಸಿರಿವಂತನೆಂಬ ಹೆಮ್ಮೆಯಿಂದ ಬೀಗಿದುದನ್ನು ಎಂದಿಗೂ ಯಾರೂ ಕಾಣರು ; ಖದೀಜಳ ಕೈಹಿಡಿದುದರಿಂದ ಅವನು ಧನದ ರಾಶಿಯ ಮೇಲೆ ಕುಳಿತಿದ್ದರೂ ಆಗಲೂ ತಾಗಿ ಬಾಗಿ ವಿನೀತ ಭಾವದಿಂದಲೇ ಇರುತ್ತಿದ್ದನು. ಅವನು ಬೀದಿಯಲ್ಲಿ ಹೊರಟನೆಂದರೆ, ಫಲ ಭರದಿಂದ ಬಾಗಿರುವ ವೃಕ್ಷದಂತಿದ್ದ ಅವನ ರೀತಿಯನ್ನೂ, ಅವನ ವಿನಯವನ್ನೂ ನೋಡಿ ವಿಸ್ಮಿತರಾದ ಜನರು

ಸೌಭಾಗ್ಯ ಸೂಚನೆ

ಅವನನ್ನೇ ದೃಷ್ಟಿಸಿ ನೋಡುತ್ತ, ಅವನ ಕಡೆಗೆ ಕೈಬೆರಳನ್ನು ತೋರಿಸಿ ಬಹಳ ಗೌರವದಿಂದ ಮಾತನಾಡಿಕೊಳ್ಳುತ್ತಿದ್ದರು. ಮುಹಮ್ಮದನ ಮೈತ್ರಿಯಾಯಿತೆಂದರೆ ಸ್ನೇಹದ ಸವಿರಸದ ನಿಧಿಯೇ ದೊರೆತ ಹಾಗೆ. ಅವನ ನಿಷ್ಕಲ್ಮಷ ಹೃದಯವನ್ನೂ ಅವನ ಸಾತ್ವಿಕ ವೃತ್ತಿಯನ್ನೂ ಕಂಡು ಮನದಣಿಯುವಂತೆ ಕೊಂಡಾಡದವರೇ ಇರಲಿಲ್ಲ. ಆದರೂ, ಸವಿನುಡಿಗಳನ್ನಾಡಿ ಸುಖವಾಗಿರುವುದರಿಂದಲೇ ಮುಹಮ್ಮದನು ತೃಪ್ತನಾಗಲಿಲ್ಲ. ದೈವಾನುಗ್ರಹದಿಂದ ಅವನಿಗೆ ಜೀವನವನ್ನು ಬೆಳಗುವ ಜ್ಯೋತಿಯ ಸಾಕ್ಷಾತ್ಕಾರವುಂಟಾದುದರಿಂದ, ತನ್ನ ದೇಶಬಾಂಧವರ ಅಜ್ಞಾನಾಂಧಕಾರವನ್ನು ತೊಲಗಿಸುವ ದೀಕ್ಷೆಯನ್ನು ವಹಿಸಿದನು. ಬಲಿಷ್ಠರ ಸ್ವಾರ್ಥಸಾಧನೆಯ ಬುಡಕ್ಕೆ ಕೊಡಲಿಯನ್ನು ಹಾಕಿದರೆ ತನಗೆ ಎಂತಹ ಕಷ್ಟಗಳು ಒದಗುವುವೆಂಬುದನ್ನು ಅವನು ಅರಿತಿದ್ದರೂ ತನ್ನ ಅಂತರಾತ್ಮಕ್ಕೆ ವಿರೋಧವಾಗಿ ನಡೆದು ಅವರ ಹುಸಿ ನಗೆಯ ಪ್ರಸಾದವನ್ನು ಪಡೆಯಲು ಅವನ ಮನಸ್ಸೊಪ್ಪಲಿಲ್ಲ. ಭಗವಂತನ ಕೃಪೆಯಲ್ಲಿ ಭರವಸೆಯನ್ನಿಟ್ಟು, ಪಶುಬಲಕ್ಕಿಂತಲೂ ಆತ್ಮಬಲವು ಹೆಚ್ಚೆಂಬ ಉದಾತ್ತ ತತ್ತ್ವವನ್ನು ಮನಗಂಡು, ಅವನು ತನ್ನ ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧನಾದನು; ತನ್ನ ಪ್ರಾಣವನ್ನೇ ಪಣವಾಗಿಟ್ಟು ದೇಶೋದ್ಧಾರವೆಂಬ ದ್ಯೂತಕ್ಕೆ ಅನುವಾದನು. ಅವನು ನಿರೀಕ್ಷಿಸಿದ್ದಂತೆಯೇ ಅನೇಕ ಸಂಕಟಗಳು ಬಂದೊದಗಿದರೂ ಅವುಗಳಿಂದ ಅವನು ದಿಂಡುಗೆಡಲಿಲ್ಲ; ಭಗವಂತನ ಕರುಣೆಯಿಲ್ಲವೆಂದು ಭಾವಿಸಿ ಕಳೆಗುಂದಲಿಲ್ಲ. ಕಷ್ಟಗಳು ಹೆಚ್ಚಿದಷ್ಟೂ ಅವನ ಕೆಚ್ಚೆದೆಯು ಚೇಗೇರಿತು; ಅಪಾಯವು ಹೆಚ್ಚಿದಷ್ಟೂ ಅವನು ಭಗವಂತನೇ ಶರಣೆಂದು ನೆರೆ ನಂಬಿ ಕುಳಿತನು. ಅವನು ನಿರ್ವಾಹವಿಲ್ಲದೆ ಯಾತ್ರಿಬ್ ನಗರಕ್ಕೆ ಬಂದನಲ್ಲದೆ ಅಧೈರ್ಯದಿಂದ ಅಳುಕಿ ಎಂದಿಗೂ ಬಂದವನಲ್ಲ. ಪರಿಶುದ್ಧಾತ್ಮನೂ ಧೀರನೂ ಆದ ಮುಹಮ್ಮದನಿಗೆ ಯಾತ್ರಿಬ್ ನಗರದಲ್ಲಿ ವಿಶೇಷ ಆದರ ಗೌರವಗಳು ಲಭಿಸಿದುವು. ಅನೇಕರು ಅವನ ಬೋಧನೆಯನ್ನು ಕೇಳಿ ಇಸ್ಲಾಂ ಮತಕ್ಕೆ ಸೇರಿದರು. ಅನರ್ಘ್ಯವಾದ ವಜ್ರವು ಕೂಡ ಕುಂದಣದ ಕಟ್ಟಡವಿಲ್ಲದೆ ಹೇಗೆ ಶೋಭಿಸದೋ ಹಾಗೆಯೇ

ಮುಹಮ್ಮದನಿಗೆ ಈ ವಿಧವಾದ ಸನ್ಮಾನವು ದೊರೆತು ಅವನ ಶಿಷ್ಯರ ಸಂಖ್ಯೆಯು ಹೆಚ್ಚದೆ ಹೋಗಿದ್ದರೆ ಅವನ ಮಾಹಾತ್ಮ್ಯೆಯು ಅಷ್ಟೊಂದು ಶೋಭಿಸುತ್ತಿರಲಿಲ್ಲ.

ಮುಹಮ್ಮದನು ಯಾತ್ರಿಬ್ ನಗರವನ್ನು ಸೇರಿದುದು ಒಳ್ಳೆಯ ಸಂಧಿ ಸಮಯದಲ್ಲಿ. ಆ ನಗರದಲ್ಲಿ ವಾಸವಾಗಿದ್ದ ಔಸ್ ಮತ್ತು ಖಜ್ರಾಜ್ ಎಂಬ ಎರಡು ಬುಡಕಟ್ಟಿನವರಿಗೂ ಮಹತ್ತರವಾದ ಪರಸ್ಪರ ದ್ವೇಷವು ನೆಲೆಗೊಂಡು ಅನರ್ಥಕ್ಕೆ ಕಾರಣವಾಗಿದ್ದಿತು. ಮುಹಮ್ಮದನು ಅಲ್ಲಿಗೆ ಬರುವ ವೇಳೆಗೆ ಅವರ ಅಂತಃಕಲಹವು ಕೊನೆಗಂಡು ಅವರಿಗೆ ಸಮಾಧಾನವುಂಟಾಗಿದ್ದಿತು. ಆದಕಾರಣ, ಮುಹಮ್ಮದನ ಬೋಧೆಯಿಂದ ಅವರ ಪರಸ್ಪರ ಸೌಹಾರ್ದ ಭಾವವು ಹೆಚ್ಚಿ ಯಾತ್ರಿಬ್ ನಗರವೇ ತನ್ಮೂಲಕವಾಗಿ ಕಳ ಕಳಿಸುವಂತಾಯಿತು. ಅವೆರಡು ಬುಡಕಟ್ಟಿನವರೂ ಮುಹಮ್ಮದನ ಶಿಷ್ಯರಾಗಿ ಗುರು ಭಕ್ತಿಯಿಂದ ಒಟ್ಟುಗೂಡಿ ಇಸ್ಲಾಂ ಮತವನ್ನು ಪ್ರಚುರಗೊಳಿಸಲು ಸೊಂಟ ಕಟ್ಟಿ ನಿಂತರು. ಮುಹಮ್ಮದನು ಅವರ ಹೃದಯಗಳನ್ನು ಪ್ರೇಮ ಪಾಶದಿಂದ ಬಂಧಿಸಿ ಕಾರ್ಯ ಸಾಧನೆಗೆ ಅನುವಾದನು. ಅವರು ತಮ್ಮ ಊರಿಗೆ ''ಮೆದೀನತ್-ಉನ್-ನಬೀ'' (ಗುರುವಿನ ನಗರ) ಎಂದು ಹೆಸರಿಟ್ಟರು. ಕಾಲ ಕ್ರಮದಲ್ಲಿ ಈ ಹೆಸರು ಚಿಕ್ಕದಾಗಿ, **ಮೆದೀನಾ** ಎಂಬ ರೂಪಕ್ಕಿಳಿಯಿತು. ಮೆದೀನಾ ನಗರವು ಮುಹಮ್ಮದೀಯರ ಯಾತ್ರಾ ಸ್ಥಳವಾಗಿ ಇಂದಿಗೂ ಪ್ರಸಿದ್ಧವಾಗಿದೆ.

ಯಾತ್ರಿಬ್ ನಗರ

ಮುಹಮ್ಮದನ ಶಿಷ್ಯರಿಗೆ ಆತನಲ್ಲಿ ದಿನ ದಿನವೂ ಪ್ರೀತಿ ಗೌರವಗಳು ಹೆಚ್ಚುತ್ತ ಬಂದುವು. ಅನೇಕರು ಹೊಸದಾಗಿ ಮುಹಮ್ಮದನಲ್ಲಿ ಶಿಷ್ಯವೃತ್ತಿಯನ್ನು ಕೈಕೊಂಡು ಇಸ್ಲಾಂ ಮತಕ್ಕೆ ಸೇರಿದರು. ಎಲ್ಲರೂ ಒಟ್ಟಿಗೆ ಸೇರಿ ದೇವತಾ ಪ್ರಾರ್ಥನೆಯನ್ನು ಮಾಡುವುದಕ್ಕಾಗಿ ಒಂದು ಮಸೀದಿಯನ್ನು ಕಟ್ಟಬೇಕೆಂಬ ಯೋಚನೆಯು ಕಾಲ ಕ್ರಮವಾಗಿ ಮುಹಮ್ಮದನ ಮನಸ್ಸಿನಲ್ಲಿ ಹುಟ್ಟಿತು. ಅವನ ಶಿಷ್ಯರು ಅದನ್ನನುಮೋದಿಸಿ ಉತ್ಸಾಹಶಾಲಿಗಳಾಗಿ ಮುಂದೆ ನಿಂತರು. ಮಸೀದಿಗೆ ಬೇಕಾದ ನಿವೇಶನವನ್ನು ತಾಯಿ

ಮಸೀದಿ

ತಂದೆಗಳಿಲ್ಲದ ಇಬ್ಬರು ಬಾಲಕರು ಮುಹಮ್ಮದನಿಗೆ ಸಮರ್ಪಿಸಿದರು. ಈ ಸೋದರರ ಓಜಸ್ವಿತೆಯನ್ನೂ ಉದಾರ ಬುದ್ಧಿಯನ್ನೂ ಮತಾಭಿಮಾನವನ್ನೂ ಕಂಡು ಮುಹಮ್ಮದನು ತಲೆದೂಗಿದನು. ತನ್ನ ವರ್ಚಸ್ಸು ಅವರ ಮೇಲೆ ಬಿದ್ದುದೇ ಅದಕ್ಕೆ ಕಾರಣವೆಂಬುದು ಅವನಿಗೆ ಗೋಚರವಾಯಿತೋ ಇಲ್ಲವೋ ಎಂಬುದು ನಮಗೆ ತಿಳಿಯದು. ಆ ಬಾಲಕರು ನಿವೇಶನವನ್ನು ಉಚಿತವಾಗಿ ಕೊಡಲು ಸಿದ್ಧರಾಗಿದ್ದರೂ ಅವರು ತಬ್ಬಲಿಗಳೆಂಬ ಕನಿಕರದಿಂದ ಮುಹಮ್ಮದನು ಅವರಿಗೆ ಅದರ ಬೆಲೆಯನ್ನು ಸಲ್ಲಿಸಿದನು. ಕೂಡಲೆ ಕಟ್ಟಡದ ಕೆಲಸವನ್ನು ಪ್ರಾರಂಭಿಸಿ ಮುಹಮ್ಮದನು ತಾನು ಗುರುವೆಂಬ ಹೆಮ್ಮೆಯನ್ನು ಹಚ್ಚಿಕೊಳ್ಳದೆ, ತನ್ನ ಶಿಷ್ಯರು ತನ್ನನ್ನು ಎಷ್ಟು ತಡೆದರೂ ಲಕ್ಷ್ಯಿಸದೆ, ಇತರರೊಡನೆ ತಾನೂ ಸೇರಿ ಕಟ್ಟಡದ ಕೆಲಸವನ್ನು ಮಾಡಿದನು. ಭಗವಂತನ ಸೇವೆ ಮಾಡುವುದರಲ್ಲಿ ಎಲ್ಲರೂ ಒಂದೇ ಎಂಬ ತತ್ತ್ವವನ್ನು ಕಾರ್ಯರೂಪದಲ್ಲಿ ಎಲ್ಲ ಕಡೆಗೂ ಸಾರುವುದಕ್ಕಾಗಿಯೇ ಆತನು ತಳಹದಿ ಮೊದಲ್ಗೊಂಡು ಕಟ್ಟಡದ ಕೆಲಸವು ಪೂರೈಸುವವರೆಗೂ ಇತರರೊಡನೆ ಸಾಮಾನ್ಯನಂತೆ ನಿಂತು ಕೆಲಸ ಮಾಡಿದನು. ಮಸೀದಿಯ ಕಟ್ಟಡವೂ, ಮುಹಮ್ಮದನ ಸರಳತೆಗೆ ತಕ್ಕಂತೆ, ಆಡಂಬರವಿಲ್ಲದೆ ಇದ್ದಿತು ; ಗೋಡೆಗಳನ್ನು ಕಲ್ಲು ಇಟ್ಟಿಗೆ ಮಣ್ಣುಗಳಿಂದ ಕಟ್ಟಿ ಮಾಳಿಗೆಗೆ ಮಾತ್ರ ಖರ್ಜೂರದ ಗರಿಯನ್ನು ಹೊದಿಸಿದ್ದರು. ವಾಸಕ್ಕೆ ಸ್ಥಳವಿಲ್ಲದ ಅನಾಥರ ಉಪಯೋಗಕ್ಕಾಗಿ ಆ ಮಸೀದಿಯ ಒಂದು ಭಾಗವನ್ನು ಮುಹಮ್ಮದನು ಬಿಡಿಸಿಕೊಟ್ಟಿದ್ದನು.

ಆ ಮಸೀದಿಯಲ್ಲಿ ಇಸ್ಲಾಂ ಮತಕ್ಕನುಸಾರವಾಗಿ ಪ್ರಾರ್ಥನೆ ನಡೆಯುತ್ತಿದ್ದಿತು. ಮುಹಮ್ಮದನು ತನ್ನ ಶಿಷ್ಯರನ್ನೂ ಇತರರನ್ನೂ ಸಭೆ ಸೇರಿಸಿ ಅವರೆಲ್ಲರಿಗೂ ಅಲ್ಲಿ ಉಪದೇಶ ಮಾಡುತ್ತಿದ್ದನು. ದೀನರಿಗೆ ಸಹಾಯ ಮಾಡುವ ವಿಷಯದಲ್ಲಂತು ಎಷ್ಟು ಬೋಧಿಸಿದರೂ ಅವನ ಮನಸ್ಸಿಗೆ ದಣಿವಾಗದು. ಈ ವಿಷಯದಲ್ಲಿ ಅವನು ಹೇಳಿದ ಉಪದೇಶ ವಾಕ್ಯವನ್ನು ಮಾನ್ಯರಾದ ಸೈಯದ್ ಅಮೀರ್ ಆಲಿಯವರ ಗ್ರಂಥದಿಂದ ಇಲ್ಲಿ ಉದ್ಧರಿಸಿ ಬರೆದಿದೆ:—"ಭಗವಂತನು ಸೃಷ್ಟಿಸಿರುವ ಪ್ರಾಣಿಗಳ ವಿಷಯದಲ್ಲಿ ಯಾವನು ದಯೆಯನ್ನು ತೋರಿಸುವುದಿಲ್ಲವೋ ಅವನನ್ನು

ದೇವರು ಎಂದಿಗೂ ಪ್ರೀತಿಸನು. ಬಟ್ಟೆಗಳಿಲ್ಲದ ನಿರ್ಗತಿಕರಿಗೆ ಬಟ್ಟೆಯನ್ನು ಕೊಡುವ ಮುಹಮ್ಮದೀಯನಿಗೆ ಪರಲೋಕದಲ್ಲಿ ಭಗವಂತನು ಸ್ವರ್ಗ ಲೋಕದ ಹಸಿರು ಬಣ್ಣದ ಉಡುಪನ್ನು ಅನುಗ್ರಹಿಸುವನು.'' ಒಮ್ಮೆ ಮುಹಮ್ಮದನು ಬೋಧಿಸಿದುದೇನೆಂದರೆ:—''ದೇವರು ಭೂಮಿಯನ್ನು ಸೃಷ್ಟಿಸಿದಾಗ ಅದು ಚಲಿಸಿ ಅಲುಗಾಡಿತು. ಅದಕ್ಕೆ ಸ್ಥಿಮಿತತೆಯನ್ನುಂಟುಮಾಡುವುದಕ್ಕಾಗಿ ಭಗವಂತನು ಭೂಮಿಯ ಮೇಲೆ ಅಲ್ಲಲ್ಲಿ ಗುಡ್ಡಗಳನ್ನೂ ಬೆಟ್ಟಗಳನ್ನೂ ಹೇರಿದನು. ಆಗ ದೇವ ದೂತರು, ''ಓ ಭಗವಂತನೇ! ನಿನ್ನ ಸೃಷ್ಟಿಯಲ್ಲಿ ಬೆಟ್ಟಗಳಿಗಿಂತ ಬಲವಾದುದು ಏನಾದರೂ ಇದೆಯೆ?'' ಎಂದು ಕೇಳಲು ಭಗವಂತನು, ''ಕಬ್ಬಿಣವು ಅವುಗಳನ್ನು ಒಡೆಯಬಲ್ಲುದಾದುದರಿಂದ ಬೆಟ್ಟಗಳಿಗಿಂತ ಬಲವಾದುದು'' ಎಂದು ಉತ್ತರ ಹೇಳಿದನು. ಅವರು, ''ನಿನ್ನ ಸೃಷ್ಟಿಯಲ್ಲಿ ಕಬ್ಬಿಣಕ್ಕಿಂತ ಬಲವಾದ ವಸ್ತುವು ಯಾವುದಾದರೂ ಇದೆಯೆ?'' ಎಂದು ಮರಳಿ ಕೇಳಲು, ಭಗವಂತನು, ''ಬೆಂಕಿಯು ಕಬ್ಬಿಣವನ್ನು ಕರಗಿಸಬಲ್ಲುದಾದ ಕಾರಣ ಕಬ್ಬಿಣಕ್ಕಿಂತಲೂ ಬಲವಾದುದು'' ಎಂದು ಉತ್ತರ ಹೇಳಿದನು. ''ನಿನ್ನ ಸೃಷ್ಟಿಯಲ್ಲಿ ಬೆಂಕಿಗಿಂತಲೂ ಬಲವಾದುದು ಯಾವುದಾದರೂ ಉಂಟೆ?'' ಎಂದು ಅವರು ಮರಳಿ ಕೇಳಿದುದಕ್ಕೆ, ''ನೀರು ಬೆಂಕಿಯನ್ನು ಆರಿಸುವ ಶಕ್ತಿಯುಳ್ಳದುದರಿಂದ ಅದಕ್ಕಿಂತಲೂ ಬಲವಾದುದು'' ಎಂದು ಅವನು ಉತ್ತರ ಕೊಟ್ಟನು. ತರುವಾಯ ಅವರು, ''ದೇವಾ! ನೀರಿಗಿಂತಲೂ ಬಲವಾದುದು ಯಾವುದಾದರೂ ನಿನ್ನ ಸೃಷ್ಟಿಯಲ್ಲಿದೆಯೆ?'' ಎಂದು ಕೇಳಲು, ಅದಕ್ಕೆ ಭಗವಂತನು, ''ಗಾಳಿಯು ನೀರಿಗಿಂತಲೂ ಬಲವಾದುದು; ಏಕೆಂದರೆ, ಅದು ನೀರಿನ ಶಕ್ತಿಯನ್ನು ತಡೆದು, ಅದನ್ನು ಚಲಿಸುವಂತೆ ಮಾಡುತ್ತದೆ'' ಎಂದು ಉತ್ತರ ಹೇಳಿದನು. ಕೊನೆಗೆ ಅವರು, ''ನಮ್ಮನ್ನು ಸಂರಕ್ಷಿಸುವ ಸ್ವಾಮಿಯೇ! ಗಾಳಿಗಿಂತಲೂ ಬಲವಾದುದು ಯಾವುದಾದರೂ ನಿನ್ನ ಸೃಷ್ಟಿಯಲ್ಲುಂಟೆ?'' ಎಂದು ಕೇಳಲು, ಭಗವಂತನು, ''ದೀನರಲ್ಲಿ ಕನಿಕರವಿಟ್ಟು ಅವರಿಗೆ ಭಿಕ್ಷವನ್ನು ನೀಡಿ ಸಹಾಯಮಾಡುವ ಧರ್ಮಾತ್ಮನ ಶಕ್ತಿಯೂ ಪ್ರಭಾವವೂ ಎಲ್ಲಕ್ಕಿಂತಲೂ ಹೆಚ್ಚಾದುವು. ಬಲಗೈ ಸಹಾಯ ಮಾಡಿದುದನ್ನು ಎಡಗೈ

ಕೂಡ ಅರಿಯದಂತೆ ವರ್ತಿಸುವುದಾದರೆ, ಅಂತಹ ಮನುಷ್ಯನ ಶಕ್ತಿ ಪ್ರಭಾವಗಳ ಮುಂದೆ ಯಾವುದೂ ಪಾರಿ ನಡೆಯುವಂತಿಲ್ಲ'' ಎಂದು ಉತ್ತರ ಹೇಳಿದನು.

ಧರ್ಮಾರ್ಥವಾಗಿ ಸಹಾಯ ಮಾಡಿ ಕರುಣೆಯನ್ನು ತೋರಿಸುವ ವಿಧಾನಗಳನ್ನು ತಿಳಿಸುವುದರಲ್ಲಿ ಮುಹಮ್ಮದನು ಸಂಕುಚಿತ ದೃಷ್ಟಿಯಿಂದಿರಲಿಲ್ಲ; ಪರೋಪಕಾರದ ನಾನಾ ರೂಪಗಳೂ ಅವನಿಗೆ ಗೊತ್ತಿದ್ದುವು. ಈ ವಿಷಯವಾಗಿ ಅವನು ಆ ಮಸೀದಿಯಲ್ಲಿ ಬೋಧಿಸಿದ ಬಗೆಯನ್ನು ಚಿಂತಿಸೋಣ: ''ಪ್ರತಿಯೊಂದು ಒಳ್ಳೆಯ ಕೆಲಸವೂ ಪರೋಪಕಾರವೇ ಸರಿ. ನಿಮ್ಮ ದೇಶ ಬಾಂಧವರನ್ನಾದರಿಸಿ ಮುಗುಳ್ನಗೆಯನ್ನು ಸೂಸಿದರೆ ಅದು ಪರೋಪಕಾರ. ಒಳ್ಳೆಯ ಕೆಲಸಗಳನ್ನು ಮಾಡುವಂತೆ ನಿಮ್ಮ ದೇಶ ಬಾಂಧವರೆದುರಿಗೆ ಸ್ಫೂರ್ತಿದಾಯಕವಾದ ಭಾಷಣ ಮಾಡಿದರೆ ಅಂತಹ ಭಾಷಣವು ಸತ್ಪಾತ್ರ ದಾನದಷ್ಟು ಮಹತ್ತ್ವವುಳ್ಳದ್ದಾಗುವುದು. ದಾರಿ ತಪ್ಪಿದ ಪ್ರಯಾಣಿಕನಿಗೆ ದಾರಿ ತೋರಿಸುವುದೂ, ಕುರುಡನಿಗೆ ಬೇಕಾದ ಸಹಾಯ ಮಾಡುವುದೂ ಪರೋಪಕಾರವೇ. ಜನರು ತಿರುಗಾಡುವ ದಾರಿಯಲ್ಲಿ ಕಲ್ಲು ಮುಳ್ಳುಗಳಿದ್ದರೆ ಅವನ್ನು ತೆಗೆದು ಹಾಕಿದವನೂ ಪರೋಪಕಾರಿಯೇ. ಬಾಯಾರಿಕೆಯಿಂದ ತೊಂದರೆ ಪಡುತ್ತಿರುವವನಿಗೆ ನೀರನ್ನು ಕೊಟ್ಟರೆ ಅದೂ ಪರೋಪಕಾರವೆನಿಸುವುದು. ಮನುಷ್ಯನು ಐಹಿಕ ಜೀವನದಲ್ಲಿ ನಡೆಯಿಸುವ ಪರೋಪಕಾರವೇ ಅವನಿಗೆ ಪರಲೋಕದ ಪಾಥೇಯವಾಗಿರುವುದು; ಅದೇ ಅವನಿಗೆ ಪರಲೋಕದಲ್ಲಿ ಸುಖವನ್ನುಂಟುಮಾಡುವ ನಿಜವಾದ ಸಂಪತ್ತು. ಮನುಷ್ಯನು ಸತ್ತರೆ, ಅವನು ಎಷ್ಟು ಸ್ವತ್ತನ್ನು ಗಳಿಸಿ ತನ್ನವರಿಗಾಗಿ ಬಿಟ್ಟಿದ್ದಾನೆಂದು ಜನರು ಸಾಮಾನ್ಯವಾಗಿ ಕೇಳುವರು. ಆದರೆ, ದೇವದೂತರು ಸತ್ತವನನ್ನು ಕೇಳುವ ಪ್ರಶ್ನೆಯು ಇದಲ್ಲ. ''ನೀನು ಪರಲೋಕಕ್ಕೆ ಹೊರಡುವುದಕ್ಕೆ ಮೊದಲು ಯಾವ ಯಾವ ಪುಣ್ಯ ಕಾರ್ಯಗಳ ಫಲವನ್ನು ಅಲ್ಲಿಗೆ ಕಳುಹಿಸಿರುವೆ?'' ಎಂಬುದೇ ಅವರ ಪ್ರಶ್ನೆ.

ಮುಹಮ್ಮದನ ಈ ಬೋಧನೆಯನ್ನು ಕೇಳಿ, ಸರಳ ಹೃದಯನಾದ ಅವನ ವಾಕ್ಯ ತರಂಗಗಳಿಂದ ಉತ್ತಾಹಿತರಾಗಿ, ಅಲ್ಲಿ ನೆರೆದಿದ್ದವರೆಲ್ಲರೂ

ಸಂತೋಷಿಸಿದರು. ಅವರಲ್ಲೊಬ್ಬನು, "ಗುರುವೇ! ನಮ್ಮ ತಾಯಿಯು ಮೃತಳಾಗಿದ್ದಾಳೆ; ಅವಳ ಅಂತರಾತ್ಮ ತೃಪ್ತಿಗಾಗಿ ನಾನು ಯಾವ ದಾನವನ್ನು ಮಾಡುವುದು ಅತ್ಯುತ್ತಮವಾದುದು?" ಎಂದು ಕೇಳಿದನು. ಆಗ ಬೇಸಗೆಯ ಕಾಲ; ಮರಳು ಕಾಡುಗಳಿಂದ ತುಂಬಿದ್ದ ಅರಬ್ಬೀಸ್ಥಾನದಲ್ಲಿ ಆಗ ಬಿಸಿಲಿನ ಬೇಗೆ; ಆದುದರಿಂದ ಜನರಿಗೆ ನೀರೇ ಅಮೃತವೆಂದು ತೋರುವಷ್ಟು ಅಂತರ್ದಾಹವಿದ್ದಿತು; ಮುಹಮ್ಮದನು ಈ ಸ್ಥಿತಿಯನ್ನು ಕಂಡು, "ನೀರಿನ ದಾನವನ್ನು ಮಾಡಯ್ಯಾ! ಅದೇ ಸರ್ವೋತ್ತಮವಾದುದು. ದಾಹ ಪೀಡಿತರಾದವರಿಗೆ ಯಥೇಷ್ಟವಾಗಿ ನೀರು ದೊರೆಯುವಂತೆ ಆಕೆಯ ಹೆಸರಿನಲ್ಲಿ ಒಂದು ಬಾವಿಯನ್ನು ತೋಡಿಸಯ್ಯಾ!" ಎಂದು ಆತನಿಗೆ ಉತ್ತರ ಹೇಳಿದನು. ಸಾಧುಗಳ ಉಪದೇಶವು ಅನೇಕ ಸಂದರ್ಭಗಳಲ್ಲಿ ಪುರಾಣ ವೈರಾಗ್ಯವೆನಿಸುವ ಕ್ಷಣಿಕವಾದ ಧರ್ಮಾಸಕ್ತಿಯನ್ನು ಹುಟ್ಟಿಸದೆ, ಅಚಲವಾದ ಶಂಕುಸ್ಥಾಪನೆಯನ್ನು ಮಾಡಿ ಧರ್ಮಸೌಧವನ್ನು ಕಟ್ಟಿಸಲು ಸಹಕಾರಿಯಾಗುತ್ತದೆ. ಆದುದರಿಂದಲೇ, ಗುರುವಿನ ಉಪದೇಶವನ್ನು ಕೇಳಿದ ಆ ಶಿಷ್ಯನು ತಮ್ಮ ತಾಯಿಯ ಹೆಸರಿನಲ್ಲಿ ಒಂದು ಬಾವಿಯನ್ನು ತೋಡಿಸಿ, ಅದರಿಂದ ದೊರೆತ ಧರ್ಮವು ತಮ್ಮ ತಾಯಿಗೆ ಸೇರಲೆಂದು ಭಗವಂತನನ್ನು ಪ್ರಾರ್ಥಿಸಿದನು. ಸದುಪದೇಶವನ್ನು ಮಾಡುವ ಗುರುವೂ, ಅದನ್ನು ಆಚರಣೆಗೆ ತರುವ ಶಿಷ್ಯನೂ ಇಬ್ಬರೂ ಧನ್ಯರು.

ನಾಲಗೆಯಿಂದಾಗುವ ಶ್ರೇಷ್ಠವಾದ ಮತ್ತೊಂದು ಪರೋಪಕಾರವೂ ಉಂಟು: ಇತರರನ್ನು ನೋಯಿಸದೆ ಸವಿನುಡಿಗಳನ್ನಾಡಿ ಅವರನ್ನು ಸಂತೋಷಪಡಿಸುವುದು; ಇದರಷ್ಟು ಶ್ರೇಷ್ಠವಾದುದು ಮತ್ತಾವುದೂ ಇಲ್ಲ. ಆದರೆ, ಇದರ ವಿಷಯದಲ್ಲಿ ಜನರಿಗಿರುವಷ್ಟು ಅಲಕ್ಷ್ಯಭಾವವೂ ಮತ್ತಾವುದರಲ್ಲಿಯೂ ಇಲ್ಲ. ಅದರಲ್ಲಿಯೂ ಮುಖ್ಯವಾಗಿ, ಅಧಿಕಾರ ಮದದಿಂದಲೂ ಧನ ಮದದಿಂದಲೂ ಬೀಗಿರುವ ದುರಹಂಕಾರಿಗಳಂತು ಇದಕ್ಕೆ ಲೇಶವೂ ಗಮನಕೊಡುವುದಿಲ್ಲ. ಸವಿನುಡಿಗಳ ಶ್ರೇಷ್ಠತೆಯನ್ನು ಮುಹಮ್ಮದನು ಚೆನ್ನಾಗಿ ಅರಿತಿದ್ದನು. ಒಮ್ಮೆ ಮದೀನಾ ನಗರಕ್ಕೆ ಬಂದಿದ್ದ ಬಸ್ರಾ ನಗರದವನೊಬ್ಬನು, ಮಸೀದಿಗೆ

ಹೋಗಿದ್ದವನು, ತನಗೊಂದು ಸದ್ವರ್ತನೆಯನ್ನುಪದೇಶಿಸಬೇಕೆಂದು ಬೇಡಿಕೊಳ್ಳಲು ಮುಹಮ್ಮದನು, ಪರರನ್ನೂ ದೂಷಿಸದೆ ಎಚ್ಚರದಿಂದಿರುವುದೇ ಮೇಲಾದ ಸದ್ವರ್ತನೆಯೆಂದು ತಿಳಿಸಿದನು. ಮುಹಮ್ಮದನ ಈ ಗಂಭೀರ ವಾಣಿಯು ಆಗಂತುಕನ ಹೃದಯದಲ್ಲಿ ನಾಟಿಹೋಯಿತು. ಅಂದಿನಿಂದ ಅವನು ಪರ ದೂಷಣೆಯೆಂಬ ವ್ಯಾಧಿಗೆ ದೂರವಾದನಂತೆ. ಬೋಧಕನಲ್ಲಿ ತಾರುಣ್ಯವೂ ಸಾತ್ವಿಕತೆಯೂ ಇದ್ದರೆ ಇಂತಹ ಸತ್ಫಲವು ದೊರೆಯುವುದರಲ್ಲಿ ಆಶ್ಚರ್ಯವೇನು?

'ಶೀಲವಂತರಿಗೆ ಶಿಲೆಯೂ ಒಲಿಯುವುದು' ಎಂಬಂತೆ ಮೆದೀನಾ ನಗರದಲ್ಲಿ ದಿನ ದಿನವೂ ಮುಹಮ್ಮದನ ಪ್ರಾಬಲ್ಯವು ಹೆಚ್ಚುತ್ತ ಬಂದಿತು.

ವಿರೋಧ ಪ್ರಾಪ್ತಿ

ಅದರೊಡನೆ ಆ ಪ್ರಾಂತದ—ಅದರಲ್ಲಿಯೂ ಮುಖ್ಯವಾಗಿ ಆ ನಗರದ—ಯೆಹೂದ್ಯರ ಈರ್ಷ್ಯೆಯೂ ವೃದ್ಧಿಯಾಯಿತು. ಮುಹಮ್ಮದನಿಗೆ ತೊಂದರೆಯನ್ನುಂಟುಮಾಡಿ, ಅವನು ಮಕ್ಕಾ ನಗರದಿಂದ ಓಡಿಹೋಗಲು ಕಾರಣಭೂತರಾಗಿದ್ದ ಕೊರೈಷ್ ಪಂಗಡದವರೊಡನೆ ಯೆಹೂದ್ಯರು ವ್ಯಾಪಾರವನ್ನು ನಡೆಯಿಸುತ್ತ ಎಲ್ಲರೂ ಮೈತ್ರಿಯಿಂದಿದ್ದರು. ಉರಿಯುವ ಬೆಂಕಿಗೆ ಬಿರುಗಾಳಿಯೂ ಸಹಾಯವಾದರೆ ಮುಂದೆ ಹೇಳಬೇಕಾದುದೇನು? ಇವರೆಲ್ಲರೂ ಮುಹಮ್ಮದನ ಮೇಲೆ ಮಾತ್ಸರ್ಯವನ್ನು ಸಾಧಿಸಲು ಉಪಕ್ರಮಿಸಿದರು. ಈ ಮಧ್ಯೇ ಮುಹಮ್ಮದನು ತನ್ನ ಶಕ್ತಿ ಸಾಮರ್ಥ್ಯಗಳಿಂದ ಮೆದೀನಾ ನಗರದ ಮುಖ್ಯ ದಂಡಾಧಿಕಾರಿಯಂತೆ ಅಧಿಕಾರವನ್ನು ನಡೆಯಿಸತೊಡಗಿದನು. ದೊರೆಯೆಂಬ ಹೆಸರನ್ನು ಪಡೆಯದಿದ್ದರೂ, ರಾಜ ಧರ್ಮವನ್ನು ಪರಿಪಾಲಿಸುತ್ತ ವಾಸ್ತವಿಕವಾಗಿ ಪ್ರಭು ಪದವಿಯನ್ನು ಅನುಭವಿಸುತ್ತಿದ್ದ ಮುಹಮ್ಮದನ ಕಡೆಯಿಂದ, ಆ ನಗರದ ಪ್ರಭುತ್ವವನ್ನು ಪಡೆಯಬೇಕೆಂದು ಹೊಂಚುಹಾಕುತ್ತಿದ್ದ ಯೆಹೂದ್ಯನಲ್ಲದ ಮುಖ್ಯಸ್ಥನೊಬ್ಬನ ಉದ್ದೇಶಕ್ಕೆ ಭಂಗವುಂಟಾಯಿತು. ಆತನೂ ಅವನ ಅನುಯಾಯಿಗಳೂ ಮುಹಮ್ಮದನ ವಿರೋಧಿಗಳಾದರು. ಕಕ್ಷಿಪ್ರತಿ ಕಕ್ಷಿಗಳಿಂದ ಕೂಡಿ ಛಿದ್ರ ಛಿದ್ರವಾಗಿ, ಕೊಲೆಪಾತಕರಿಂದ ತುಂಬಿದ್ದ ಮೆದೀನಾ ನಗರದ ಅಂದಿನ ಸಮಾಜದಲ್ಲಿ ತನ್ನ ಉಜ್ಜ್ವಲ ತೇಜಸ್ಸಿ

ನಿಂದ ಅಧಿಷ್ಠಾತೃವಾಗಿ ನಿಂತು, ಶಾಂತಿ ಸಮಾಧಾನಗಳನ್ನು ಸ್ಥಾಪಿಸಿದುದ ಕ್ಕಾಗಿ ಮಹಮ್ಮದನನ್ನು ಎಷ್ಟು ಕೊಂಡಾಡಿದರೂ ಸಾಲದು. ಮೆದೀನಾ ನಗರ ನಿವಾಸಿಗಳಿಗೆ ಮಹಮ್ಮದನು ಸ್ವಾತಂತ್ರ್ಯವನ್ನು ಕೊಟ್ಟು, ಭಗವಂತನ ಎದುರಿನಲ್ಲಿ ಎಲ್ಲರೂ ಸಮಾನರೆಂದೂ, ಎಲ್ಲರೂ ಒಂದೇ ಜನಾಂಗಕ್ಕೆ ಸೇರಿದವರೆಂದೂ ಉದ್ಘೋಷಿಸಿ, ಅವರೆಲ್ಲರಿಗೂ ಸಮಾನ ವಾಗಿ ವ್ಯಕ್ತಿ ಸ್ವಾತಂತ್ರ್ಯವನ್ನು ಕರುಣಿಸಿದನು. ಅಲ್ಲದೆ, ಇಸ್ಲಾಂ ಮತದವರು ಇತರರನ್ನು ಹಿಂಸಿಸುವ ಆಲೋಚನೆಯನ್ನು ಮಾಡುವುದಕ್ಕೆ ಅವಕಾಶವನ್ನೇ ತಪ್ಪಿಸಬೇಕೆಂಬ ಅಭಿಪ್ರಾಯದಿಂದ, ಮಹಮ್ಮದನು ತನ್ನ ಅಪ್ಪಣೆಯಿಲ್ಲದೆ ಯಾರೊಡನೆಯೂ ಮಹಮ್ಮದೀಯರು ಕಾದಾಡಕೂಡ ದೆಂದು ಕಟ್ಟಾಜ್ಞೆ ಮಾಡಿದನು; ತನ್ನ ಅನುಯಾಯಿಗಳು ಇತರರೊಡ ನೆಯೇ ಆಗಲಿ, ತಮ್ಮಲ್ಲಿಯೇ ಆಗಲಿ ವಿವಾದ ಮಾಡಬೇಕಾಗಿ ಬಂದರೆ, ಅಂತಹ ವಿವಾದದಲ್ಲಿ ಅವರು ತನ್ನ ತೀರ್ಮಾನವನ್ನೇ ಅಂಗೀಕರಿಸ ಬೇಕೆಂದೂ ಅಪ್ಪಣೆಮಾಡಿದನು; ಇಷ್ಟೇ ಅಲ್ಲ; ಯೆಹೂದ್ಯರೇ ಮುಂತಾದ ಅನ್ಯ ಮತೀಯರು ಕೂಡ ತಮ್ಮ ಇಷ್ಟ ಬಂದಂತೆ ದೇವತಾ ರಾಧನೆಯನ್ನು ನಡೆಯಿಸಿಕೊಳ್ಳಬಹುದೆಂದೂ, ಇಸ್ಲಾಂ ಮತಕ್ಕೆ ಸೇರಿ ದ್ದವರಂತೆಯೇ ಅವರಿಗೂ ಸಮಾನವಾದ ಹಕ್ಕು ಬಾಧ್ಯತೆಗಳಿರತಕ್ಕು ದೆಂದೂ, ಮೆದೀನಾ ನಗರದ ಯೋಗಕ್ಷೇಮದಲ್ಲಿ ಆದರವನ್ನು ವಹಿಸಿ ಜನಪದ ಭಾವವನ್ನವಲಂಬಿಸಿ ವರ್ತಿಸತಕ್ಕವರೆಲ್ಲರೂ ತನ್ನ ಪ್ರೀತಿ ವಿಶ್ವಾಸಗಳಿಗೆ ಪಾತ್ರರೆಂದೂ ಶಾಸನ ಪತ್ರಿಕೆಯನ್ನು ಹೊರಡಿಸಿದನು; ಮೆದೀನಾ ನಗರ ನಿವಾಸಿಗಳು ಯಾವ ರೀತಿಯಲ್ಲಿ ವರ್ತಿಸಬೇಕೆಂಬ ವಿಷಯವಾಗಿ ಸಮಾಚೀನವಾದ ನಿಬಂಧನೆಗಳನ್ನು ರಚಿಸಿದನು. ಆದರೆ ಗೂಬೆಯು ಸೂರ್ಯನ ತೇಜಸ್ಸನ್ನು ಗ್ರಹಿಸಬಲ್ಲುದೆ? ಮಹಮ್ಮದನ ವಿರೋಧಿಗಳು ಅವನ ಸದ್ಗುಣಗಳಿಗೆ ಬೆಲೆಗೊಡದೆ ಸರ್ವ ಪ್ರಯತ್ನ ದಿಂದಲೂ ಅವನನ್ನು ನೆಗ್ಗಬೇಕೆಂದು ದೃಢ ಸಂಕಲ್ಪ ಮಾಡಿದರು. ಮಹ ಮ್ಮದನಿಗೆ ಬಲವದ್ವಿರೋಧವು ಕೈಗಟ್ಟಿದಂತಾಯಿತು.

ವಿರೋಧ ಪಕ್ಷದವರು ಮಹಮ್ಮದನನ್ನು ಬಹು ವಿಧವಾಗಿ ಪೀಡಿಸ ತೊಡಗಿದರು. ಅವರೆಲ್ಲರೂ ಸಂಸ್ಕಾರ ವಿಹೀನರಾದ ಕಾರಣ, ಹೇಯವಾದ

ಕಾರ್ಯಗಳನ್ನು ಮಾಡಲು ಮಾತ್ರ ಲೇಶ ಮಾತ್ರವೂ ಅಳುಕುತ್ತಿರಲಿಲ್ಲ.

ವಿಷಮ ಸಂಕಟ

ಇಸ್ಲಾಂ ಮತಕ್ಕೆ ಸೇರಿದ ಸ್ತ್ರೀಯರ ಮೇಲೆ ಅಪವಾದಗಳನ್ನು ಹೊರಿಸಿ ಅವರಿಗೆ ಅಪಮಾನ ಮಾಡುವುದು, ಖುರಾನಿನ ವಾಕ್ಯಗಳಿಗೆ ಅಪಾರ್ಥವಾಗುವಂತೆ ಪದ ಪಲ್ಲಟ ಮಾಡಿ ವ್ಯಂಗ್ಯವಾಗಿ ಅವುಗಳನ್ನು ಹೇಳಿ ಅಪಹಾಸ್ಯ ಮಾಡುವುದು. ಮುಹಮ್ಮದನಲ್ಲಿ ಅಲಕ್ಷ್ಯಭಾವವನ್ನು ತೋರ್ಪಡಿಸುವುದು— ಇವೇ ಮುಂತಾದವುಗಳು ಅವರು ನಡೆಯಿಸುತ್ತಿದ್ದ ಅಕೃತ್ಯಗಳು. ಇಷ್ಟೇ ಅಲ್ಲ; ತಾವು ತಾತ್ಕಾಲಿಕವಾಗಿ ಮಾತ್ರವೇ ಮುಹಮ್ಮದನ ಅಧಿಕಾರಕ್ಕೆ ತಲೆ ತಗ್ಗಿಸಿರುವುದಾಗಿಯೂ, ಸಮಯವು ಸಿಕ್ಕಿದೊಡನೆಯೇ ಎಲ್ಲರೂ ಅವನಿಗೆ ಪ್ರತಿಭಟಿಸಿ ನಿಲ್ಲಲು ದೃಢ ಸಂಕಲ್ಪಮಾಡಿರುವುದಾಗಿಯೂ, ಕೊರೈಷ್ ಮನೆತನದವರೇ ಮುಂತಾದ ಮುಹಮ್ಮದನ ಶತ್ರುಗಳಿಗೆ ಅವರು ವಾರ್ತೆಯನ್ನು ಮುಟ್ಟಿಸಿದರು. ಮೆದೀನಾ ನಗರದಲ್ಲಿ ಮುಹಮ್ಮದನ ವಿಷಯವಾಗಿ ದ್ರೋಹ ಚಿಂತನೆ ಮಾಡುತ್ತಿದ್ದವರ ಸಂಖ್ಯೆಯು ದಿನ ದಿನಕ್ಕೆ ಹೆಚ್ಚಿತು. ಅವರೆಲ್ಲರೂ ಒಟ್ಟಿಗೆ ಸೇರಿ ಯಾವ ಸಮಯದಲ್ಲಿ ದಂಗೆಯೇಳುವರೋ ಎಂದು ಅವನು ಕಳವಳಪಡುತ್ತಿದ್ದನು. ಅದರ ಜೊತೆಗೆ ಹೊರಗಿನ ಪ್ರಾಂತಗಳಿಂದ ಯಾವ ಸಮಯದಲ್ಲಿ ಶತ್ರುಗಳು ಬಂದು ಮೆದೀನಾ ನಗರಕ್ಕೆ ಮುತ್ತಿಗೆ ಹಾಕುವರೋ ಎಂಬ ಆತಂಕವು ಬೇರೆ ಅವನನ್ನು ಬಾಧಿಸತೊಡಗಿತು. ಇಂತಹ ವಿಷಮ ಸಂಕಟವು ಒದಗಿದರೂ ಮುಹಮ್ಮದನು ಲೇಶ ಮಾತ್ರವೂ ಧೈರ್ಯಗುಂದಲಿಲ್ಲ; ಭಗವಂತನ ಸಹಾಯವನ್ನೇ ನೆರೆ ನಂಬಿ, ಆ ಮಹಾ ಪುರುಷನು ಕಾರ್ಯಕ್ಷೇತ್ರಕ್ಕೆ ನುಗ್ಗಿದನು.

ಯುದ್ಧೋದ್ಯಮ

ನಗರದ ನೆಮ್ಮದಿಗೇ ಭಂಗ ಬರುವ ಸೂಚನೆಗಳು ತಲೆದೋರಿದುದರಿಂದ ತಾನು ಇನ್ನು ತಟಸ್ಥನಾಗಿದ್ದರೆ ಕಾರ್ಯವು ಹದಗೆಡುವುದೆಂದು ಮುಹಮ್ಮದನಿಗೆ ತೋರಿತು. ಅವನು ನಿರ್ವಾಹವಿಲ್ಲದೆ ಅಂಕೆ ತಪ್ಪಿದವರ ಸೊಕ್ಕನ್ನು ಮುರಿಯಬೇಕಾಯಿತು: ಕೆಲವರನ್ನು ಮೆದೀನಾ ನಗರದಿಂದ ಉಚ್ಚಾಟನೆ ಮಾಡಿದನು; ಮತ್ತೆ ಕೆಲವರಿಗೆ ಕಾರಾಗೃಹವಾಸವನ್ನು ವಿಧಿಸಿದನು;

ಒಬ್ಬಿಬ್ಬರಿಗೆ ಮರಣ ದಂಡನೆಯನ್ನೂ ಕೊಟ್ಟನು. ನಗರ ನಿವಾಸಿಗಳ ಒಟ್ಟು ಯೋಗಕ್ಷೇಮದ ದೃಷ್ಟಿಯಿಂದ ಮಹಮ್ಮದನು, ತನಗೆ ಇಷ್ಟವಿಲ್ಲದಿದ್ದರೂ, ಈ ರೀತಿಯಾಗಿ ಶಿಕ್ಷೆಯನ್ನು ವಿಧಿಸಬೇಕಾಯಿತು. ಅವನು ತನ್ನ ಕಡೆಯವರನ್ನು ಸೇರಿಸಿ ಯುದ್ಧದಲ್ಲಿ ಶಿಕ್ಷಣವನ್ನು ಕೊಡುವ ವೇಳೆಗೆ ಸರಿಯಾಗಿ ಕೊರೈಷ್ ಮನೆತನದವರು ಮಕ್ಕಾ ನಗರದಿಂದ ಬಂದು ಮೆದೀನಾ ನಗರವನ್ನು ಮುತ್ತಿದರು. ಮಹಮ್ಮದನು ಗತ್ಯಂತರವನ್ನು ಕಾಣದೆ, ಅವರೊಡನೆ ಯುದ್ಧಕ್ಕೆ ನಿಲ್ಲಬೇಕಾಯಿತು. ಶತ್ರುಸೈನ್ಯದಲ್ಲಿದ್ದಂತೆ ಮಹಮ್ಮದನ ಸೈನ್ಯದಲ್ಲಿ ಸರ್ವ ಸಮೃದ್ಧವಾದ ಅನುಕೂಲ್ಯತೆಯಿರಲಿಲ್ಲ. ಆದರೂ, ಭಗವಂತನ ಮೇಲೆ ಭಾರವನ್ನು ಹಾಕಿ ಮಹಮ್ಮದನೂ ಅವನ ಅನುಯಾಯಿಗಳೂ ಬಹಳವಾಗಿ ಹೆಣಗಿ ಯುದ್ಧ ಮಾಡಿ, ಕೊನೆಗೆ ಬದರ್ ಎಂಬ ಯುದ್ಧರಂಗದಲ್ಲಿ ಜಯಶೀಲರಾದರು. ತನಗೆ ಸೆರೆಸಿಕ್ಕಿದವರಲ್ಲಿ ದಯೆ ತೋರಿಸಿದುದೊಂದು, ಶತ್ರುಪಕ್ಷದವರಿಂದ ದೊರೆತ ಕೊಳ್ಳೆಯಲ್ಲಿ ದೀನಾನಾಥರ ಸಹಾಯಕ್ಕಾಗಿ ಒಂದು ಭಾಗವನ್ನು ತೆಗೆದಿಟ್ಟುದೊಂದು—ಇವೆರಡೂ ಮಹಮ್ಮದನ ಉದಾತ್ತ ವರ್ತನೆಗಳು. ಅರಬ್ಬಿಯವರಲ್ಲಿ ವಿಜೇತರು ಆ ರೀತಿ ಕರುಣೆ ತೋರಿಸಿದುದನ್ನು ಅವರು ಹಿಂದೆ ಎಂದೂ ಕಂಡು ಕೇಳಿದುದೇ ಇಲ್ಲ. ಮಹಮ್ಮದನ ಉದಾತ್ತ ಪ್ರಕೃತಿಯು ಅವರಿಗೆ ವಿಸ್ಮಯವನ್ನುಂಟುಮಾಡಿತು. ಇಸ್ಲಾಂ ಮತದ ಚರಿತ್ರೆಯಲ್ಲಿ ಬದರ್ ಕದನವು ಅತ್ಯಂತ ಪ್ರಾಮುಖ್ಯವಾದುದು. ಅದರಲ್ಲಿ ಮಹಮ್ಮದನು ಜಯಶೀಲನಾಗದೆ ಹೋಗಿದ್ದ ಪಕ್ಷದಲ್ಲಿ ಅವನಾಗಲಿ, ಅವನು ಬೋಧಿಸಿದ ಮತವಾಗಲಿ ಅಭ್ಯುದಯವನ್ನೆಂದಿಗೂ ಕಾಣುತ್ತಿರಲಿಲ್ಲ; ಇಷ್ಟೇ ಅಲ್ಲದೆ, ಮಹಮ್ಮದನೂ ಅವನ ಅನುಯಾಯಿಗಳೂ ಜೀವಿಸಿರುವುದೇ ಆಗ್ಗೆ ದುರ್ಘಟವಾಗುತ್ತಿದ್ದಿತು. ಜಗನ್ನಿಯಾಮಕನು ಸೂತ್ರಧಾರಿಯಾಗಿರುವಲ್ಲಿ ಸಾಧುಗಳಿಗೆ ಭಯವೆಲ್ಲಿಯದು ?

**ದೈವ ಸಹಾಯ**

ಬದರ್ ಕದನದಲ್ಲಿ ತಮಗೆ ವಿಜಯ ಪ್ರಾಪ್ತಿಯಾದುದನ್ನು ಕಂಡು, ಮಹಮ್ಮದನ ಅನುಯಾಯಿಗಳು ಉತ್ಸಾಹದಿಂದ ಹುರಿದುಂಬಿದರು; ತಮಗೆ ದೈವ ಸಹಾಯವುಂಟೆಂಬ ಭರವಸೆಯಿಂದ ಅವರ ಧೈರ್ಯೋತ್ಸಾಹಗಳು ಮೊದಲಿಗಿಮ್ಮಡಿಯಾ

ದುವು. ಭಗವಂತನೇ ತನಗೆ ದಿಕ್ಕೆಂದು ಮುಹಮ್ಮದನು ಎಷ್ಟು ದೃಢವಾದ ನಂಬಿಕೆಯನ್ನಿಟ್ಟುಕೊಂಡಿದ್ದನೆಂಬುದಕ್ಕೆ ಘನವಾದ ಒಂದು ನಿದರ್ಶನವುಂಟು: ಬದರ್ ಕದನವು ನಡೆಯುವ ಸಂದರ್ಭದಲ್ಲಿ ಒಂದು ದಿನ ಮುಹಮ್ಮದನು ತನ್ನ ಗುಡಾರದಲ್ಲಿ ಮಲಗಿ ನಿದ್ದೆಹೋಗುತ್ತಿದ್ದವನು ತಟ್ಟನೆ ಎಚ್ಚತ್ತು ನೋಡುವಲ್ಲಿ, ಶತ್ರುಪಕ್ಷದ ವೀರನೊಬ್ಬನು ಖಡ್ಗಹಸ್ತನಾಗಿ ಅವನ ಬಳಿಯಲ್ಲಿ ನಿಂತಿದ್ದುದನ್ನು ಕಂಡನು. ನಿರಾಯುಧನಾಗಿ ಮಲಗಿದ್ದ ಮುಹಮ್ಮದನನ್ನು ಕಂಡು ಆ ವೀರನು, "ಮುಹಮ್ಮದ್! ಈಗ ಹೇಳು—ಒರೆಯಿಂದ ಹಿರಿದ ಕತ್ತಿಯು ನನ್ನ ಕೈಯಲ್ಲಿದೆ. ನಿನ್ನನ್ನು ಈ ಅವಸ್ಥೆಯಲ್ಲಿ ಯಾವನು ರಕ್ಷಿಸಿ ನನ್ನ ಕೈಯಿಂದ ಬಿಡಿಸಿಕೊಳ್ಳುವವನು? ಬೇಗ ಹೇಳು" ಎಂದನು. ಅದಕ್ಕೆ ಮುಹಮ್ಮದನು ತಡೆಯಿಲ್ಲದೆ, "ಭಗವಂತನು" ಎಂದು ದಿಟ್ಟತನದ ಉತ್ತರವನ್ನು ಹೇಳಲು, ಅವನನ್ನು ಕೊಲ್ಲಲುದ್ಯುಕ್ತನಾಗಿ ಕತ್ತಿಯನ್ನು ಹಿರಿದು ನಿಂತಿದ್ದ ಆ ನರಘಾತುಕನ ಹೃದಯವೂ ಕೂಡ ಆ ಉತ್ತರದಿಂದ ಅನಿರ್ವಚನೀಯವಾದೊಂದು ಪರಿಣಾಮವನ್ನು ಹೊಂದಿತು. ಅವನು ಅಪ್ರತಿಭನಾಗಿ ಶಿಲಾಪ್ರತಿಮೆಯಂತೆ ನಿಂತನು; ಕತ್ತಿಯು ಅವನ ಕೈಯಿಂದ ಜಾರಿ ಕೆಳಗೆ ಬಿದ್ದುಹೋಯಿತು. ಮುಹಮ್ಮದನು ಮಿಂಚಿನ ವೇಗದಲ್ಲಿ ಮೇಲಕ್ಕೆದ್ದು ಆ ಕತ್ತಿಯನ್ನು ತೆಗೆದುಕೊಂಡು ಝಳಪಿಸುತ್ತ ಎದುರಾಳಿಯನ್ನು ನೋಡಿ, "ಈಗ ನಿನ್ನನ್ನು ರಕ್ಷಿಸುವವರು ಯಾರು?" ಎಂದು ಕೇಳಿದನು. ಯೋಧನು ಭಯದಿಂದ ನಡುಗುತ್ತ, "ನನ್ನನ್ನು ಯಾರು ರಕ್ಷಿಸುವರು? ಅಯ್ಯೋ! ನನ್ನನ್ನು ಬಿಡಿಸಿಕೊಳ್ಳುವವರು ಯಾರೂ ಇಲ್ಲವಲ್ಲಾ!" ಎಂದು ಗೋಳಾಡಿದನು. ಮೃತ್ಯುವು ಆಸನ್ನವಾಗಿರುವಾಗಲೂ ಭಗವಂತನೇ ಶರಣೆಂದು ತ್ರಿಕರಣ ಶುದ್ಧಿಯಾಗಿ ನಂಬಿದ್ದ ಮಹಾಪುರುಷನಾದ ಮುಹಮ್ಮದನಿಗೂ, ತನ್ನ ಎದುರಿನಲ್ಲಿಯೇ ನಡೆದುದರ ಒಳಮರ್ಮವನ್ನರಿಯದೆ, ತಾನು ಕೊಲ್ಲಬೇಕೆಂದು ಬಂದವನ ಎದುರಿಗೆ ತಲೆಬಗ್ಗಿಸಿ, ತನಗೆ ರಕ್ಷಕರಾರೂ ಇಲ್ಲವೆಂದು ಮೊರೆಯಿಟ್ಟ ಕಾಪುರುಷನಿಗೂ ಎಲ್ಲಿಯ ಸಾಮ್ಯ? ಮುಹಮ್ಮದನು ಮನಸ್ಸುಮಾಡಿದ್ದರೆ ಕೂಡಲೆ ಶತ್ರುವಿನ ರುಂಡವನ್ನು

ನೆಲಕ್ಕುರುಳಿಸಬಹುದಾಗಿದ್ದಿತು. ಆದರೆ ಸತ್ಪುರುಷನಾದ ಮಹಮ್ಮದ ನಿಗೆ ಸ್ವಪ್ನದಲ್ಲಿಯೂ ಅಂತಹ ಯೋಚನೆಯು ಸಾಧ್ಯವಿಲ್ಲ. ಅವನು ಶತ್ರು ಯೋಧನನ್ನು ಕುರಿತು, "ಹಾಗಾದರೆ ಇಂದಿನಿಂದ ಬುದ್ಧಿ ಕಲಿತು ಕರುಣಾಶಾಲಿಯಾಗಿ ಬಾಳು" ಎಂದು ಹೇಳಿ ಕತ್ತಿಯನ್ನು ಅವನ ಕೈಗೆ ಕೊಟ್ಟನು. ಪ್ರಾಣ ಭಯದಿಂದ ತಲ್ಲಣಿಸುತ್ತಿದ್ದ ಆ ವೀರನಿಗೆ ಇದರಿಂ ದುಂಟಾದ ಪರಿಣಾಮವನ್ನು ವರ್ಣಿಸಲಳವಲ್ಲ. ಅವನು ಆಜೀವವೂ ಮಹಮ್ಮದನ ಸೇವೆಯಲ್ಲಿರುವಾಗ ಶಿಷ್ಯಭಾವವನ್ನವಲಂಬಿಸಿ ಕೃತಾರ್ಥ ನಾದನು.

## ಆರನೆಯ ಅಧ್ಯಾಯ

# ಮುಹಮ್ಮದನ ಅಧಿನಾಯಕತ್ವದ ಒಳಗುಟ್ಟು

ಬದರ್ ಕದನದಲ್ಲಿ ಮುಹಮ್ಮದನು ಜಯಶಾಲಿಯಾಗದೆ ಸೋತು ಹೋಗಿದ್ದ ಪಕ್ಷದಲ್ಲಿ ಇಸ್ಲಾಂ ಮತಕ್ಕೆ ಸರ್ವನಾಶವೇ ಒದಗುತ್ತಿದ್ದಿತು.

**ಬದರ್ ಕದನದ ಫಲಿತಾಂಶ**

ಈ ಅಂಶವು ಮುಹಮ್ಮದನಿಗೆ ಸ್ಪಷ್ಟವಾಗಿ ಗೊತ್ತಾಗಿದ್ದುದರಿಂದಲೇ ಯುದ್ಧಕ್ಕೆ ಸ್ವಲ್ಪ ಮುಂಚಿತವಾಗಿ ಅವನು ಏಕಾಂತವಾಗಿ ಒಂದು ಗುಡಿಸಿಲಿನಲ್ಲಿ ಕುಳಿತು ಕಣ್ಣೀರನ್ನು ಸುರಿಸುತ್ತ ಶೋಕಸಂತಪ್ತನಾಗಿ, "ಸರ್ವಶಕ್ತನಾದ ಜಗದೀಶ್ವರ! ನನ್ನಲ್ಲಿ ದಯೆತೋರಿಸು. ಆಸ್ತಿಕರಾದವರು ಕೆಲವು ಮಂದಿ ಮಾತ್ರವೇ ಇಂದು ಯುದ್ಧದಲ್ಲಿ ಉದ್ಯುಕ್ತರಾಗಿದ್ದೇವೆ. ಇದರಲ್ಲಿ ನಾವು ಸೋತುಹೋಗುವುದಾದರೆ ಇಸ್ಲಾಂ ಮತವೇ ಮುಳುಗಿಹೋಗುತ್ತದೆ. ಆ ಬಳಿಕ ನಿಶ್ಚಲ ಭಕ್ತಿಯಿಂದ ನಿನ್ನನ್ನು ಆರಾಧಿಸುವುದಕ್ಕೂ ನಿನ್ನ ಸಂದೇಶವನ್ನು ಹರಡುವುದಕ್ಕೂ ನಮ್ಮಲ್ಲಿ ಒಬ್ಬರೂ ಉಳಿದಿರುವುದಿಲ್ಲ. ಆದುದರಿಂದ ಇಂದಿನ ಕಾಳಗದಲ್ಲಿ ನಮಗೆ ಜಯವಾಗುವಂತೆ ಅನುಗ್ರಹಿಸು" ಎಂದು ಬೇಡಿಕೊಂಡನು. ಭಗವಂತನು ಅವನ ಪ್ರಾರ್ಥನೆಯನ್ನು ಲಾಲಿಸಿ ಅವನ ಕೋರಿಕೆಯನ್ನು ಸಲ್ಲಿಸಿದನು. ಅಂತು, ಬದರ್ ಕದನದ ಫಲಿತಾಂಶವಾಗಿ ಮುಹಮ್ಮದನ ಪ್ರಾಬಲ್ಯವು ಹೆಚ್ಚಿತು; ಅದರೊಡನೆ ಶತ್ರು ಬಾಧೆಯೂ ಮೊದಲಿಗಿಮ್ಮಡಿಯಾಯಿತು. ಯುದ್ಧದಲ್ಲಿ ಜಯಶಾಲಿಯಾದುದರಿಂದ, ಮದೀನಾ ನಗರಕ್ಕೂ ಅದರ ಸುತ್ತಮುತ್ತಲಿನ ಪ್ರದೇಶಕ್ಕೂ ಮುಹಮ್ಮದನು ನಾಯಕನಾದನು; ಕದನದಲ್ಲಿ ಸೆರೆಸಿಕ್ಕಿದವರಿಗೆ ಕರುಣೆಯನ್ನು ತೋರಿಸಿ, ಶತ್ರುಪಕ್ಷದವರಾದ ಅನೇಕ ಮಂದಿಯನ್ನು ತನ್ನ ಮಿತ್ರರನ್ನಾಗಿ ಮಾರ್ಪಡಿಸಿದನು; ಸೆರೆಯಾಳುಗಳಲ್ಲಿ ಕೆಲವರ ಪೋಷಣೆಯನ್ನು ತಾನೇ ಸ್ವತಃ ಕೈಕೊಂಡು ತನ್ನ ಮನೆಯಿಂದ ಅತ್ಯುತ್ತಮವಾದ ಆಹಾರ ವಸ್ತುಗಳನ್ನು ತರಿಸಿ ಅವರಿಗೆ ಕೊಟ್ಟು, ತಾನು ಖರ್ಜೂರ ಮೊದಲಾದ ಸಾಮಾನ್ಯ ವಸ್ತುಗಳನ್ನು ತಿಂದು ತೃಪ್ತನಾಗುತ್ತಿದ್ದನು. ಯುದ್ಧದಲ್ಲಿ

ಸೆರೆಸಿಕ್ಕಿದವರನ್ನು ಬಿಡುಗಡೆ ಮಾಡಲು ಹಣವನ್ನು ತೆಗೆದುಕೊಳ್ಳುವುದು ಆ ಕಾಲದ ಪದ್ಧತಿಯಾಗಿದ್ದಿತು. ಹಾಗೆ ಹಣವನ್ನು ಕೊಡಲು ನಿರ್ಗತಿಕರಾಗಿದ್ದವರಿಗೆ ಅವನು ದಯೆತೋರಿಸಿ ಅವರನ್ನು ಉಚಿತವಾಗಿಯೇ ಬಿಡುಗಡೆ ಮಾಡಿದನು. ಸೆರೆಯಾಳುಗಳಲ್ಲಿ ಓದು ಬರೆಹಗಳನ್ನು ಬಲ್ಲ ಪ್ರತಿಯೊಬ್ಬನೂ ಹತ್ತು ಮಂದಿ ಬಾಲಕರಿಗೆ ಪಾಠ ಹೇಳಬೇಕೆಂಬ ನಿಯಮದ ಮೇಲೆ ಮಹಮ್ಮದನು ಅವರಿಗೆ ಸ್ವಾತಂತ್ರ್ಯವನ್ನು ಕರುಣಿಸಿದನು. ಅವರು ತಲೆಯೊಂದಕ್ಕೆ ನಾಲ್ಕು ಸಾವಿರ 'ದರ್ಹಂ' ನಾಣ್ಯಗಳನ್ನು ಕೊಡಬೇಕಾಗಿದ್ದಿತು. ಅಷ್ಟು ಹಣವನ್ನು ಕೊಡಲು ಶಕ್ಯರಾಗಿದ್ದವರಿಂದಲೂ ಹಣ ತೆಗೆದುಕೊಳ್ಳದೆ ಮಹಮ್ಮದನು ಈ ನಿಯಮವನ್ನು ವಿಧಿಸಿದುದನ್ನು ನೋಡಿದರೆ ಬಾಲಕರ ವಿದ್ಯಾಭ್ಯಾಸವು ಅತ್ಯಂತ ಬೆಲೆಯುಳ್ಳದೆಂಬುದು ಮಹಮ್ಮದನ ಅಭಿಪ್ರಾಯವೆಂಬುದಕ್ಕೆ ಸಂಶಯವುಂಟೆ? ಸೈನಿಕನ ಕತ್ತಿಗಿಂತಲೂ ಪಂಡಿತನ ಲೇಖನಿಯು ನೂರುಮಡಿ ಮಹತ್ತ್ವವುಳ್ಳದೆಂದು ವಿದ್ಯಾಭಿಮಾನಿಯಾದ ಮಹಮ್ಮದನು ಹೇಳುತ್ತಿದ್ದನು. ಸೆರೆಯಾಳುಗಳಲ್ಲಿ ಮಹಮ್ಮದನು ತೋರಿಸಿದ ಕರುಣೆಗೆ ಅತ್ಯುತ್ತಮವಾದ ಮತ್ತೊಂದು ನಿದರ್ಶನವುಂಟು: ಮಕ್ಕಾ ನಗರ ನಿವಾಸಿಯಾದ ಸೆರೆಯಾಳೊಬ್ಬನು ಶಕ್ತನಾದ ವಾಗ್ಮಿಯೆನಿಸಿ ಪ್ರಸಿದ್ಧನಾಗಿದ್ದನು. ಇಸ್ಲಾಂ ಮತವು ಹೇಯವಾದುದೆಂದು ಬೋಧಿಸಿ ಅದರ ವಿಷಯದಲ್ಲಿ ಜನರಿಗೆ ಅಸಹ್ಯತೆಯುಂಟಾಗುವಂತೆ ಮಾಡುವುದೇ ಅವನ ವ್ರತವಾಗಿದ್ದಿತು. ಅಂಥವನು ಬದರ್ ಕದನದಲ್ಲಿ ಮಹಮ್ಮದನ ಸೈನಿಕರಿಗೆ ಸೆರೆಸಿಕ್ಕಲು, ಅವನ ಹಲ್ಲುಗಳನ್ನುದುರಿಸಿ ಅವನು ಮುಂದೆ ಸುರಸವಾಗಿ ಭಾಷಣ ಮಾಡುವುದನ್ನು ತಪ್ಪಿಸಬೇಕೆಂದು ಸೈನಿಕರೆಲ್ಲರೂ ಮಹಮ್ಮದನಿಗೆ ಸಲಹೆಕೊಟ್ಟರು. ಮಹಮ್ಮದನು ಅವರ ಮಾತಿಗೆ ಕಿವಿಗೊಡದೆ, "ಅವನನ್ನು ಅಂಗಹೀನನನ್ನಾಗಿ ಮಾಡಿದರೆ ದೇವರು ನನ್ನನ್ನೂ ಅಂಗಹೀನನನ್ನಾಗಿ ಮಾಡಿ ನನ್ನ ಅಪರಾಧಕ್ಕೆ ಶಿಕ್ಷೆಯನ್ನು ವಿಧಿಸುವನು" ಎಂದು ಉತ್ತರ ಹೇಳಿದನು. ಹೀಗೆ, ಶತ್ರುಗಳಿಗೂ ಕರುಣೆಯನ್ನು ತೋರಿಸಿದುದರಿಂದ, ಮಹಮ್ಮದನ ಯಶಸ್ಸು ಎಲ್ಲೆಲ್ಲಿಯೂ ಹರಡಿತು.

ಬದರ್ ಕದನದಲ್ಲಿ ಮುಹಮ್ಮದನಿಗೆ ಜಯವಾದುದರಿಂದ ಕೊರೈಷ್ ಮನೆತನದವರು ಧೈರ್ಯಗುಂದಿದರೂ ದ್ವೇಷ ಸಾಧನೆಯನ್ನೇನೂ ಬಿಡಲಿಲ್ಲ. ಶತ್ರು ಪಕ್ಷದ ಯೋಧರ ಸಂಖ್ಯೆಯು ಮುಹಮ್ಮದನ ಕಡೆಯಲ್ಲಿದ್ದವರಿಗಿಂತಲೂ ಅಧಿಕವಾಗಿದ್ದರೂ ಮುಹಮ್ಮದನೇ ಜಯಶೀಲನಾದುದನ್ನು ಕಂಡು ಯೆಹೂದ್ಯರೂ ಇತರರೂ ವಿಸ್ಮಿತರಾಗಿ ಮುಹಮ್ಮದನಿಗೆ ದೈವ ಸಹಾಯವುಂಟೆಂದು ಅನೇಕರು ನಿರ್ಧರ ಮಾಡಿದರು. ಇದರ ಫಲಿತಾಂಶವಾಗಿ ಬಹಳ ಮಂದಿಗೆ ಮುಹಮ್ಮದನಲ್ಲಿ ಆದರವೂ ಗೌರವವೂ ಉಂಟಾದುವು. ಆದರೆ ವಿಜಯಪ್ರಾಪ್ತಿಯೊಂದೇ ಅದಕ್ಕೆ ಕಾರಣವಲ್ಲ; ಮುಹಮ್ಮದನಲ್ಲಿದ್ದ ಅಧಿನಾಯಕತ್ವ ಲಕ್ಷಣಗಳೇ ಅದಕ್ಕೆ ಬಹು ಮಟ್ಟಿಗೆ ಕಾರಣವೆಂಬುದನ್ನು ಸಂಕ್ಷೇಪವಾಗಿ ವಿವರಿಸುವೆವು.—

ಮುಹಮ್ಮದನ ಅಧಿನಾಯಕತ್ವದ ಒಳಗುಟ್ಟು

ಅನಾಥ ಬಾಲಕನಾಗಿದ್ದುದು ಮೊದಲಾಗಿ ಪ್ರಭು ಸ್ಥಾನವನ್ನು ಪಡೆಯುವ ವರೆಗೂ ಮುಹಮ್ಮದನು ನಾನಾ ಸನ್ನಿವೇಶಗಳಲ್ಲಿಯೂ ನಾನಾ ಸ್ಥಿತಿ ಗತಿಗಳಲ್ಲಿಯೂ ಚೆನ್ನಾಗಿ ನುರಿತು ಲೋಕಾನುಭವವನ್ನು ಪಡೆದಿದ್ದನು. ಆದಕಾರಣ, ದೇವಾಯತ್ತವಾಗಿ ಅವನಲ್ಲಿ ನೆಲೆಗೊಂಡಿದ್ದ ಸದ್ಗುಣಗಳು ಉತ್ತಮ ರೀತಿಯಲ್ಲಿ ಪರಿಸ್ಫುಟಗೊಂಡಿದ್ದುವು. ಜನರಿಗೆ ಅಧಿನಾಯಕನಾಗಿ ನಿಂತು ಅವರನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಲು ಅವನಿಗೆ ತಕ್ಕ ಸಾಮರ್ಥ್ಯವಿದ್ದಿತು. ತಾನು ವಿಧಿಸಿದ ನಿಯಮಗಳನ್ನು ಇತರರಂತೆಯೇ ತಾನೂ ಅನುಷ್ಠಾನದಲ್ಲಿ ತರುತ್ತಿದ್ದನು; ಖುರಾನಿನಲ್ಲಿ ಹೇಳಿರುವ ಸದ್ವರ್ತನೆಯ ನಿಯಮಗಳನ್ನು ತಾನು ಸ್ವತಃ ಪರಿಪಾಲಿಸುತ್ತ, ಇತರರೆಲ್ಲರಿಗೂ ಆದರ್ಶಪ್ರಾಯನಾಗಿದ್ದನು. ಖುರಾನಿನ ಯಾವುದಾದರೂ ಪದ್ಯಗಳಿಗೆ ಸರಿಯಾಗಿ ಅರ್ಥ ಸಮನ್ವಯಮಾಡಿ ವಿವರಿಸಬೇಕೆಂದು ಶಿಷ್ಯರು ತನ್ನನ್ನು ಕೇಳಿದಾಗ ಮುಹಮ್ಮದನ ಪತ್ನಿಯಾದ ಆಯೇಷೆಯು, ಮುಹಮ್ಮದನ ಜೀವನ ಕ್ರಮದಲ್ಲಿ ಅದಕ್ಕೆ ಸಂಬಂಧಪಟ್ಟ ಸಂಗತಿಗಳನ್ನೇ ಉದಾಹರಣೆಯಾಗಿ ತಿಳಿಸಿ, ಅವುಗಳನ್ನು ವಿವರಿಸುತ್ತಿದ್ದಳಂತೆ. ಇದಲ್ಲದೆ, ಕೆಲವು ನಿರ್ದಿಷ್ಟ ಸನ್ನಿವೇಶಗಳನ್ನು ಸೂಚಿಸಿ, ಅಂತಹ ವೇಳೆಗಳಲ್ಲಿ ಮುಹ

ಮ್ಮದನು ಹೇಗೆ ವರ್ತಿಸಿದ್ದನೆಂದು ಶಿಷ್ಯರು ಕೇಳಿದಾಗ, ಆಕೆಯು ಅದಕ್ಕೆ ಉತ್ತರವಾಗಿ, ಖುರಾನಿನ ಕೆಲವು ಪದ್ಯಗಳನ್ನು ಓದಿ ಹೇಳುತ್ತಿದ್ದಳಂತೆ. ಹೀಗೆ, ಮಹಮ್ಮದನು ತಾನು ಆಡಿದುದನ್ನು ಮಾಡಿ ತೋರಿಸಿದ ಮಹನೀಯನಾಗಿದ್ದುದರಿಂದಲೇ ಅವನ ಅಧಿನಾಯಕತ್ವವು ಅಷ್ಟು ಫಲಕಾರಿಯಾಗಿ ಪರಿಣಮಿಸಿತು.

ಕೊಟ್ಟ ಭಾಷೆಗೆ ತಪ್ಪದೆ ನಡೆಯುವುದು ಅಧಿನಾಯಕತ್ವದ ಅವಶ್ಯ ಲಕ್ಷಣ. ಮಹಮ್ಮದನು ಇದಕ್ಕೂ ಆದರ್ಶಪ್ರಾಯನಾಗಿದ್ದನು. ಬದರ್ ಕದನದ ವೇಳೆಯಲ್ಲಿ ನಡೆದ ಒಂದು ಚಿತ್ರವಾದ ಸಂಗತಿಯನ್ನು ಇದಕ್ಕೆ ನಿದರ್ಶನವಾಗಿ ಹೇಳಬಹುದು: ಆಗ್ಗೆ ಮಹಮ್ಮದನ ಕಡೆಯ ಸೈನಿಕರ ಸಂಖ್ಯೆಯು ಬಹಳ ಕಡಿಮೆಯಾಗಿದ್ದಿತು. ಆಗಿನ ಸಂದಿಗ್ಧ ಸ್ಥಿತಿಯಲ್ಲಿ ಒಬ್ಬ ಸೈನಿಕನು ಹೆಚ್ಚಾಗಿ ದೊರೆಯುವುದೆಂದರೆ ಹತ್ತು ಮಂದಿಯ ಬೆಲೆಯಾಗಿದ್ದಿತು. ಹೀಗಿರುವಾಗ, ಇಬ್ಬರು ಸೈನಿಕರು ಅಲ್ಲಿಂದ ಹೊರಟು ಮದೀನಾ ನಗರಕ್ಕೆ ಬರುತ್ತಿರುವ ಸಮಯದಲ್ಲಿ ಶತ್ರುಗಳ ಕೈಗೆ ಸಿಕ್ಕಲು, ಶತ್ರುಗಳು ಅವರನ್ನು ತಡೆದರು. ಅವರು ಬಹಳವಾಗಿ ಕೇಳಿಕೊಂಡುದರ ಮೇಲೆ, ಮಹಮ್ಮದನ ಪಕ್ಷವನ್ನು ಬಿಟ್ಟು ಹಿಂದಿರುಗಿ ಬರುವ ಷರತ್ತಿನ ಮೇಲೆ, ಅವರು ಬಿಡುಗಡೆಯಾದರು. ಯಥಾ ಕಾಲದಲ್ಲಿ ಮಹಮ್ಮದನಿಗೆ ಈ ಸಂಗತಿಯು ತಿಳಿದು, ತನಗೆ ಯೋಧರ ಆವಶ್ಯಕತೆಯು ವಿಶೇಷವಾಗಿದ್ದರೂ, ಅಂತಹ ವಿಷಮ ಸಂಕಟದ ವೇಳೆಯಲ್ಲಿಯೂ ಕೂಡ ಅವನು ಆ ಸೈನಿಕರನ್ನು ತನ್ನೊಡನೆ ನಿಲ್ಲಿಸಿಕೊಳ್ಳದೆ, "ಎಂತಹ ಸಂದರ್ಭಗಳೇ ಒದಗಿದರೂ ನಾವು ಎಂದಿಗೂ ವಚನ ಭ್ರಷ್ಟರಾಗಬಾರದು. ಭಗವಂತನ ದಯೆಯೊಂದು ನಮಗಿದ್ದರೆ ಉಳಿದ ಯಾವ ಸಾಧನವಿಲ್ಲದಿದ್ದರೂ ಚಿಂತೆಯಿಲ್ಲ; ನಮಗೆ ಅವನ ಬಲವೇ ಬಲ; ನೀವು ಹೋಗಿ ಬನ್ನಿರಿ" ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟನು. ಮಹಮ್ಮದನ ಇಂತಹ ವರ್ತನೆಯನ್ನು ಕಂಡು ಅವನ ಶತ್ರುಗಳೂ ವಿಸ್ಮಿತರಾದರು. ಮತ್ತೊಂದು ಸಂದರ್ಭದಲ್ಲಿ, ಮಹಮ್ಮದನ ಬಳಿಗೆ ಅವನ ಶತ್ರುಗಳ ಕಡೆಯಿಂದ ರಾಯಭಾರಿಯೊಬ್ಬನು ಬಂದನು. ಆತನು ಮಹಾ ಪುರುಷನಾದ ಮಹಮ್ಮದನ ತೇಜಸ್ವಿತೆ

ಯನ್ನೂ ಸಾಧು ಸ್ವಭಾವವನ್ನೂ ಕಂಡು ಮುಗ್ಧನಾಗಿ ತಾನು ಶಿಷ್ಯವೃತ್ತಿ ಯನ್ನು ಕೈಕೊಂಡು ಗುರುವಿನ ಬಳಿಯಲ್ಲಿಯೇ ನಿಂತುಬಿಡುವುದಾಗಿ ಹೇಳಿದನು. ರಾಯಭಾರಿಯನ್ನು ಹಿಂದಕ್ಕೆ ಕಳುಹಿಸದೆ ಹಾಗೆ ನಿಲ್ಲಿಸಿ ಕೊಳ್ಳುವುದು ಧರ್ಮವಲ್ಲದುದರಿಂದ ಮುಹಮ್ಮದನು ಆತನೊಡನೆ, "ನೀನು ನಿರ್ವಂಚನೆಯಿಂದ ಶತ್ರುಪಕ್ಷದವರ ರಾಯಭಾರವನ್ನು ನೆರ ವೇರಿಸಿ, ಆ ಬಳಿಕ ನನ್ನಲ್ಲಿಗೆ ಬಂದು ಶಿಷ್ಯಭಾವವನ್ನವಲಂಬಿಸಬಹುದು" ಎಂದು ತಿಳಿಸಿದನು. ನ್ಯಾಯಪರತೆಯು ಮುಹಮ್ಮದನಲ್ಲಿದ್ದ ಅಪೇಕ್ಷ ವಾದ ಮತ್ತೊಂದು ಗುಣ. ದ್ವೇಷಿಗಳ ವಿಷಯದಲ್ಲಿಯೂ ನ್ಯಾಯ ಪಥವನ್ನು ಬಿಟ್ಟು ವರ್ತಿಸಕೂಡದೆಂಬುದು ಖುರಾನಿನ ಕಟ್ಟಾಜ್ಞೆ. ಮುಹ ಮ್ಮದನು ನ್ಯಾಯದ ಹಾದಿಯನ್ನು ಬಿಟ್ಟು ಒಂದು ಹಜ್ಜೆಯನ್ನು ಕೂಡ ಅತ್ತಿತ್ತ ಕದಲುತ್ತಿರಲಿಲ್ಲ. ಒಮ್ಮೆ, ಕಳ್ಳತನದ ಅಪರಾಧವು ಹೊತ್ತಿದ್ದ ಧನಿಕಳಾದ ಒಬ್ಬ ಗೃಹಸ್ಥಳು ಮುಹಮ್ಮದನಿಗೆ ಆಪ್ತನಾದ ಒಬ್ಬ ಗೃಹಸ್ಥ ನಿಂದ ಅವನಿಗೆ ಶಿಫಾರಸು ಹೇಳಿಸಿದಳು. ಮುಹಮ್ಮದನು, "ಏನಯ್ಯಾ! ಹೀಗೆ ಹೇಳುವೆ? ಭಗವಂತನ ಧರ್ಮಸೂತ್ರಗಳನ್ನು ವಿಚಾರ ನಡೆಯ ವಂತೆ ನನಗೆ ಸಲಹೆ ಹೇಳುವೆಯಲ್ಲಾ! ಬಡವರಿಗೆ ಕ್ರೂರ ದಂಡನೆ ಯನ್ನು ವಿಧಿಸಿ, ಧನಿಕರಿಗೆ ಅಲ್ಪ ಶಿಕ್ಷೆಯನ್ನು ಮಾಡಿದುದರಿಂದ ಎಷ್ಟೋ ಜನಾಂಗಗಳು ಹಿಂದೆ ನಾಶವಾಗಿ ಹೋದುವು. ಪಕ್ಷಪಾತವು ನನ್ನಿಂದ ಸಾಧ್ಯವಿಲ್ಲ; ನನ್ನ ಮಗಳ ಮೇಲೆ ಕಳ್ಳತನದ ಅಪರಾಧವು ಹೊತ್ತರೂ, ಅವಳ ಕಳ್ಳಗೈಯನ್ನೂ ನಾನು ಕಡಿಸಿಹಾಕತಕ್ಕವನು". ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟನು.

ಒಮ್ಮೆ, ಶತ್ರುಗಳಿಂದ ಕೊಳ್ಳೆಹೊಡೆದ ಹಣವು ಹಂಚಿಕೆಯಾಗು ತ್ತಿದ್ದಿತಂತೆ; ಹಂಚುತ್ತಿದ್ದ ಮುಹಮ್ಮದನ ಸುತ್ತಲೂ ಅವನ ಜನರು ನಿಂತುಕೊಂಡಿದ್ದರಂತೆ. ಆಗ ಮುಹಮ್ಮದನ ಮೇಲೆ ಭಾರವನ್ನು ಬಿಟ್ಟು ನಿಂತುಕೊಂಡಿದ್ದವನೊಬ್ಬನನ್ನು ಮುಹಮ್ಮದನು ತನ್ನ ಬೆತ್ತದಿಂದ ಹಿಂದಕ್ಕೆ ತಳ್ಳಿದನಂತೆ. ಹಾಗೆ ಮಾಡುವಲ್ಲಿ, ಬೆತ್ತದ ತುದಿಯು ಅವನ ಮುಖಕ್ಕೆ ತಗುಲಿ ಚರ್ಮವು ಸುಲಿದುಹೋಯಿತಂತೆ. ಮುಹಮ್ಮದನು ಮನನೊಂದು, "ಅಯ್ಯಾ! ನೀನೂ ಇದೇ ಬೆತ್ತವನ್ನು ತೆಗೆದು

ಕೊಂಡು ನನ್ನ ಮುಖದ ಚರ್ಮವೂ ಸುಲಿದುಹೋಗುವಂತೆ ಮಾಡು'' ಎಂದನಂತೆ. ಅದನ್ನು ಕಂಡು ಎಲ್ಲರೂ ವಿಸ್ಮಿತರಾದರಂತೆ.

ಬಿಸಿಲು ವಿಪರೀತವಾಗಿ ಕಾಯುತ್ತ ದಗೆಯು ಸೀಮೆಯಾಗಿರುವ ಅರಬ್ಬೀ ದೇಶದಲ್ಲಿ ಮುಹಮ್ಮದನು ತನ್ನ ಅನುಯಾಯಿಗಳೊಡನೆ ಸಂಚಾರ ಹೊರಟಾಗ, ದಣಿವನ್ನು ಹೋಗಲಾಡಿಸಿ ವಿಶ್ರಮಿಸಿಕೊಳ್ಳಲು ನೆಳಲಿನಿಂದ ಕೂಡಿದ ಶೀತಲ ಪ್ರದೇಶವನ್ನು ಇತರರು ಅವನಿಗೆ ಬಿಟ್ಟು ಕೊಡಲು ಯತ್ನಿಸಿದರೆ ಅವನು, ''ಹಾಗೆ ಮಾಡಬೇಡಿರಿ, ಎಲ್ಲರೂ ಒಂದೇ. ಯಾರು ಮೊಟ್ಟಮೊದಲು ಇಲ್ಲಿಗೆ ಬಂದಿರೋ ಅವರೇ ಆ ಸ್ಥಳ ದಲ್ಲಿ ಕುಳಿತು ವಿಶ್ರಮಿಸಿಕೊಳ್ಳಲು ಅರ್ಹರು ; ನನ್ನದೇನು ಹೆಚ್ಚು ?'' ಎಂದು ಹೇಳುತ್ತಿದ್ದನಂತೆ.

ಅನೇಕರನ್ನು ವಶವರ್ತಿಗಳನ್ನಾಗಿ ಮಾಡಿಕೊಂಡು ಪ್ರಮುಖ ನಾಗಿರತಕ್ಕವನಲ್ಲಿ ಸ್ವಾರ್ಥ ತ್ಯಾಗ ಬುದ್ಧಿಯು ಅತ್ಯವಶ್ಯವಾಗಿರಬೇಕು. ಮುಹಮ್ಮದನಲ್ಲಿ ಈ ಗುಣವೂ ನೆಲೆಗೊಂಡಿದ್ದಿತು. ''ಆಸ್ತಿಕ ಸ್ವಭಾವ ವುಳ್ಳವರು ಬಡವರಿಗೂ ಅನಾಥರಿಗೂ ಸೆರೆ ಸಿಕ್ಕಿದವರಿಗೂ ಆಹಾರ ವನ್ನೊದಗಿಸಿ ಸಂತೋಷಪಡುತ್ತಾರೆ'' ಎಂಬುದು ಖುರಾನಿನ ಉಪ ದೇಶ ವಾಕ್ಯ. ಸ್ವಾರ್ಥ ಸಾಧನೆಯ ಲವ ಲೇಶವನ್ನೂ ಇಟ್ಟುಕೊಳ್ಳದೆ ಪರೋಪಕಾರ ಮಾಡುವುದೇ ಮುಹಮ್ಮದನಲ್ಲಿ ಪ್ರಕೃತಿ ಸಿದ್ಧವಾಗಿ ನೆಲಸಿದ್ದ ಸದ್ಗುಣ: ಒಮ್ಮೆ, ಒಬ್ಬ ಗೃಹಸ್ಥಳು ಮುಹಮ್ಮದನಿಗೆ ಒಂದು ದುಪ್ಪಟಿಯನ್ನು ತಂದು ಕೊಟ್ಟಳಂತೆ. ಹೊದಿಕೆಯಿಲ್ಲದೆ ಬಹಳ ತೊಂದರೆಯಾಗಿದ್ದುದರಿಂದ ಅವನು ಅದನ್ನು ಸಂತೋಷವಾಗಿ ಸ್ವೀಕರಿ ಸಿದನಂತೆ. ಆಗ ಸಮೀಪದಲ್ಲಿದ್ದವನೊಬ್ಬನು, ''ಆಹಾ! ಎಷ್ಟು ಸೊಗ ಸಾದ ದುಪ್ಪಟಿ!'' ಎಂದನಂತೆ. ಮುಹಮ್ಮದನು ಒಡನೆಯೇ, ''ತೆಗೆದು ಕೊಳ್ಳಯ್ಯಾ! ಇದನ್ನು ನೀನೇ ಹೊದೆದುಕೊ'' ಎಂದು ಹೇಳಿ ಅದನ್ನು ಅವನಿಗೆ ಕೊಟ್ಟು ಹೊರಟುಹೋದನಂತೆ. ಇತರರು ಅದನ್ನು ಕಂಡು, ದುಪ್ಪಟಿಯನ್ನು ತೆಗೆದುಕೊಂಡ ಮನುಷ್ಯನನ್ನು ಗದರಿಸಿ, ''ಮುಹ ಮ್ಮದನಿಗೆ ದುಪ್ಪಟಿಯಿಲ್ಲದೆ ಬಹಳ ತೊಂದರೆಯಾಗಿದ್ದಿತು. ನೀನು ಅದನ್ನು ಕಸಿದುಕೊಂಡೆ. ಕೇಳಿದುದನ್ನು ಕೊಡದೆ, ಇಲ್ಲವೆಂದು ಹೇಳುವ

ಕಠಿಣತೆಯೋ ಆತನಲ್ಲಿಲ್ಲವೆಂದರಿತೂ ನೀನು ಹೀಗೆ ಮಾಡಬಹುದೆ?'' ಎಂದ ರಂತೆ. ಅದಕ್ಕೆ ಆ ಮನುಷ್ಯನು, ''ಇದೆಲ್ಲವನ್ನೂ ನಾನು ಬಲ್ಲೆನು. ಆದರೆ ಮುಹಮ್ಮದನು ಹೊದೆದ ಬಟ್ಟೆಯನ್ನು ಧರಿಸಿದರೆ ಪವಿತ್ರನಾಗುವೆ ನೆಂಬ ಭಾವನೆಯಿಂದ ನಾನು ಹೀಗೆ ಮಾಡಿದೆನು. ನನ್ನ ಹೆಣಕ್ಕೆ ಕೂಡ ಈ ದುಪ್ಪಟಿಯನ್ನು ಸುತ್ತಿ ಸಮಾಧಿಯಾಗಬೇಕೆಂಬುದೇ ನನ್ನ ಆಸೆ'' ಎಂದು ಉತ್ತರ ಹೇಳಿದನಂತೆ.

ಅರಬ್ಬೀ ದೇಶದಲ್ಲಿ ತೋಟಗಳು ಅತಿ ವಿರಳವಾದುದರಿಂದ ಅವಕ್ಕೆ ವಿಶೇಷ ಬೆಲೆ. ಧನಿಕನೊಬ್ಬನು ಮುಹಮ್ಮದನಿಗೆ ಏಳು ತೋಟಗಳನ್ನು ಕೊಟ್ಟನು. ಮುಹಮ್ಮದನು ಅವುಗಳನ್ನು ಸ್ವಂತ ಉಪಯೋಗಕ್ಕಿಟ್ಟು ಕೊಳ್ಳದೆ ಅವುಗಳ ವರಮಾನವನ್ನು ಧರ್ಮಾರ್ಥವಾಗಿ ಉಪಯೋಗಿ ಸುವುದಕ್ಕಾಗಿ ಪ್ರತಿ ವರ್ಷವೂ ಅವುಗಳಿಂದ ಬಂದ ಹಣವನ್ನು ಬಡವರಿಗೆ ಹಂಚುತ್ತಿದ್ದನು.

ಬಹಳ ಬಡವನಾಗಿದ್ದ ಮುಹಮ್ಮದನ ಸ್ನೇಹಿತನೊಬ್ಬನಿಗೆ ಮದುವೆ ಯಾಯಿತು. ನಂಟರಿಗೆ ಊಟವಿಡಲು ಅವನ ಮನೆಯಲ್ಲಿ ಗೋಧಿಯ ಹಿಟ್ಟು ಕೂಡ ಇರಲಿಲ್ಲ. ಮುಹಮ್ಮದನು ಅಂದಿನ ರಾತ್ರಿಯ ಅಡಿಗೆಗೆ ಕೂಡ ಹಿಟ್ಟನ್ನು ಉಳಿಸಿಕೊಳ್ಳದೆ, ತನ್ನ ಮನೆಯಲ್ಲಿದ್ದ ಒಂದು ಚೀಲದ ಹಿಟ್ಟನ್ನು ಸ್ನೇಹಿತನ ಮನೆಗೆ ಕಳುಹಿಸಿಬಿಟ್ಟನು. ಒಮ್ಮೆ, ಅತಿಥಿ ಯೊಬ್ಬನು ಸಂಜೆಯ ವೇಳೆಯಲ್ಲಿ ಮುಹಮ್ಮದನ ಮನೆಗೆ ಬಂದನು. ಆಗ ಮೇಕೆಯ ಹಾಲು ಹೊರತು ಮತ್ತೇನೂ ಅವನ ಮನೆಯಲ್ಲಿರಲಿಲ್ಲ. ಆ ಹಾಲನ್ನೂ ಮುಹಮ್ಮದನು ಅತಿಥಿಗೇ ಕೊಟ್ಟು, ತಾನು ಹಸಿವಿನಿಂದಲೇ ರಾತ್ರಿಯನ್ನು ಕಳೆದನು.

ವ್ಯವಹಾರದಲ್ಲಿ ನಿಷ್ಕಲ್ಮಷವಾದ ಮನಸ್ಸಿನಿಂದ ವರ್ತಿಸಬೇಕಾ ದುದು ಅಧಿನಾಯಕನಲ್ಲಿರಬೇಕಾದ ಸದ್ಗುಣ. ಮುಹಮ್ಮದನಲ್ಲಿ ಆ ಗುಣವೂ ವಿಶೇಷವಾಗಿದ್ದಿತು. ಅವನು ಬಹಳ ಉದಾರಿಯಾದುದರಿಂದ, ಅದರ ಫಲಿತಾಂಶವಾಗಿ, ಯಾವಾಗಲೂ ಸಾಲದಲ್ಲಿ ಮುಳುಗಿ ತೇಲು ತ್ತಿದ್ದನು; ಆದರೂ ವ್ಯವಹಾರದ ಔಚಿತ್ಯವನ್ನು ಮೀರದೆ ನಡೆಯು ತ್ತಿದ್ದನು. ಒಮ್ಮೆ, ಮುಹಮ್ಮದನು ಒಬ್ಬನಿಂದ ಒಂದು ಒಂಟೆಯನ್ನು

ಎರವಲಾಗಿ ಪಡೆದು ತನ್ನ ಕೆಲಸ ತೀರಿದಮೇಲೆ ಅದಕ್ಕಿಂತ ಉತ್ತಮವಾದ ಒಂಟೆಯನ್ನು ಹಿಂದಕ್ಕೆ ಕೊಟ್ಟು, "ಉಚಿತವಾದ ರೀತಿಯಲ್ಲಿ ಸಾಲ ವನ್ನು ತೀರಿಸಬೇಕಾದುದು ನಮ್ಮ ಅವಶ್ಯ ಧರ್ಮ" ಎಂದು ತಿಳಿಸಿದನು. ಕುತ್ಸಿತ ಬುದ್ಧಿಯುಳ್ಳ ಧನಿಕನೊಬ್ಬನಿಂದ ಮಹಮ್ಮದನು ಒಮ್ಮೆ ಸಾಲವನ್ನು ತಂದಿದ್ದನು. ಸಾಲಗಾರನು ಹಣವನ್ನು ಹಿಂದಕ್ಕೆ ಕೇಳಲು ಬಂದಾಗ ಮಹಮ್ಮದನಲ್ಲಿ ಹಣವಿಲ್ಲದೆ ತೊಂದರೆಪಡುತ್ತಿರುವಲ್ಲಿ, ಧನಿ ಕನು ಅವನನ್ನು ಗದರಿಸತೊಡಗಿದನು. ಪರಕೀಯನೊಬ್ಬನು ತಮ್ಮ ಗುರುವನ್ನು ಹೀಗೆ ಗದರಿಸುವುದನ್ನು ನೋಡಿ ಮಹಮ್ಮದನ ಶಿಷ್ಯರು ಕುಪಿತರಾಗಿ, "ಯಾರಲ್ಲಿ ಈ ಮಾತನ್ನಾಡುತ್ತಿರುವೆಯೆಂಬ ಪರಿಜ್ಞಾ ನವು ನಿನಗುಂಟೊ?" ಎಂದು ಗರ್ಜಿಸಿದರು. ಧನಿಕನು, "ಅವನು ಯಾರಾದರೆ ನನಗೇನು? ಕೊಟ್ಟ ಒಡವೆಯನ್ನು ಕೇಳಿದುದೇ ತಪ್ಪೋ?" ಎಂದು ಕೂಗಾಡಿದನು. ಮಹಮ್ಮದನು ತನ್ನವರನ್ನು ಸಮಾಧಾನ ಪಡಿಸಿ, ಧನಿಕನದು ಎಳ್ಳಷ್ಟೂ ತಪ್ಪಿಲ್ಲವೆಂದು ಶಾಂತತೆಯಿಂದ ತನ್ನವರಿಗೇ ಬುದ್ಧಿ ಹೇಳಿದನು.

ಒಮ್ಮೆ, ಮದೀನಾ ನಗರದ ಹೊರಗೆ ವ್ಯಾಪಾರಿಗಳು ಬೀಡು ಬಿಟ್ಟಿ ದ್ದರು. ಅವರಲ್ಲಿದ್ದ ಒಂದು ಸೊಗಸಾದ ಕೆಂಪು ಬಣ್ಣದ ಒಂಟೆಯನ್ನು ಕಂಡು ಅದನ್ನು ತಾನಿಟ್ಟುಕೊಳ್ಳಬೇಕೆಂಬ ಅಭಿಲಾಷೆಯಿಂದ, ಅದಕ್ಕೆ ಅವರು ಹೇಳಿದಷ್ಟು ಕ್ರಯವನ್ನು ಕೊಡುವುದಾಗಿ ಒಪ್ಪಿ, ಮಹ ಮ್ಮದನು ಒಂಟೆಯನ್ನು ಹೊಡೆದುಕೊಂಡು ಹೋದನು. ಅವನು ಯಾರೆಂಬುದನ್ನು ಕೂಡ ವಿಚಾರಿಸದೆ ಒಂಟೆಯನ್ನು ಕೊಟ್ಟುಬಿಟ್ಟ ತರುವಾಯ, ಹಣವನ್ನು ಅವನು ಕಳುಹಿಸುವನೋ ಇಲ್ಲವೋ ಎಂದು ವ್ಯಾಪಾರಿಗಳಿಗೆ ಸಂಶಯ ಹುಟ್ಟಿತು. ತಮ್ಮ ಅವಿವೇಕತನವನ್ನು ಅವ ರೆಲ್ಲರೂ ಹಳಿದುಕೊಳ್ಳುತ್ತಿರುವಲ್ಲಿ, ಅವರೊಡನಿದ್ದ ಹೆಂಗುಸೊಬ್ಬಳು, "ಹೀಗೇತಕ್ಕೆ ಚಿಂತಿಸುತ್ತೀರಿ? ಅಂತಹ ತೇಜಸ್ವಿಯನ್ನು ನಾನು ಇದು ವರೆಗೂ ಎಲ್ಲಿಯೂ ನೋಡಿಲ್ಲ; ಅವನೆಂದಿಗೂ ಮೋಸಮಾಡಲಾರನು" ಎಂದಳು. ಆ ದಿನ ರಾತ್ರಿಯೇ ಮಹಮ್ಮದನು ಒಂಟೆಯ ಬೆಲೆಯನ್ನು ಕಳುಹಿಸಿಕೊಟ್ಟನೆಂದು ಹೇಳಬೇಕೆ?

ನಾಯಕನಿಗೆ ಅವಶ್ಯವಾಗಿರಬೇಕಾದ ಮತ್ತೊಂದು ಗುಣವೇನೆಂದರೆ, ಜನರಿಗೆ ವಿವೇಕವನ್ನು ಬೋಧಿಸಿ ಒಳ್ಳೆಯ ದಾರಿಗೆ ತರುವ ಸಾಮರ್ಥ್ಯ. ಮಹಮ್ಮದನಲ್ಲಿ ಈ ಗುಣವೂ ರೂಢ ಮೂಲವಾಗಿ ನೆಲೆಗೊಂಡಿದ್ದಿತು. ಯಾರೊಬ್ಬರ ಮನಸ್ಸಿಗೂ ಲೇಶ ಮಾತ್ರವೂ ವ್ಯಥೆಯಾಗದಂತೆ ಒಳ್ಳೆಯ ಮಾತಿನಿಂದಲೇ ಮಹಮ್ಮದನು ಅವರನ್ನು ಸನ್ಮಾರ್ಗಕ್ಕೆ ತರುತ್ತಿದ್ದನು. ಅವನು ಯಾರೊಡನೆಯೂ ಬಿರುನುಡಿಗಳನ್ನಾಡಿದವನಲ್ಲ. ಅರಬ್ಬೀ ದೇಶದಲ್ಲಿ ಸ್ತ್ರೀಯರೇ ಆಗಲಿ, ಪುರುಷರೇ ಆಗಲಿ ಹೊಳೆಯಲ್ಲಿಯೂ ಹೊಂಡದಲ್ಲಿಯೂ ಸ್ನಾನ ಮಾಡುವಾಗ ಲೇಶವೂ ಲಜ್ಜೆಯಿಲ್ಲದೆ ಬೆತ್ತಲೆಯಾಗಿರುತ್ತಿದ್ದರು. ದೇವಸ್ಥಾನದಲ್ಲಿ ಪ್ರದಕ್ಷಿಣೆ ಮಾಡುವಾಗಲೂ ಕೆಲವರು ನಗ್ನಾವಸ್ಥೆಯಲ್ಲಿರುತ್ತಿದ್ದುದು ಆಗಿನ ಪದ್ಧತಿ. ಮಹಮ್ಮದನು ಎಲ್ಲರ ಮನಸ್ಸಿಗೂ ನಾಟುವಂತೆ ಬೋಧನೆ ಮಾಡಿ ಈ ಕೆಟ್ಟ ಪದ್ಧತಿಯನ್ನು ತಪ್ಪಿಸಿದುದಲ್ಲದೆ, ಇನ್ನೂ ಅನೇಕ ದುರಾಚಾರಗಳನ್ನೂ ತಪ್ಪಿಸಿ ಯಶಸ್ವಿಯಾದನು.

ಇತರರ ಮನಸ್ಸನ್ನು ಕರಗಿಸಿ ಅವರನ್ನು ತನ್ನ ವಶವರ್ತಿಗಳನ್ನಾಗಿ ಮಾಡಿಕೊಳ್ಳಲಿಚ್ಛಿಸುವ ಅಧಿನಾಯಕನು ತಾನು ಇತರರಿಗಿಂತ ಹೆಚ್ಚೆಂಬ ಭಾವನೆಯನ್ನಿಟ್ಟುಕೊಂಡಿರಲೇ ಕೂಡದು. ಈ ವಿಷಯದಲ್ಲಿಯೂ ಮಹಮ್ಮದನು ಆದರ್ಶ ಪುರುಷನಾಗಿದ್ದನು. "ನಿಮ್ಮಂತೆಯೇ ನಾನೂ ಸಾಮಾನ್ಯ ಮನುಷ್ಯನು" ಎಂದು ಆತನು ಖುರಾನಿನಲ್ಲಿ ಹೇಳಿದ್ದಾನೆ. ಮೆದೀನಾ ನಗರದಲ್ಲಿ ಮಸೀದಿಯನ್ನು ಕಟ್ಟಿದಾಗ, ಮಹಮ್ಮದನು ಇತರ ಕೆಲಸಗಾರರಂತೆಯೇ ತಾನೂ ಗೋಡೆಯ ಕೆಲಸವನ್ನು ಮಾಡಿ ಮೈಗೆ ಕೆಸರು ಹತ್ತಿಸಿಕೊಂಡಿರುತ್ತಿದ್ದನು. ಶಿಷ್ಯರು ಎಷ್ಟು ಬಗೆಯಲ್ಲಿ ಪ್ರಾರ್ಥಿಸಿದರೂ ಅವನು ಆ ಕೆಲಸವನ್ನು ಬಿಡುತ್ತಿರಲಿಲ್ಲ. ಒಮ್ಮೆ, ಮಹಮ್ಮದನು ತನ್ನ ಅನುಯಾಯಿಗಳೊಡನೆ ಪ್ರಯಾಣ ಹೊರಟಾಗ, ದಾರಿಯಲ್ಲಿ ಅಡಿಗೆಯಾಗಬೇಕಾಯಿತು. ಒಬ್ಬೊಬ್ಬರು ಒಂದೊಂದು ಕೆಲಸವನ್ನು ವಹಿಸಿಕೊಳ್ಳಲು, ಮಹಮ್ಮದನು ಸೌದೆಯನ್ನೊದಗಿಸುವ ಕೆಲಸವನ್ನೊಪ್ಪಿಕೊಂಡನು. ಆದರೆ ಅವನ ಶಿಷ್ಯರು ಅದನ್ನು ನಿಷೇಧಿಸಿ, ಗುರು ಸ್ವರೂಪನಾದ ಆತನು ಅಂತಹ ಕೆಲಸವನ್ನು ಮಾಡ

ಕೂಡದೆಂದು ಪ್ರಾರ್ಥಿಸಿದರು. ಅದಕ್ಕೆ ಮುಹಮ್ಮದನು, "ನಾನು ಈ ಕೆಲಸವನ್ನು ಮಾಡಲೇ ಬೇಕು; ನಿಮಗಿಂತಲೂ ನಾನು ಶ್ರೇಷ್ಠನೆಂಬ ಭಾವನೆಯೇ ನನಗಿಲ್ಲ. ಯಾವನು ತನ್ನ ಮಿತ್ರರಿಗಿಂತಲೂ ತಾನು ಶ್ರೇಷ್ಠನೆಂಬ ಅಹಂಕಾರದಿಂದ ಮೆರೆಯುವನೋ ಅಂಥವನ ವಿಷಯದಲ್ಲಿ ಭಗವಂತನು ಎಂದಿಗೂ ಪ್ರಸನ್ನನಾಗುವುದಿಲ್ಲ" ಎಂದು ಉತ್ತರ ಹೇಳಿದನು.

ಬದರ್ ಕದನವು ನಡೆದಾಗ ಮುಹಮ್ಮದನ ಸೈನ್ಯದಲ್ಲಿ ಒಂಟೆಗಳು ಕೆಲವು ಮಾತ್ರವೇ ಇದ್ದುವು. ಮೂರು ಮೂರು ಮಂದಿಗೆ ಒಂದೊಂದು ಒಂಟೆಯಂತೆ ಅವರು ಸರದಿಯ ಮೇರೆಗೆ ಸವಾರಿ ಮಾಡಿಕೊಂಡು ಪ್ರಯಾಣ ಮಾಡಬೇಕಾಗಿದ್ದಿತು. ಮುಹಮ್ಮದನ ಜೊತೆಯಲ್ಲಿದ್ದ ಕೆಲವರು ತಮ್ಮ ತಮ್ಮ ಸರದಿಯನ್ನು ಉಪಯೋಗಿಸಿಕೊಳ್ಳದೆ ಮುಹಮ್ಮದನೇ ದಾರಿಯುದ್ದಕ್ಕೂ ಒಂಟೆಯ ಮೇಲೆ ಸವಾರಿ ಮಾಡಬೇಕೆಂದು ಪ್ರಾರ್ಥಿಸಿದರು. ಮುಹಮ್ಮದನು ಅದಕ್ಕೊಪ್ಪದೆ, "ನೀವು ನನಗಿಂತಲೂ ಹೆಚ್ಚಾಗಿ ನಡೆಯಲಾರಿರಿ; ಕಾಲು ನೋವು ಎಲ್ಲರಿಗೂ ಒಂದೇ" ಎಂದು ಹೇಳಿದನು. ಮುಹಮ್ಮದನ ಶಿಷ್ಯರು ಅವನನ್ನು ಕುರಿತು ಉತ್ಪ್ರೇಕ್ಷೆಗಳಿಂದ ತುಂಬಿದ ಸ್ತೋತ್ರಗಳನ್ನು ಮಾಡುತ್ತಿದ್ದರು. ಅದನ್ನು ಕೇಳಿ ಮುಹಮ್ಮದನು, "ನನ್ನ ವಿಷಯದಲ್ಲಿ ಹೀಗೆ ಅತಿಶಯೋಕ್ತಿಗಳನ್ನಾಡಬೇಡಿರಿ; ಕ್ರೈಸ್ತರು ಏಸುವನ್ನು ಹೊಗಳುವಂತೆ ನೀವು ನನ್ನನ್ನು ಹೊಗಳಬೇಡಿರಿ; ನಾನು ಭಗವಂತನ ಅಡಿಯಾಳಾದ ಮತ ಸ್ಥಾಪಕನೇ ಹೊರತು ಅದಕ್ಕಿಂತ ಹೆಚ್ಚಿನವನಲ್ಲ" ಎಂದು ಉತ್ತರ ಹೇಳಿದನಂತೆ. ಮುಹಮ್ಮದನ ಶಿಷ್ಯನಾದ ಪಾಳೆಯಗಾರನೊಬ್ಬನು, "ಜನರೆಲ್ಲರೂ ತಮಗೆ ಇನ್ನು ಮುಂದೆ ದಂಡಪ್ರಣಾಮ ಮಾಡಬೇಕಾದುದು ಯುಕ್ತವೆಂದು ನನಗೆ ತೋರುತ್ತದೆ" ಎಂದನಂತೆ. ಮುಹಮ್ಮದನು ಅವನನ್ನು ಕುರಿತು, "ನಾನು ಸತ್ತಮೇಲೆ ನನ್ನ ಗೋರಿಯ ಬಳಿಯಲ್ಲಿ ನೀನು ದಂಡಪ್ರಣಾಮ ಮಾಡುವೆಯಾ?" ಎಂದು ಕೇಳಿದನಂತೆ. ಪಾಳೆಯಗಾರನು, ಇಲ್ಲ ಎನ್ನಲು, ಮುಹಮ್ಮದನು, "ಹಾಗಾದರೆ ನಾನು ಬದುಕಿರುವಾಗ ನನಗೇತಕ್ಕೆ ದಂಡಪ್ರಣಾಮ ಮಾಡಬೇಕು?" ಎಂದನಂತೆ.

ಬದರ್ ಕದನವು ಮುಗಿದ ಮೇಲೆ ಮುಹಮ್ಮದನಿಗೆ ಒಂದು ಮದುವೆಯ ಮನೆಗೆ ಆಹ್ವಾನವು ಬಂದಿತು. ಆ ಕದನದಲ್ಲಿ ಅವನು ಜಯಶೀಲನಾದುದನ್ನು ಕುರಿತು, ಬಾಲಿಕೆಯರು ಆ ಮದುವೆಯ ಮನೆಯಲ್ಲಿ ಹಾಡುಗಳನ್ನು ಹೇಳುವಾಗ, ನಾಳೆ ನಡೆಯುವುದನ್ನು ಕೂಡ ಇಂದೇ ಹೇಳಬಲ್ಲ ಮಹಾ ಪುರುಷನು ನಮ್ಮ ಗುರುವಾಗಿ ಲಭಿಸಿದ್ದಾನೆ ಎಂದು ತಾತ್ಪರ್ಯವಾಗುವಂತೆ ಹೇಳಿದರಂತೆ. ಆಗ ಮುಹಮ್ಮದನು, "ಇನ್ನು ಮುಂದೆ ಇಂತಹ ಹಾಡುಗಳನ್ನು ಹೇಳಬೇಡಿರಿ; ಎಲ್ಲಿ! ಬೇರೆ ಹಾಡುಗಳನ್ನು ಹೇಳಿರಿ, ಸಂತೋಷದಿಂದ ಕೇಳುವೆನು" ಎಂದು ಹೇಳಿ ಅವರು ಆ ಹಾಡುಗಳನ್ನು ಹೇಳದಂತೆ ತಡೆದನಂತೆ.

ಅಂತು, ಇವೆಲ್ಲ ಸದ್ಗುಣಗಳೂ ಇದ್ದುದರಿಂದ ಮುಹಮ್ಮದನು ಜನರಲ್ಲಿ ಪ್ರಮುಖನಾಗಿ ನಿಲ್ಲಲು ಯೋಗ್ಯನೆನಿಸಿದನು. ಅವನ ಅಧಿನಾಯಕತ್ವವು ಬಹಳ ಸಮರ್ಪಕವಾಗಿ ನೆರವೇರಿತು.

## ಹನ್ನೆರಡನೆಯ ಅಧ್ಯಾಯ

# ಊಹುದ್ ಕದನ

ಬದರ್ ಕದನದಲ್ಲಿ ಪರಾಜಯಹೊಂದಿದುದರಿಂದ ಕೊರೈಷ್ ಮನೆತನದವರು ಖಿನ್ನ ಮನಸ್ಕರಾದರು. ಅವರಲ್ಲಿ ಕೆಲವು ಮಂದಿ ಅನಾಮಧೇಯರು, ವೀರಾಗ್ರಣಿಗಳಾದ ತಮ್ಮನ್ನು ಸೋಲಿಸಿದರೆಂಬ ಅಪಮಾನ ಕಲ್ಪನೆಯಿಂದ ರೋಷಭೀಷಣರಾಗಿ, ಮತ್ತೊಮ್ಮೆ ಮೆದೀನಾ ನಗರವನ್ನು ಮುತ್ತಿ ಶತ್ರುಗಳನ್ನು ಧ್ವಂಸ ಮಾಡಬೇಕೆಂದು ಛಲವನ್ನು ತೊಟ್ಟರು ; ಯಾರ ಮುಖವನ್ನು ನೋಡಿದರೂ ದ್ವೇಷ ಸಾಧನೆಯು ಜಪವೇ ಕಂಡುಬರುತ್ತಿದ್ದಿತು. ಬದರ್ ಕದನದಲ್ಲಿ ತಮ್ಮ ಕಡೆಯ ಮುಖ್ಯಸ್ಥರು ಬಹು ಮಂದಿ ಮೃತಪಟ್ಟಿದ್ದುದರಿಂದ, ಆ ಕದನದ ಕಾಲದಲ್ಲಿ ವರ್ತಕ ಮಂಡಲಿಯೊಡನೆ ಸಿರಿಯಾ ದೇಶಕ್ಕೆ ವ್ಯಾಪಾರಕ್ಕಾಗಿ ಹೋಗಿದ್ದ ಅಬೂ ಸಫ್ಯಾನನೆಂಬೊಬ್ಬನನ್ನು ಸೇನಾಧಿಪತಿಯಾಗಿ ಆರಿಸಿ, ಆತನು ಸಿರಿಯಾ ದೇಶದಲ್ಲಿ ಸರಕುಗಳ ಮಾರಾಟದಿಂದ ಸಂಪಾದಿಸಿದ್ದ ಲಾಭವನ್ನೆಲ್ಲ ಮೆದೀನಾ ನಗರದ ಮುತ್ತಿಗೆಯ ವೆಚ್ಚಕ್ಕೆ ಮುಟ್ಟಿಸಬೇಕೆಂದು ಅವರೆಲ್ಲರೂ ನಿಷ್ಕರ್ಷೆ ಮಾಡಿ, ಒಂದು ವರುಷದೊಳಗಾಗಿ ಮೂರು ಸಾವಿರ ಮಂದಿ ಸೈನಿಕರುಳ್ಳ ಒಂದು ದಂಡನ್ನು ಸಿದ್ಧಗೊಳಿಸಿದರು. ಕ್ರಿ. ಶ. ೬೨೫ರಲ್ಲಿ ಅವರು ವಿಜಯ ಯಾತ್ರೆ ಹೊರಟು, ಯುದ್ಧ ಕಾಲದಲ್ಲಿ ರಣ ಕೋಲಾಹಲದ ಗೀತೆಗಳನ್ನು ಹಾಡಿ ಸೈನಿಕರನ್ನು ಹುರಿದುಂಬಿಸುವ ಉದ್ದೇಶದಿಂದ ಕೆಲವರು ಸ್ತ್ರೀಯರನ್ನೂ ತಮ್ಮೊಡನೆ ಕರೆದುಕೊಂಡರು ; ಮೆದೀನಾ ನಗರಕ್ಕೆ ಕಾಲು ಗಾವುದ ದೂರದಲ್ಲಿರುವ ಊಹುದ್ ಗುಡ್ಡದ ತಪ್ಪಲಿನಲ್ಲಿ ಬೀಡು ಬಿಟ್ಟು ಮೆದೀನಾ ನಗರದ ಹುಲ್ಲುಗಾವಲುಗಳನ್ನೆಲ್ಲ ಸ್ವಾಧೀನಪಡಿಸಿಕೊಂಡರು. ಬೆಳೆದು ನಿಂತಿದ್ದ ಪೈರುಗಳನ್ನೆಲ್ಲ ಧ್ವಂಸ ಮಾಡಲು ಅವರು ಕುದುರೆಗಳನ್ನೂ ಒಂಟೆಗಳನ್ನೂ ಬಿಟ್ಟು, ಮೆದೀನಾ ನಗರದವರ ಹೊಲಗಳಿಗೂ ತೋಟಗಳಿಗೂ ಎಷ್ಟು ವಿಧವಾಗಿ ನಷ್ಟಪಡಿಸುವುದು ಸಾಧ್ಯವೋ ಅಷ್ಟು ವಿಧಗಳಲ್ಲಿಯೂ ಪ್ರವರ್ತಿಸಿದರು.

ಮುಹಮ್ಮದನು ತನ್ನ ಆಪ್ತರ ಸಲಹೆಗಳನ್ನು ಕೇಳುವುದಕ್ಕಾಗಿ ಮದೀನಾ ನಗರದಲ್ಲಿ ಒಂದು ಸಭೆಯನ್ನು ಸೇರಿಸಿದನು. ಯಾವು ದಾದರೂ ಮಹಾ ಕಾರ್ಯವನ್ನು ನೆರವೇರಿಸಬೇಕಾಗಿ ಬಂದಾಗ್ಗೆ ಅವನು ತನ್ನ ಆಪ್ತ ವರ್ಗದವರ ಆಲೋಚನೆಯನ್ನು ತಪ್ಪದೆ ಕೇಳುತ್ತಿದ್ದನು. ಭವಿಷ್ಯತ್ತಿನ ವಿಚಾರವನ್ನು ಸೂಚಿಸುವ ಕೆಲವು ದೃಶ್ಯಗಳನ್ನು ತಾನು ಕಂಡೆನೆಂದು ಮುಹಮ್ಮದನು ಅವರೆಲ್ಲರಿಗೂ ತಿಳಿಸಿ ಅವುಗಳ ಅರ್ಥವಿವರಣೆ ಯನ್ನೂ ಮಾಡಿದನು. ಅವನ ಕತ್ತಿಯ ತುದಿಯು ಮುರಿದುಹೋಗಿ ದ್ದಂತೆ ದೃಶ್ಯವನ್ನು ಕಂಡುದರಿಂದ ತನ್ನ ದೇಹಕ್ಕೆ ಘಾಸಿಯುಂಟಾಗು ವುದೆಂದೂ, ತಾನು ಉಕ್ಕಿನ ಉಂಗುರಗಳ ಕವಚವನ್ನು ಧರಿಸಿದ್ದಂತೆ ದೃಶ್ಯವು ಕಂಡುಬಂದುದರಿಂದ ಯೋಧರೆಲ್ಲರೂ ಮದೀನಾ ನಗರದ ಕೋಟೆಯನ್ನು ಬಿಟ್ಟುಹೋಗದೆ ಶತ್ರುಗಳೊಡನೆ ಕಾದಾಡಬೇಕೆಂಬ ಅಂಶವು ಅದರಿಂದ ಸೂಚಿತವಾಯಿತೆಂದೂ, ಹಸುಗಳು ವಧೆಯಾಗು ತ್ತಿದ್ದಂತೆ ಮೂರನೆಯ ದೃಶ್ಯವು ಗೋಚರಿಸಿದುದರಿಂದ ತನ್ನವರಿಗೆ ತೊಂದರೆಯಾಗುವುದೆಂಬುದನ್ನು ಅದು ಸೂಚಿಸಿತೆಂದೂ ಮುಹಮ್ಮದನು ಅಭಿಪ್ರಾಯಪಟ್ಟು, ತಾವು ಕೋಟೆಯನ್ನು ಬಿಟ್ಟು ಕದಲದೆ ಶತ್ರುದಳ ವನ್ನು ಅಲ್ಲಿಂದಲೇ ಹಿಮ್ಮೆಟ್ಟಿಸಬೇಕೆಂದು ತನ್ನವರಿಗೆ ಸಲಹೆ ಹೇಳಿದನು. ಅನುಭವಸ್ಥರಾದ ವಿವೇಕಿಗಳೆಲ್ಲರೂ ಆ ಸಲಹೆಯನ್ನು ಅನುಮೋದಿ ಸಿದರು; ಆದರೆ ಅವರ ಸಂಖ್ಯೆಯು ಹೆಚ್ಚಾಗಿರಲಿಲ್ಲ. ಹೆಚ್ಚು ಸಂಖ್ಯೆ ಯವರಾದ ತರುಣರೊಬ್ಬರೂ ಇದಕ್ಕೆ ಸಮ್ಮತಿಸದೆ ಕೋಟೆಯ ಬಾಗಿಲನ್ನು ಹಾಕಿಸಿ ಯುದ್ಧ ಮಾಡುವುದು ಹೇಡಿತನವೆಂದು ವಾದಿ ಸಿದರು. ಕೊನೆಗೆ, ಮುಹಮ್ಮದನು ನಿರ್ವಾಹವಿಲ್ಲದೆ ತರುಣರ ಹೇಳಿ ಕೆಗೇ ಕಿವಿಗೊಡಬೇಕಾಯಿತು. ಮುಹಮ್ಮದನ ಸೈನ್ಯವು ಮದೀನಾ ನಗರದಿಂದ ಹೊರಟಿತು.

ಮುಹಮ್ಮದನ ಕಡೆಯಲ್ಲಿ ಒಂದು ಸಾವಿರ ಮಂದಿ ಯೋಧರೂ, ಇಬ್ಬರೇ ಅಶ್ವಾರೋಹಿಗಳಾದ ರಾಹುತರೂ ಇದ್ದರು. ಶತ್ರು ಪಕ್ಷದ ಲ್ಲಾದರೋ ಮೂರು ಸಾವಿರ ಮಂದಿ ಯೋಧರೂ, ಇನ್ನೂರು ಮಂದಿ ರಾಹುತರೂ ಇದ್ದರು. ಮುಹಮ್ಮದನಿಗೆ ಹೀಗೆ ಸಾಧನ ಸಂಪತ್ತುಗಳು

ಕಡಿಮೆಯಾಗಿದ್ದರೂ, ಯುದ್ಧೋತ್ಸಾಹದಲ್ಲಿ ಮಾತ್ರ ಅವನ ಸೈನಿಕರು ಯಾರಿಗೂ ಕಡಿಮೆಯಾಗಿರಲಿಲ್ಲ. ಮುಹಮ್ಮದನು ಕುಶಲನಾದ ಸೈನ್ಯಾಧಿಪನೂ ಆಗಿದ್ದನು. ಹಿಂಭಾಗದಿಂದ ಶತ್ರುಗಳು ಬಂದು ಮುತ್ತಲು ಅವಕಾಶವಿಲ್ಲದಂತೆ ಊಹುದ್ ಗುಡ್ಡದ ಬಂಡೆಗಳ ಮುಂದೆ ಸೈನ್ಯವನ್ನು ಸರಿಯಾಗಿ ನಿಲ್ಲಿಸಿ ವ್ಯೂಹ ರಚನೆ ಮಾಡಿ, ಯೋಧರೆಲ್ಲರೂ ಧನುರ್ಬಾಣ ಸಮೇತರಾಗಿ ಅಲ್ಲಿರಬೇಕೆಂದೂ, ಎಂತಹ ದಾರುಣ ಸ್ಥಿತಿ ಬಂದರೂ ಅವರು ಆ ಸ್ಥಳವನ್ನು ಬಿಟ್ಟು ಕದಲಕೂಡದೆಂದೂ ಮುಹಮ್ಮದನು ಅವರೆಲ್ಲರಿಗೂ ಕಟ್ಟಾಜ್ಞೆ ಮಾಡಿದನು.

ಉಭಯ ಪಕ್ಷದವರೂ ಉತ್ಸಾಹದಿಂದ ಯುದ್ಧಮಾಡುತ್ತಿರುವಲ್ಲಿ, ಮುಹಮ್ಮದೀಯರು ಶತ್ರುದಳವನ್ನು ಅಪ್ಪಳಿಸಿ ಹೊಡೆದರು. ಅಬೂದುಜನನೂ ಹಂಜನೂ ಪ್ರಾಣವನ್ನು ಹುಲ್ಲಿಗೆ ಸಮ ಮಾಡಿ ಹೊಡೆದಾಡಿದರು. ಅವರ ಅಸಮಾನವಾದ ಪರಾಕ್ರಮದೆದುರಿಗೆ ಕೊರೈಷ್ ವಂಶದ ವೀರರೆಲ್ಲರೂ ತಳಮಳಗೊಂಡರು. ಅವರ ಮೇಲ್ಪಂಕ್ತಿಯನ್ನನುಸರಿಸಿ ಉಳಿದ ಮುಹಮ್ಮದೀಯ ಯೋಧರೂ ಅತುಳ ಪರಾಕ್ರಮದಿಂದ ಕಾದಿದರು. ಸಿದ್ದಿಕ ಗುಲಾಮನೊಬ್ಬನ ಭರ್ಜಿಯ ತಿವಿತಕ್ಕೆ ಸಿಕ್ಕಿ ಹಂಜನು ಮೃತ್ಯುವಿನ ಪಾಲಾದನು. ಇದನ್ನು ಕಂಡು ಮುಹಮ್ಮದೀಯರು ರೋಷಭೀಷಣರಾಗಿ ರಣಮತ್ತತೆಯಿಂದ ಕಾದಿದರು. ಅವರ ಕೈ ಮೇಲಾಗಿ ಶತ್ರುಗಳು ಮಕ್ಕಾ ನಗರದ ಕಡೆಗೆ ಓಡತೊಡಗಿದರು. ಆದರೇನು? ಮುಹಮ್ಮದೀಯರಿಗೆ ಕೈಗೆ ಬಂದ ತುತ್ತು ಬಾಯಿಗೆ ಬಾರದೆ ಹೋಯಿತು: ಶತ್ರುಗಳು ಪಲಾಯನ ಮಾಡಿದುದನ್ನು ಕಂಡು ವ್ಯೂಹದಲ್ಲಿದ್ದ ಐವತ್ತು ಮಂದಿ ಯೋಧರು ಕೊಳ್ಳೆಯ ಹಣದ ಆಸೆಯಿಂದ ತಮ್ಮ ಸ್ಥಳವನ್ನು ಬಿಟ್ಟು ಓಡಿದರು. ಶತ್ರು ಸೈನ್ಯದಲ್ಲಿ ಅಶ್ವಾರೋಹಿಗಳ ನಾಯಕನಾದ ಖಾಲಿದ್ದನು ಈ ಸುಸಮಯವನ್ನು ಪಯೋಗಿಸಿಕೊಂಡು ತನ್ನಲ್ಲಿದ್ದ ರಾಹುತರ ಸೈನ್ಯದೊಡನೆ ನುಗ್ಗಿ ಮುಹಮ್ಮದೀಯರ ಮೇಲೆ ಬೀಳಲು, ವ್ಯೂಹದ ಕಟ್ಟು ಸಡಿಲಿ ಅಸ್ತವ್ಯಸ್ತವಾಯಿತು.

ತಾಯಿಬೇರನ್ನು ಕಡಿದುಹಾಕಿದರೆ ಮರವು ತಾನಾಗಿಯೇ ಒಣಗಿ ಹೋಗುವುದೆಂಬ ಆಲೋಚನೆಯಿಂದ, ಮುಹಮ್ಮದನನ್ನು ಕೊಂದುಹಾಕ

ಬೇಕೆಂದು ಶತ್ರುಗಳು ಸಂಕಲ್ಪಮಾಡಿದರು. ಮುಹಮ್ಮದನಿಗೆ ಆಗ ವಿಷಮ ಸಂಕಟವೊದಗಿತು. ಏಕೆಂದರೆ, ಆವನ ಸೈನ್ಯವು ಎರಡು ಭಾಗವಾಗಿ ಚದರಿಹೋಗಿದ್ದಿತು. ಊಹುದ್ ಗುಡ್ಡದ ಕಡೆಗೆ ಓಡಿಹೋದಲ್ಲದೆ ಅವನ ಕಡೆಯವರಿಗೆ ಉಳಿಗಾಲವಿರಲಿಲ್ಲ. ತಾನೊಬ್ಬನೇ ಓಡಿಹೋಗಿ ಪ್ರಾಣವನ್ನುಳಿಸಿಕೊಳ್ಳಲು ಮುಹಮ್ಮದನಿಗೆ ಇಷ್ಟವಿರಲಿಲ್ಲ. ದೂರದಲ್ಲಿದ್ದ ತನ್ನ ಸೈನಿಕರನ್ನು ಕೂಗಿದರೆ ತಾನಿರುವ ಸ್ಥಳವು ಗೊತ್ತಾಗಿ ಶತ್ರುಗಳು ಅವನನ್ನು ಕೊಲ್ಲಲು ಅನುಕೂಲಿಸುವಹಾಗಿದ್ದಿತು; ಆದರೂ ಧೈರ್ಯಮಾಡಿ ಉಚ್ಚಸ್ವರದಲ್ಲಿ, ''ನಾನು ಇಲ್ಲಿದ್ದೇನೆ; ನನ್ನ ಕಡೆಗೆ ಎಲ್ಲರೂ ಓಡಿಬಂದು ಒಟ್ಟಿಗೆ ಸೇರಿರಿ'' ಎಂದು ಕೂಗಿದನು. ಇದನ್ನು ಕೇಳಿ ತನ್ನವರು ಮಾತ್ರವಲ್ಲದೆ ಶತ್ರುಗಳೂ ಅಲ್ಲಿಗೆ ಓಡಿಬಂದರು. ಉಭಯ ಪಕ್ಷದವರಿಗೂ ರಭಸದಿಂದ ಯುದ್ಧವು ನಡೆದು ಮುಹಮ್ಮದನಿಗೂ ಬಹಳ ಪೆಟ್ಟುಗಳು ಬಿದ್ದು ರಕ್ತವು ಹರಿಯಿತು. ಅವನ ಸೈನಿಕರು ಅವನ ಸುತ್ತಲೂ ಅಭೇದ್ಯವಾದ ಕೋಟೆಯಂತೆ ಸುತ್ತುಗಟ್ಟಿ ನಿಂತು ಶತ್ರುಗಳೊಡನೆ ಹೋರಾಡುತ್ತ, ಸ್ವಲ್ಪ ಸ್ವಲ್ಪವಾಗಿ ಬೆಟ್ಟದ ಕಡೆಗೆ ಸರಿಯುತ್ತ ಬಂದರು. ಮುಹಮ್ಮದನ ಸೈನ್ಯವು ಮತ್ತೆ ಒಟ್ಟಿಗೆ ಸೇರಿದುದರಿಂದ ಶತ್ರುಗಳ ಸಂಕಲ್ಪವು ನೆರವೇರಲಿಲ್ಲ. ಈ ಮಧ್ಯೇ ಮುಹಮ್ಮದನ ಕಡೆಯವರು ಬೆಟ್ಟದ ಮೇಲಿನಿಂದ ಶತ್ರುಗಳಮೇಲೆ ಕಲ್ಲುಗಳನ್ನು ಎಸೆಯತೊಡಗಿದರು. ಕಲ್ಲುಗಳ ಪೆಟ್ಟಿನಿಂದಲೂ ಬಾಣಗಳ ಮಳೆಯಿಂದಲೂ ಶತ್ರುಗಳು ಶಕ್ತಿಗುಂದಿ ರಣ ಭೂಮಿಯಿಂದ ಹಿಮ್ಮೆಟ್ಟಿದರು. ಮುಹಮ್ಮದನು ಆ ಸಮಯವನ್ನುಪಯೋಗಿಸಿಕೊಂಡು ಮೆದೀನಾ ನಗರಕ್ಕೆ ತನ್ನವರೊಡನೆ ಹೊರಟು, ಶತ್ರುಗಳನ್ನು ಬೆನ್ನಟ್ಟಿ ಹೋಗಲು ಒಂದು ಸೈನ್ಯವನ್ನು ಕಳುಹಿಸಿದನು.

## ಎಂಟನೆಯ ಅಧ್ಯಾಯ

# ವಿಜಯೋತ್ಸಾಹ

ಉಹುದ್ ಕದನವಾದ ಬಳಿಕ ಯೆಹೂದ್ಯರಿಗೂ ಮುಹಮ್ಮದೀಯರಿಗೂ ದ್ವೇಷವು ಹೆಚ್ಚಿತು. ಯೆಹೂದ್ಯರು ಮುಹಮ್ಮದನಲ್ಲಿ ಈರ್ಷ್ಯೆಯುಳ್ಳವರಾಗಿದ್ದರೆಂಬುದನ್ನೂ ಅವರು ಮುಹಮ್ಮದೀಯರಿಗೆ ನಾನಾವಿಧಗಳಲ್ಲಿ ಕಿರುಕುಳವನ್ನು ಕೊಡುತ್ತಿದ್ದರೆಂಬುದನ್ನೂ ಹಿಂದೆಯೇ ಹೇಳಿದೆ. ಅವರು ಮುಹಮ್ಮದನೊಡನೆ ಮಾಡಿಕೊಂಡಿದ್ದ ಒಪ್ಪಂದಕ್ಕೆ ಲಕ್ಷ್ಯಕೊಡದೆ, ಖುರಾನಿನ ವಿಷಯದಲ್ಲಿಯೂ ಕುಲಸ್ತ್ರೀಯರ ವಿಷಯದಲ್ಲಿಯೂ ಕುಹಕವನ್ನು ಹೆಚ್ಚಿಸಿದರು. ಅವರಲ್ಲಿದ್ದ ಕಾಬನೆಂಬ ಕವಿಯೊಬ್ಬನು ಇಸ್ಲಾಂ ಮತವನ್ನು ಅಪಹಾಸ್ಯಕ್ಕೀಡುಮಾಡುವ ಉದ್ದೇಶದಿಂದ ಅನೇಕ ಕವನಗಳನ್ನು ಹೊಸೆದು ಸೈನಿಕರ ಮುಂದೆ ಅವನ್ನು ರಾಗದಿಂದ ಹಾಡಿ ಅವರಿಗೆ ಜುಗುಪ್ಸೆಯನ್ನುಂಟುಮಾಡಲು ಯತ್ನಿಸಿದನು; ಮುಹಮ್ಮದನ ಆಧಿಪತ್ಯಕ್ಕೆ ಸೇರಿದ್ದ ರಾಷ್ಟ್ರದಲ್ಲಿ ದ್ರೋಹಕರವಾದ ಘೋರ ಕೃತ್ಯಗಳನ್ನು ಮಾಡುವುದಕ್ಕೂ ಅವನು ಕೈಹಾಕಿದನು. ಅತ್ತ, ಮದೀನಾ ನಗರಕ್ಕೆ ಸ್ವಲ್ಪ ದೂರದಲ್ಲಿದ್ದ ಖೈಬರ್ ಪ್ರಾಂತದಲ್ಲಿ ಅಬೂರಫಾ-ಬಿ-ಸಲ್ಲಾಮ್ ಎಂಬೊಬ್ಬ ಯೆಹೂದ್ಯ ಘಾತುಕನು ತನ್ನವರೊಡನೆ ನೆಲೆಗೊಂಡು ಮುಹಮ್ಮದನನ್ನು ತೊಂದರೆಪಡಿಸತೊಡಗಿದನು. ಮುಹಮ್ಮದೀಯರಲ್ಲಿಯೂ ಅವರ ಗುರುವಿನಲ್ಲಿಯೂ ಅವನಿಗಿದ್ದ ಅಕಾರಣವಾದ ದ್ವೇಷದಿಂದ ಅವನು 'ಸುಲೇಂ,' 'ಘಟಫಾನ್' ಮುಂತಾದ ಅರಬ್ಬೀ ಪಡೆಗಳನ್ನು ಮುಹಮ್ಮದನಿಗೆ ವಿರೋಧವಾಗಿ ಎತ್ತಿಕಟ್ಟಿದನು. ಈ ಘಾತುಕರಿಬ್ಬರನ್ನೂ ದಂಡಿಸಿದಲ್ಲದೆ ರಾಷ್ಟ್ರದ ಯೋಗಕ್ಷೇಮವನ್ನು ಕಾಪಾಡುವುದು ಅಸಾಧ್ಯವಾಗಿ ತೋರಿ, ನಿರ್ವಾಹವಿಲ್ಲದೆ ಮುಹಮ್ಮದನು ಅವರಿಗೆ ಮರಣ ದಂಡನೆಯನ್ನು ವಿಧಿಸಿದನು.

**ದ್ರೋಹಿಗಳಿಗೆ ಶಿಕ್ಷೆ**

ಮೃತರಾದ ಆ ಇಬ್ಬರು ದ್ರೋಹಿಗಳ ಮಿತ್ರರು ಮುಹಮ್ಮದನ ಕಡೆಯವರನ್ನು ಕಾಡತೊಡಗಿದರು. ಮುಹಮ್ಮದನು ಕ್ಷಮೆಯನ್ನು

ತೋರಿಸಿದಷ್ಟೂ ಅವರು ತಮ್ಮ ಉಚ್ಛೃಂಖಲ ವೃತ್ತಿಯನ್ನು ಹೆಚ್ಚು ಹೆಚ್ಚಾಗಿ ಮೆರೆಯಿಸತೊಡಗಿದರು. ಅವರಿಂದ ಘೋರವಾದ ಪ್ರಜಾಪೀಡೆಗೆ ಆರಂಭವಾಯಿತು. ಸ್ತ್ರೀ ಜಾಹಿರರಾಗಿದ್ದ ಆ ವಿಷಯ ಲಂಪಟರ ಹಾವಳಿಯನ್ನು ತಡೆಯಲಾರದೆ ಮುಹಮ್ಮದೀಯರು ಅವರ ಮೇಲೆ ಆಗಾಗ ಕೈಮಾಡುತ್ತಿದ್ದರು. ಒಂದು ಸಂದರ್ಭದಲ್ಲಿ ದೊಡ್ಡ ಗಲಭೆಯಾಗಿ, ಉಭಯ ಪಕ್ಷಗಳಲ್ಲಿಯೂ ಹಲವರು ಮೃತಪಟ್ಟರು; ರಕ್ತದ ಕೋಡಿಯು ಹರಿಯಿತು. ಅಷ್ಟರಲ್ಲಿ ಮುಹಮ್ಮದನು ಅಲ್ಲಿಗೆ ಬಂದು, ತನ್ನವರಿಗೆ ಸಮಾಧಾನ ಹೇಳಿ, ಹೊಡೆದಾಟವನ್ನು ನಿಲ್ಲಿಸುವಂತೆ ಅಪ್ಪಣೆ ಮಾಡಿ, ಅಂದಿನ ವಿದ್ಯಮಾನಗಳನ್ನು ಕೂಲಂಕಷವಾಗಿ ವಿಚಾರಣೆ ಮಾಡಿದನು. ದಂಗೆಕೋರರಾದ ಯೆಹೂದ್ಯರೆಲ್ಲರೂ ಮುಹಮ್ಮದೀಯ ಮತ ಸ್ವೀಕಾರ ಮಾಡಿದರೆ ಮದೀನಾ ನಗರದಲ್ಲಿರಬಹುದೆಂದೂ ಅದಕ್ಕೆ ಸಮ್ಮತಿಸದ ಪಕ್ಷಕ್ಕೆ ಅವರೆಲ್ಲರೂ ತನ್ನ ರಾಷ್ಟ್ರದಿಂದ ಮತ್ತೆಲ್ಲಿಗಾದರೂ ಹೊರಟುಹೋಗಬೇಕೆಂದೂ ಮುಹಮ್ಮದನು ಅಪ್ಪಣೆ ಮಾಡಿದನು; ಮೊದಮೊದಲು ಅವರು ಇದಕ್ಕೆ ಲಕ್ಷ್ಯಗೊಡದೆ ಹಾವಳಿ ಮಾಡುತ್ತಿದ್ದರೂ, ಮುಹಮ್ಮದನ ಉಪಟಳವನ್ನು ತಾಳಲಾರದೆ, ಕೊನೆಗೆ ಅವನ ರಾಷ್ಟ್ರವನ್ನು ಬಿಟ್ಟು ಹೋಗಬೇಕಾಯಿತು. ಅವರಲ್ಲಿ ಕೆಲವರು ಖೈಬರ್ ಪ್ರಾಂತಕ್ಕೆ ವಲಸೆ ಹೋಗಿ, ಮುಹಮ್ಮದನ ಮೇಲೆ ದ್ವೇಷವನ್ನು ತೀರಿಸಿಕೊಳ್ಳುವ ಉಪಾಯವು ಯಾವುದೆಂಬ ಆಲೋಚನೆಯಲ್ಲಿ ಮಗ್ನರಾದರು.

*ಮುಹಮ್ಮದೀಯ ರಾಷ್ಟ್ರದಿಂದ ಕೆಲವು ಮಂದಿ ಯೆಹೂದ್ಯರ ಉಚ್ಚಾಟನೆ*

ಊಹುದ್ ಕದನವಾದ ಬಳಿಕ ಅರಬ್ಬೀ ದೇಶದ ಎಲ್ಲ ಬುಡಕಟ್ಟಿನವರೂ ಇಸ್ಲಾಂ ಮತಕ್ಕೆ ವಿರೋಧಿಗಳಾಗಿ ಪ್ರತಿಭಟಿಸಿ ನಿಂತರು. ಕೇವಲ ಪ್ರಬಲರಾಗಿದ್ದ ಕೊರೈಷ್ ಮನೆತನದವರೂ ಯೆಹೂದ್ಯರೂ ಇದನ್ನು ಕಂಡು ಉತ್ಸಾಹಿತರಾದರು. ಮೊದಲಿನಿಂದಲೂ ಹೊಗೆಯಾಡುತ್ತಿದ್ದ ಅವರ ದ್ವೇಷಾಸೂಯೆಗಳು ಥಟ್ಟನೆ ಪ್ರಜ್ವಲಿತವಾದುವು. ಈ ಮಧ್ಯೇ ಕೆಲವರು ಕಪಟಿಗಳು ಮುಹಮ್ಮದನಿಗೆ ಮಿತ್ರ

*ನಾನಾ ಮುಖವಾದ ತೊಂದರೆ*

ಮುಖದಿಂದ ಶತ್ರುಗಳಾಗುವ ಉದ್ದೇಶದಿಂದ ಅವನಲ್ಲಿ ಶಿಷ್ಯವೃತ್ತಿಯ ನ್ನವಲಂಬಿಸಿದ ಸಟನೆಯನ್ನು ಹೂಡಿದರು. ಯಾವ ಕ್ಷಣದಲ್ಲಿ ನೋಡಿ ದರೂ ಮುಹಮ್ಮದನ ರಾಷ್ಟ್ರದಲ್ಲಿ ಎಲ್ಲಿಯಾದರೂ ಒಂದು ಕಡೆ ಗಲಭೆ ಯುಂಟಾಗಿ ಶತ್ರುಗಳ ಬಾಧೆಯು ತಲೆದೋರುವ ಭಯವು ಇದ್ದೇ ಇದ್ದಿತು. ಈ ವಿಧದ ದುರವಸ್ಥೆಯಿಂದ ಮುಹಮ್ಮದನ ಅನುಯಾಯಿ ಗಳು, ಕಾಡುಕಿಚ್ಚಿನ ಮಧ್ಯದಲ್ಲಿ ಸಿಕ್ಕಿದ ಜಿಂಕೆಗಳಂತೆ, ಕಾತರಪಡಬೇಕಾ ಯಿತು. ಯಾವ ಸಮಯದಲ್ಲಿ ಶತ್ರುಗಳು ಬಂದು ಮೇಲೆ ಬೀಳುವರೋ ಎಂಬ ಭೀತಿಯಿಂದ ಅವರು ಹಗಲಿರುಳೆನ್ನದೆ ಸರ್ವದಾ ಆಯುಧಪಾಣಿ ಗಳಾಗಿಯೇ ಇರಬೇಕಾಗಿದ್ದಿತು. ಈ ದುರವಸ್ಥೆಯನ್ನು ಸಹಿಸುವುದು ಸಾಧ್ಯವಿಲ್ಲವೆಂದು ಅವರೆಲ್ಲರೂ ಮೊರೆಯಿಡಲು, ಮುಹಮ್ಮದನು ತಾಳ್ಮೆ ಯಿಂದ ಅವರನ್ನು ಸಮಾಧಾನಗೊಳಿಸಿದನು. ಆ ಬಳಿಕ ಕೆಲವು ದಿನಗ ಳಲ್ಲಿಯೇ ನಡೆದ ಒಂದು ಘಟನೆಯಿಂದ ಅವರೆಲ್ಲರೂ ಉತ್ಸಾಹಗೊಂಡರು: ಒಂದು ದಿನ ಬೆಳಗಿನ ಜಾಮದಲ್ಲಿ ಶತ್ರುಗಳು ಮದೀನಾ ನಗರವನ್ನು ಮುತ್ತುವರೆಂಬ ವದಂತಿಯು ಹುಟ್ಟಿ ಮುಹಮ್ಮದನ ಕಡೆಯವರೆಲ್ಲರೂ ಕಳವಳಗೊಂಡು ಮುಂದಣ ಕರ್ತವ್ಯವನ್ನು ನಿರ್ಧರಿಸಲು ತಮ್ಮ ಗುರು ವಿನ ಬಳಿಗೆ ಹೋಗುವುದರಲ್ಲಿದ್ದರು. ಆ ವೇಳೆಗೆ ಸರಿಯಾಗಿ, ಬಹಳವಾಗಿ ಬಳಲಿಹೋಗಿದ್ದ ಕುದುರೆಯ ಸವಾರನೊಬ್ಬನು ಕುದುರೆಯನ್ನೋಡಿ ಸುತ್ತ ಅಲ್ಲಿಗೆ ಬಂದಿಳಿದನು; ಮುಹಮ್ಮದನೇ ಆ ಸವಾರನು. ಶತ್ರುಗಳು ನಗರವನ್ನು ಮುತ್ತುವರೆಂಬ ವದಂತಿಯು ತನ್ನ ಕಿವಿಗೆ ಬಿದ್ದೊಡನೆಯೇ ಮುಹಮ್ಮದನು ನಿಜ ಸ್ಥಿತಿಯನ್ನು ತಿಳಿದುಕೊಂಡು ಬರುವುದಕ್ಕಾಗಿ ಕುದುರೆಗೆ ತಡಿಯನ್ನು ಕೂಡ ಹಾಕದೆ ಅದನ್ನು ಹತ್ತಿಕೊಂಡು ಹೊರಟನು. ಅಪಾಯವು ಸಂಭವಿಸುವುದೆಂಬ ಹೆದರಿಕೆಯೇ ಇಲ್ಲದೆ ಅಂತಹ ಸಾಹಸಕಾರ್ಯವನ್ನು ಮಾಡಿದ ಮುಹಮ್ಮದನನ್ನು ಕಂಡು ಅವರೆಲ್ಲರೂ ವಿಸ್ಮಿತರಾದರು. ಸದ್ಯದಲ್ಲಿ ಶತ್ರುಗಳ ಬಾಧೆಯು ಒದಗು ವಂತಿಲ್ಲವೆಂಬುದನ್ನು ಕೇಳಿ ಎಲ್ಲರೂ ಹರ್ಷಿತರಾದರು. ಅಲ್ಲಿಂದ ಮುಂದೆ ಮುಹಮ್ಮದೀಯರಿಗೆ ದಿನದಿನವೂ ಒಂದಲ್ಲದಿದ್ದರೆ ಮತ್ತೊಂದು ವಿಧದ ತೊಂದರೆಗಳು ಇದ್ದೇ ಇದ್ದುವು. ಯುದ್ಧೋದ್ಯಮಕ್ಕೆ ಕೈಚಾಚಿ

ನರ ಹತ್ಯೆಯನ್ನು ನಡೆಯಿಸಲು ಮುಹಮ್ಮದನಿಗೆ ಲೇಶ ಮಾತ್ರವೂ ಇಷ್ಟ ವಿಲ್ಲದಿದ್ದರೂ ದೇಹ ರಕ್ಷಣೆಗಾಗಿಯೂ ರಾಷ್ಟ್ರ ರಕ್ಷಣೆಗಾಗಿಯೂ ಅವನು ಯುದ್ಧಕ್ಕೆ ಕೈಹಾಕದೆ ಹೋದರೆ ನಿರ್ವಾಹವಿಲ್ಲದಂತಾಯಿತು.

ಮುಹಮ್ಮದನು ಕೇವಲ ಜಾಗರೂಕನಾಗಿದ್ದುಕೊಂಡು, ಶತ್ರುಗಳ ಹಾವಳಿಯು ಮೊದಲಾಗುವ ಸೂಚನೆ ತಲೆದೋರಿದೊಡನೆಯೇ, ವಿಷದ ಅಂಕುರವನ್ನು ಅಲ್ಲಿಯೇ ಮುರಿಯುತ್ತಬಂದನು.

**ಘೋರವಾದ ಕೊಲೆಗಳು**

ಅಬೂಬರಾ ಎಂಬೊಬ್ಬ ಶತ್ರುಪಕ್ಷದ ನಾಯಕನು ಇದನ್ನರಿತು, ಮೋಸದ ಬಲೆಯನ್ನೊಡ್ಡಿ ಮುಹಮ್ಮದನ ಮೂಗು ಮುರಿಯುವ ಯೋಜನೆಯನ್ನು ಮಾಡಿದನು: ತನ್ನ ಕಡೆಯುವರು ಮುಹಮ್ಮದೀಯರಾಗಲು ಇಷ್ಟಪಡುತ್ತಿರುವರೆಂದೂ, ಮುಹಮ್ಮದನು ಕೆಲವು ಮಂದಿ ಬೋಧಕರನ್ನು ತನ್ನ ನಾಡಿಗೆ ಕಳುಹಿಸಿಕೊಟ್ಟರೆ, ಅನೇಕರು ಇಸ್ಲಾಂ ಮತಕ್ಕೆ ಸೇರುವರೆಂದೂ ಆ ಪಾಪಿಯು ಮುಹಮ್ಮದನಿಗೆ ತಿಳಿಸಿದನು. ಸರಳ ಹೃದಯನಾದ ಮುಹಮ್ಮದನು ಈ ಮೋಸವನ್ನರಿಯದೆ, ಒಡನೆಯೇ ಎಪ್ಪತ್ತು ಮಂದಿ ಪಂಡಿತರಾದ ಬೋಧಕರನ್ನು ಕಳುಹಿಸಿಕೊಟ್ಟನು. ಶತ್ರುಪಕ್ಷದ ನಾಯಕನು ಮುಹಮ್ಮದನಿಗೆ ಅನರ್ಘ್ಯ ವಸ್ತುಗಳನ್ನು ಕಾಣಿಕೆಯಾಗಿ ಕಳುಹಿಸಿದುದರಿಂದ, ಮುಹಮ್ಮದನು ಅವನ ಕಾಪಟ್ಯವನ್ನರಿಯದೆ ಮೋಸಹೋಗಲು ಅದೂ ಸಹಕಾರಿಯಾಯಿತು. ತಾನು ಆ ಕಾಣಿಕೆಯನ್ನು ಸ್ವೀಕರಿಸುವುದಿಲ್ಲವೆಂದು ತಿಳಿಸಿ ಮುಹಮ್ಮದನು ಅವುಗಳನ್ನು ಹಿಂದಕ್ಕೆ ಕಳುಹಿಸಿ, ತನ್ನ ಬೋಧಕರ ಕೆಲಸವು ಮುಗಿದ ಬಳಿಕ ಅವರನ್ನು ಸುರಕ್ಷಿತವಾಗಿ ಮಕ್ಕಾ ನಗರಕ್ಕೆ ಕರೆತರುವಂತೆ ಶತ್ರುಪಕ್ಷದ ನಾಯಕನಿಂದ ವಾಗ್ದಾನವನ್ನು ಪಡೆದನು. ಆದರೇನು ? ಬೋಧಕರು ತನ್ನ ರಾಷ್ಟ್ರವನ್ನು ಸೇರಿದೊಡನೆಯೇ ಆ ನರ ಘಾತುಕನು ಅವರನ್ನು ಒಂದು ಹೊಳೆಯ ಸಮೀಪಕ್ಕೆ ಕರೆದೊಯ್ದು ಅವರಲ್ಲಿ ಅರವತ್ತೊಂಬತ್ತು ಮಂದಿಯನ್ನು ತನ್ನ ಕತ್ತಿಗೆ ಬಲಿಗೊಟ್ಟನು. ಉಳಿದವನೊಬ್ಬನಾದ ಅಮ್ರೂ ಉಮಯನೆಂಬವನು ಹೇಗೋ ತಪ್ಪಿಸಿಕೊಂಡು ಮೆದೀನಾ ನಗರದ ಕಡೆಗೆ ಓಡಿಬರುತ್ತ ದಾರಿಯಲ್ಲಿ ಇಬ್ಬರನ್ನು ಕಂಡು, "ಸಾಯುವವನ

ಕಣ್ಣಿಗೆ ಸುಳಿದವನೇ ಜವರಾಯ'' ಎಂಬಂತೆ, ಅವರು ಶತ್ರುಪಕ್ಷದವರೆಂದೂಹಿಸಿ, ತನ್ನನ್ನು ಎಲ್ಲಿ ಕೊಲ್ಲುವರೋ ಎಂಬ ಶಂಕೆಯಿಂದ, ಥಟ್ಟನೆ ಅವರ ಮೇಲೆ ಬಿದ್ದು ಇಬ್ಬರನ್ನೂ ಕೊಂದುಬಿಟ್ಟನು. ಅವರಿಬ್ಬರೂ ನಿರಪರಾಧಿಗಳಾದ ಸಭ್ಯರು. ಅವರ ಮರಣವಾರ್ತೆಯನ್ನೂ ತನ್ನ ಬೋಧಕರ ಮರಣವಾರ್ತೆಯನ್ನೂ ಕೇಳಿ ಮಹಮ್ಮದನು ಅತ್ಯಂತ ವ್ಯಸನಪಟ್ಟು, ಮರಣಹೊಂದಿದ್ದವರ ಬಂಧುಗಳಿಗೆ ಧನಸಹಾಯ ಮಾಡಲು ಇತರರಿಂದ ಹಣವನ್ನೆತ್ತಿದನು.

ಇತರ ಪ್ರಾಂತಗಳಿಗೆ ಕಳುಹಿಸಿದ್ದ ಬೋಧಕರ ಗತಿಯೂ ಇದೇ ರೀತಿಯಾಯಿತು. ಅವರಲ್ಲಿ ಖುಬೈಬ್ ಮತ್ತು ಜೈದ್ ಎಂಬಿಬ್ಬರು, ಶತ್ರುಗಳು ಕೊಟ್ಟ ಪ್ರಾಣದಾನದ ವಾಗ್ದಾನವನ್ನು ನಂಬಿ ಅವರಿಗೆ ಶರಣಾಗತರಾಗಲು, ಶತ್ರುಗಳು ತಮ್ಮ ಮಾತಿನಂತೆ ಅವರನ್ನು ಬಿಡುಗಡೆ ಮಾಡದೆ ಮಕ್ಕಾ ನಗರದವರಿಗೆ ಗುಲಾಮರನ್ನಾಗಿ ಮಾರಿಬಿಟ್ಟರು. ಮಹಮ್ಮದನ ಶತ್ರುಗಳಾದ ಆ ನಗರದ ಕೊಲೆಪಾತಕರು ಅವರನ್ನು ಕೊಲ್ಲುವ ಸಂದರ್ಭದಲ್ಲಿ, ಇಬ್ಬರೂ ತಮ್ಮ ಗುರುಭಕ್ತಿಯನ್ನು ತೋರಿಸಿ, ಲೇಶವೂ ಹೆದರದೆ ತಮ್ಮ ಪ್ರಾಣವನ್ನು ತೆತ್ತರು.

ಸಣ್ಣ ಪುಟ್ಟ ಕದನಗಳು

ಅಲ್ಲಿಂದ ಮುಂದೆ ಸಣ್ಣಪುಟ್ಟ ಕಾಳಗಗಳಿಗೆ ಮೊದಲಾಯಿತು. ಇಸ್ಲಾಂ ಮತವನ್ನು ಧ್ವಂಸಮಾಡಲು ಶತ್ರುಪಕ್ಷದವರೆಲ್ಲರೂ ಬದ್ಧಕಂಕಣರಾಗಿ ನಿಂತರು. ದೀರ್ಘಾಲೋಚನೆಯಿಂದಲೂ ದೂರದೃಷ್ಟಿಯಿಂದಲೂ ಮಹಮ್ಮದನು ಕೆಲಸ ನಡೆಯಿಸದೆ ಹೋಗಿದ್ದ ಪಕ್ಷಕ್ಕೆ ಮದೀನಾ ನಗರದಲ್ಲಿ ಮಹಮ್ಮದೀಯರು ಒಂದು ದಿನವಾದರೂ ಇರಲಾಗುತ್ತಿರಲಿಲ್ಲ. ಈ ಕದನಗಳಲ್ಲಿ ಮುರೈಸೀ ಕದನವೆಂಬುದು ಸ್ವಲ್ಪ ಮಟ್ಟಿಗೆ ಪ್ರಾಮುಖ್ಯವಾದುದು. ಮುರೈಸಿಯ ಪಾಳೆಯಗಾರನಾದ ಹರೀಸನನ್ನು ಕೊರೈಷ್ ಮನೆತನದವರು ಮಹಮ್ಮದನ ಮೇಲೆ ಎತ್ತಿಕಟ್ಟಿ ಮದೀನಾ ನಗರವನ್ನು ಮುತ್ತುವಂತೆ ಅವನನ್ನು ಪ್ರೇರಿಸಿದರು. ಈ ಸುದ್ದಿಯು ಮಹಮ್ಮದನ ಕಿವಿಗೆ ಬಿದ್ದೊಡನೆಯೇ, ಶತ್ರುವು ಮದೀನಾ ನಗರಕ್ಕೆ ಬರುವುದಕ್ಕೆ ಮೊದಲು ತಾನೇ ಅವನನ್ನು ಎದುರಿಸಬೇಕೆಂಬ

ಸಂಕಲ್ಪದಿಂದ, ಮುಹಮ್ಮದನು ತಕ್ಕ ಸೈನ್ಯದೊಡನೆ ಮುರೈಸಿಗೆ ನಡೆದನು. ಇದನ್ನು ಕೇಳಿ ಹರೀಸನು ಹೆದರಿ ಓಡಿಹೋದನು. ಆದರೂ, ಮುರೈಸೀ ನಗರದ ನಿವಾಸಿಗಳು ಹರೀಸನ ಪರವಾಗಿ ಮುಹಮ್ಮದನಿಗೆ ಕಾಳಗ ಕೊಟ್ಟರು. ಇದರಲ್ಲಿ ಮುಹಮ್ಮದನಿಗೆ ಜಯವಾಗಿ ಆರು ನೂರು ಮಂದಿ ಶತ್ರುಗಳು ಸೆರೆ ಸಿಕ್ಕಿದರು.

ಹೀಗೆ ಸೆರೆ ಸಿಕ್ಕಿದವರಲ್ಲಿ ಹರೀಸನ ಮಗಳಾದ ಜುವರಿಯುಳೂ ಒಬ್ಬಳು. ಹರೀಸನು ಮುಹಮ್ಮದನಿಗೆ ಹಣವನ್ನು ಕೊಟ್ಟು ಆಕೆಯನ್ನು ಬಿಡಿಸಿಕೊಂಡು ಹೋಗಲು ಬಂದಾಗ ಜುವರಿಯುಳು ತಾನು ಮುಹಮ್ಮದನ ಬಳಿಯಲ್ಲಿಯೇ ಇರುವುದಾಗಿ ತಂದೆಗೆ ತಿಳಿಸಲು, ಹರೀಸನು ನಿರುತ್ತರನಾಗಿ ಹೊರಟುಹೋಗಬೇಕಾಯಿತು. ಜುವರಿಯುಳ ಪ್ರಾರ್ಥನೆಯಂತೆ ಮುಹಮ್ಮದನು ಆಕೆಯನ್ನು ಮದುವೆಯಾದನು. ಯುದ್ಧದಲ್ಲಿ ಸೆರೆಸಿಕ್ಕಿದ್ದ ಇತರರೆಲ್ಲರಿಗೂ ಬಿಡುಗಡೆಯಾಯಿತು.

ಈ ಮಧ್ಯೇ ಕೊರೈಷ್ ಮನೆತನದವರು ಮತ್ತೊಮ್ಮೆ ಮೆದೀನಾ ನಗರವನ್ನು ಮುತ್ತಬೇಕೆಂಬುದ್ದೇಶದಿಂದ ಸಮರ ಸನ್ನಾಹಗಳನ್ನು ಸರ್ವ ಸಮೃದ್ಧತೆಯಿಂದ ನಡೆಯಿಸುತ್ತಿದ್ದರು.

**ಸಮರ ಸನ್ನಾಹ**

ಮೆದೀನಾ ನಗರದಿಂದ ಓಡಿಸಲ್ಪಟ್ಟು ಖೈಬರಿನಲ್ಲಿ ನೆಲಸಿದ್ದ ಯೆಹೂದ್ಯರೂ ಅವರೊಡನೆ ಸೇರಿದರು. ಮಕ್ಕಾ ನಗರದ ಸುತ್ತಲಿನ ಪ್ರದೇಶದಲ್ಲಿದ್ದ ಬೆಡೋಯಿನ್ ಬುಡಕಟ್ಟಿನ ಪುಂಡು ಜನರನ್ನೂ ಅವರು ತಮ್ಮೊಡನೆ ಸೇರಿಸಿಕೊಂಡರು. ಈ ಸನ್ನಾಹವು ೬೨೭ನೆಯ ಇಸವಿಯಲ್ಲಿ ನಡೆದು, ಇಪ್ಪತ್ತ ನಾಲ್ಕು ಸಾವಿರ ಮಂದಿ ಸೈನಿಕರುಳ್ಳ ದೊಡ್ಡದೊಂದು ದಳವು ಸಿದ್ಧವಾಯಿತು. ಅಷ್ಟು ದೊಡ್ಡ ಸೈನ್ಯದೊಡನೆ ಮುಹಮ್ಮದೀಯರು ಎಂದೂ ಯುದ್ಧ ಮಾಡಿರಲಿಲ್ಲ.

ಈ ಸಂಗತಿಯು ತಿಳಿದೊಡನೆಯೇ ಮುಹಮ್ಮದನು ತನ್ನ ಆಪ್ತರನ್ನು ಕರೆಯಿಸಿ ಅವರ ಆಲೋಚನೆಯನ್ನು ಕೇಳಿದನು. ಮೆದೀನಾ ನಗರದ ಸುತ್ತಲೂ ತಕ್ಕಷ್ಟು ಆಳವಾಗಿಯೂ ವಿಶಾಲವಾಗಿಯೂ ಇರ ತಕ್ಕ ದೊಡ್ಡದೊಂದು ಕಂದಕವನ್ನು ತೋಡಿಸಿ ತಾವೂ ಯುದ್ಧಕ್ಕೆ

ಸಿದ್ಧರಾಗಬೇಕೆಂದು ಸಾಲ್ಮನ್ ಎಂಬಾತನು ಸಲಹೆ ಹೇಳಿದನು. ಇದಕ್ಕೆ ಎಲ್ಲರೂ ಒಪ್ಪಲು, ಒಡನೆಯೇ ಮುಹಮ್ಮದನು ಹತ್ತು ಹತ್ತು ಮಂದಿ ಕೆಲಸಗಾರರಿರುವ ಹಲವು ತಂಡಗಳನ್ನೇರ್ಪಡಿಸಿ ದಿನಗೂಲಿಯುವನಂತೆ ತಾನೂ ಅವರೊಡನೆ ಕೆಲಸಕ್ಕೆ ನಿಂತು ಕಂದಕವನ್ನಗೆಯುವುದಕ್ಕೆ ಪ್ರಾರಂಭಿಸಿ, ತನ್ನವರನ್ನೂ ತನ್ನ ಮತವನ್ನೂ ಉದ್ಧರಿಸುವಂತೆ ಭಗವಂತನನ್ನು ನಿಶ್ಚಲವಾದ ಭಕ್ತಿಯಿಂದ ಪ್ರಾರ್ಥಿಸಿದನು. ತಮ್ಮ ರಾಷ್ಟ್ರದ ಅಧಿಪತಿಯಾಗಿಯೂ, ತಮ್ಮ ಮತ ಸ್ಥಾಪಕನಾದ ಗುರುಶ್ರೇಷ್ಠನಾಗಿಯೂ ಇದ್ದೂ, ಮುಹಮ್ಮದನು ತಮ್ಮೊಡನೆ ಕೂಲಿಗಾರನಂತೆ ಕೆಲಸಮಾಡತೊಡಗಿದುದನ್ನು ನೋಡಿ ಕೆಲಸಗಾರರೆಲ್ಲರೂ ಆಶ್ಚರ್ಯದಿಂದ ಬೆರಗಾಗಿ, ಅವರ ಗುರು ಭಕ್ತಿಯು ಮೊದಲಿಗಿಮ್ಮಡಿಯಾಯಿತು.

ಹೀಗೆ ಕಂದಕವನ್ನು ಅಗೆಯುತ್ತಿರುವಾಗ ನೆಲದಲ್ಲಿ ದೊಡ್ಡದೊಂದು ಕಲ್ಲು ಚಪ್ಪಡಿ ಸಿಕ್ಕಿತು. ಕೆಲಸಗಾರರೆಲ್ಲರೂ ಸೇರಿ ಪ್ರಯತ್ನಿಸಿದರೂ ಆ ಕಲ್ಲನ್ನು ಒಡೆಯಲು ಸಾಧ್ಯವಾಗಲಿಲ್ಲ. ಆ ಬಳಿಕ ಮುಹಮ್ಮದನು ಪಿಕಾಸಿಯನ್ನು ಹಿಡಿದು ಕಲ್ಲನ್ನೊಡೆಯಲು ಪ್ರಯತ್ನಿಸಿದನು. ಮೊದಲನೆಯ ಪೆಟ್ಟು ಬಿದ್ದೊಡನೆಯೇ ಒಂದು ಬೆಂಕಿಯ ಕಿಡಿ ಹಾರಿತು. ಆ ಕಿಡಿಯಲ್ಲಿ ಮುಹಮ್ಮದನ ಕಣ್ಣಿಗೆ, ಸಿರಿಯಾ ದೇಶದ ರಾಜ ಪ್ರಾಸಾದದ ಬೀಗದ ಕೈಗಳನ್ನು ತನ್ನ ಕೈಗೆ ಕೊಟ್ಟಂತೆ, ಒಂದು ದೃಶ್ಯವು ಗೋಚರವಾಯಿತಂತೆ. ಮುಹಮ್ಮದನು ಹಾಕಿದ ಎರಡನೆಯ ಪೆಟ್ಟಿಗೆ ಆ ಕಲ್ಲು ಸೀಳು ಬಿಟ್ಟು ಮತ್ತೊಂದು ಕಿಡಿಯು ಹಾರಿತು. ಪಾರ್ಸೀ ದೇಶದ ಅರಮನೆಯ ಬೀಗದ ಕೈಗಳು ತನ್ನ ಕೈಗೆ ದೊರೆತಂತೆ ಆಗ ಅವನ ಕಣ್ಣಿಗೆ ಮತ್ತೊಂದು ದೃಶ್ಯವು ಗೋಚರಿಸಿತಂತೆ. ಮೂರನೆಯ ಪೆಟ್ಟು ಬಿದ್ದೊಡನೆಯೇ ಕಲ್ಲು ಪುಡಿ ಪುಡಿಯಾಗಿ ಅನೇಕ ಬೆಂಕಿಯ ಕಿಡಿಗಳು ಹಾರಿದುವು. ಕೆಲಸಗಾರರೆಲ್ಲರೂ, "ಅಲ್ಲಾಹೊ ಅಕ್ಬರ್" (ಭಗವಂತನು ದೊಡ್ಡವನು) ಎಂದು ಕೂಗಿದರು. ಯಮನ್ ರಾಜ್ಯದ ಅರಮನೆಯ ಬೀಗದ ಕೈಗಳು ತನ್ನ ಕೈಗೆ ಬಂದಂತೆ ಮುಹಮ್ಮದನ ಕಣ್ಣಿಗೆ ಮತ್ತೊಂದು ದೃಶ್ಯವು ಗೋಚರಿಸಿತಂತೆ. ಈ ಸನ್ನಿವೇಶವು ಮುಹಮ್ಮದನಿಗೆ ಬಹಳ ಅನುಕೂಲವಾದಂತಾಯಿತು. ಏಕೆಂದರೆ, ಆಗ ಮುಹಮ್ಮದನಿಗೆ ಏಪನ್ನಾಪಸ್ಥಿ

ಯೊದಗಿ ಅವನ ಅನುಯಾಯಿಗಳೆಲ್ಲರೂ ಪ್ರಾಣಭೀತಿಯಿಂದ ಕಳವಳ ಪಡುತ್ತಿದ್ದರು. ಕಾರ್ಯಪಟುಗಳಾಗಿ ಭಗವದ್ಭಕ್ತಿಯಿಂದ ಕೆಲಸ ಮಾಡುತ್ತಿದ್ದರೂ ತಮಗೆ ಜಯವಾಗುವುದೆಂದು ಭರವಸೆಯನ್ನಿಟ್ಟು ಕೊಳ್ಳಲು ಮಾತ್ರ ಅವರಿಗೆ ಅವಕಾಶವೇ ಇರಲಿಲ್ಲ. ಆದುದರಿಂದ, ಭಗವಂತನೇ ಅನುಗ್ರಹ ಮಾಡಿ ಭಾವಿ ಸೌಭಾಗ್ಯದ ಸೂಚನೆಯನ್ನು ಮುಹಮ್ಮದನಿಗೆ ಕೊಟ್ಟಿರಬಹುದಲ್ಲವೆ? ಈ ವಿಷಯವು ಹೇಗಾದರೂ ಇರಲಿ; ಮೆದೀನಾ ನಗರವನ್ನು ಮುತ್ತುವುದರಲ್ಲಿ ಅದೇ ಶತ್ರುಗಳ ಕೊನೆಯ ಪ್ರಯತ್ನವೆಂಬುದನ್ನು ಮುಹಮ್ಮದೀಯರು ಮನಗಂಡರು; ಈಗ ಶತ್ರುಗಳನ್ನು ಸೋಲಿಸಿದರೆ ಅಲ್ಲಿಂದ ಮುಂದೆ ನಿರುಪಾಧಿಕವಾಗಿರ ಬಹುದೆಂದು ಅವರೆಲ್ಲರಿಗೂ ನಿರ್ಧಾರವಾಯಿತು. ಆದಕಾರಣ ಅವರೆಲ್ಲರೂ ಮತ್ತಷ್ಟು ಹುರಿಗೊಂಡರು.

ಕಾಲಕ್ರಮದಲ್ಲಿ ಶತ್ರುಗಳು ಮೆದೀನಾ ನಗರದ ಬಳಿಗೆ ಬಂದರು; ಅವರ ಸೈನ್ಯವು ಕಂದಕದಿಂದಾಚೆಗೆ ನಿಂತು ಯುದ್ಧಮಾಡತೊಡಗಿತು.

**ಮುತ್ತಿಗೆ**

ಮುತ್ತಿಗೆಯು ಒಂದು ತಿಂಗಳ ಕಾಲ ನಡೆಯಿತು ವಷ್ಟರಲ್ಲಿ ಆಹಾರ ಸಾಮಗ್ರಿಗಳು ಕಡಿಮೆಯಾದು ದರಿಂದ ಮುಹಮ್ಮದನಿಗೂ ಅವನ ಕಡೆಯವರಿಗೂ ಬಹಳ ತೊಂದರೆಯಾಯಿತು. ಇದರ ಜೊತೆಗೆ ಮೆದೀನಾ ನಗರದಲ್ಲಿದ್ದ ಕೆಲವು ಮಂದಿ ಯೆಹೂದ್ಯರು ದ್ರೋಹ ಚಿಂತನೆ ಮಾಡಿ ಶತ್ರುಗಳಿಗೆ ಸಹಾಯ ಮಾಡಿದರು. ಆದರೂ, ಮುಹಮ್ಮದನು ಎದೆಗುಂದದೆ ತಮ್ಮಲ್ಲಿ ಒಬ್ಬ ಮನುಷ್ಯನು ಉಳಿದಿರುವ ವರೆಗೂ ಶತ್ರುಗಳೊಡನೆ ಕಾದದೆ ಬಿಡ ಕೂಡದೆಂದು ಸೈನಿಕರನ್ನು ಹುರಿದುಂಬಿಸಲು, ಅವರೆಲ್ಲರೂ ವಿಶಾರದ ಪರಾಕ್ರಮದಿಂದ ಯುದ್ಧಮಾಡಿದರು. ಪರಿಣಾಮದಲ್ಲಿ ಶತ್ರುಗಳ ಪ್ರಯತ್ನವು ನಿಷ್ಫಲವಾಗಿ ಮುಹಮ್ಮದೀಯರೆಲ್ಲರಿಗೂ ಅತ್ಯಾನಂದ ವಾಯಿತು: ಕಂದಕವನ್ನು ದಾಟಿಬಂದು ಮುಹಮ್ಮದೀಯರನ್ನು ನಾಶ ಗೊಳಿಸಬೇಕೆಂದು ಶತ್ರುಗಳು ಸರ್ವ ಪ್ರಯತ್ನವನ್ನು ನಡೆಯಿಸಿದರೂ ಅವರ ಉದ್ದೇಶವು ನೆರವೇರಲಿಲ್ಲ. ಅಷ್ಟರಲ್ಲಿ, ಅವರು ತಂದಿದ್ದ ಆಹಾರ ಸಾಮಗ್ರಿಗಳು ಮುಗಿದುಹೋಗಿ, ಮುಹಮ್ಮದೀಯರ ಹೊಡೆತವು

ಹೆಚ್ಚಲು, ಅನೇಕರು ಮೃತಪಟ್ಟರು. ಇದರ ಜೊತೆಗೆ, ಪ್ರಚಂಡವಾದ ಬಿರುಗಾಳಿಯೆದ್ದು ಮಳೆ ಸುರಿದು ಶತ್ರುಗಳ ಗುಡಾರಗಳು ನೆಲಕ್ಕುರುಳಿದುವು. ಶತ್ರುಗಳು ದಿಕ್ಕುಗೆಟ್ಟು ಪಲಾಯನ ಮಾಡಿದರು. ಉತ್ಸಾಹದಿಂದ ದಂಡನ್ನು ತಂದಿದ್ದ ಅಬೂ ಸುಫ್ಯಾನನು ಪರಾಭವದಿಂದ ಕಳೆಗುಂದಿ ಹೊರಟುಹೋದನು.

ಮೆದೀನಾ ನಗರದಲ್ಲಿ ವಾಸವಾಗಿದ್ದ ಕೆಲವು ಮಂದಿ ಯೆಹೂದ್ಯರು ತಮ್ಮ ರಕ್ಷಕನಾಗಿದ್ದ ಮುಹಮ್ಮದನಿಗೆ ಆಪತ್ಕಾಲದಲ್ಲಿ ಸಹಾಯ ಮಾಡುವ ಯೋಚನೆಯನ್ನು ಬಿಟ್ಟು ದ್ರೋಹ ಚಿಂತನೆ ಮಾಡಿ ಶತ್ರುಗಳಿಗೆ ಸಹಾಯ ಮಾಡಿದ ಅಪರಾಧಕ್ಕೇನು ಕಾರಣವೆಂದು ಮುಹಮ್ಮದನು ಅವರನ್ನು ಕೇಳಿದನು. ಅವರಿಂದ ಸದುತ್ತರವು ಬಾರದೆಹೋದುದು ಮಾತ್ರವಲ್ಲದೆ ಅವರು ಪುತ್ತೃಷ್ಟು ಅವಿಧೇಯತೆಯನ್ನು ಪ್ರದರ್ಶಿಸಿ ಬಿರುನುಡಿಗಳನ್ನಾಡಿ ಒಂದು ಕೋಟೆಯೊಳಗೆ ಸೇರಿಕೊಂಡರು. ಮುಹಮ್ಮದನು ಅವರ ತಪ್ಪಿಗೆ ತಕ್ಕ ಶಿಕ್ಷೆಯನ್ನು ಮಾಡುವ ಛಲವನ್ನು ತೊಟ್ಟು ಅವರಿದ್ದ ಕೋಟೆಯನ್ನು ಮುತ್ತಿ ಎಲ್ಲರನ್ನೂ ಸೆರೆಹಿಡಿದನು. ಅವರು ನಿರುಪಾಯರಾಗಿ, ತಮ್ಮನ್ನು ವಿಚಾರಣೆ ಮಾಡಿ ತಕ್ಕ ಶಿಕ್ಷೆಯನ್ನು ವಿಧಿಸುವುದಕ್ಕಾಗಿ ಸಾದನೆಂಬಾತನನ್ನು ನಿಯಮಿಸಬೇಕೆಂದು ಕೇಳಿಕೊಳ್ಳಲು, ಮುಹಮ್ಮದನು ಅದಕ್ಕೂ ಒಪ್ಪಿದನು. ಅವರಮೇಲೆ ರಾಜದ್ರೋಹದ ಗುರುತರವಾದ ಅಪರಾಧವು ಹೊತ್ತು, ಸಾದನು ಅವರ ಧರ್ಮಶಾಸ್ತ್ರದ ಪ್ರಕಾರವೇ ಅವರೆಲ್ಲರಿಗೂ ಮರಣ ದಂಡನೆಯನ್ನು ವಿಧಿಸಿದನು. ಶಿಕ್ಷೆಯೇನೋ ಕ್ರೂರವಾದುದೇ ಆದರೂ, ಅದು ಯೆಹೂದ್ಯರ ಧರ್ಮಶಾಸ್ತ್ರದ ಪ್ರಕಾರವೇ ವಿಧಿಸಲ್ಪಟ್ಟುದೆಂಬ ಅಂಶವನ್ನು ನಾವು ನೆನಪಿನಲ್ಲಿಡಬೇಕು. ಇದಲ್ಲದೆ, ಆಗಿನ ಕಾಲದ ಪದ್ಧತಿಗಳೂ ಹಾಗೆಯೇ ಇದ್ದುವು.

ಅಪರಾಧಿಗೇಗೆ ತಕ್ಕ ದಂಡನೆ

ಹೀಗೆ ಅನೇಕ ಕದನಗಳಲ್ಲಿ ವಿಜಯವುಂಟಾಗಲು, ಮುಹಮ್ಮದೀಯರ ಉತ್ಸಾಹವು ಹತ್ತರಷ್ಟು ಹೆಚ್ಚಿತು. ಮೆದೀನಾ ನಗರದ ಕೊನೆಯ ಮುತ್ತಿಗೆಯ ಕಾಲದಲ್ಲಿ, ಗಾಳಿ ಮಳೆಗಳ ರೂಪದಲ್ಲಿ ಪ್ರಕೃತಿಯೂ ಮುಹಮ್ಮದನಿಗೆ ಸಹಾಯ ಮಾಡಿದುದನ್ನು ಕಂಡು, ಶತ್ರು ವರ್ಗದವ

ರೆಲ್ಲರೂ ಅಪ್ರತಿಭರಾಗಿ ಆತನಿಗೆ ದೈವ ಸಹಾಯವುಂಟೆಂದು ನಂಬಿದರು. ಇಸ್ಲಾಂ ಮತವು ದೃಢಮೂಲವಾಗಿ ನೆಲೆಗೊಳ್ಳಲು ಅಲ್ಲಿಂದ ಮುಂದೆ ಅನುಕೂಲವಾಯಿತು. ಮುಹಮ್ಮದೀಯರು ಶತ್ರುಮಂಡಲಿಯವರ ಸೊಕ್ಕನ್ನು ಮುರಿದುದರಿಂದ ಮುಹಮ್ಮದನ ಪ್ರಾಬಲ್ಯವು ದಿನ ದಿನಕ್ಕೆ ಹೆಚ್ಚುತ್ತ ಬಂದಿತು; ಅವನ ಆಧಿಪತ್ಯಕ್ಕೆ ಹೊಸ ಹೊಸ ಪ್ರದೇಶಗಳು ಸೇರುತ್ತ ಬಂದುದರಿಂದ ಅವನ ರಾಷ್ಟ್ರವು ಹೆಚ್ಚು ವಿಸ್ತಾರವಾಯಿತು; ಹೊಸಬರನೇಕರು ಇಸ್ಲಾಂ ಮತವನ್ನವಲಂಬಿಸಿದುದರಿಂದ ಅವನ ಮತವು ಅಭಿವೃದ್ಧಿಗೊಂಡಿತು.

## ಒಂಬತ್ತನೆಯ ಅಧ್ಯಾಯ

# ಮಕ್ಕಾ ನಗರಕ್ಕೆ ಪ್ರಯಾಣ

**ಯಾತ್ರೆಯ ಆಸೆ**

ಮಕ್ಕಾ ನಗರವು ಅರಬ್ಬೀ ದೇಶದವರಿಗೆ ಪುರಾತನವಾದ ಯಾತ್ರಾ ಸ್ಥಳ. ಇಸ್ಲಾಂ ಮತವು ಹುಟ್ಟಿದ ಮೇಲೂ ಮಕ್ಕಾ ನಗರದ ದೇವಾಲಯಕ್ಕೆ ಹೋಗಿಬರುವುದು ಮಹಾಯಾತ್ರೆ ಯೆಂಬುದಾಗಿ ಅಲ್ಲಿಯವರ ಭಾವನೆಯಿದ್ದಿತು. ಇಸ್ಲಾಂ ಮತವು ಪ್ರಬಲವಾದ ಮೇಲೆ, ಆ ದೇವಾಲಯದಲ್ಲಿದ್ದ ವಿಗ್ರಹಗಳು ನಾಶಹೊಂದಿದುವೇ ಹೊರತು, ಆ ಸ್ಥಳದ ಪವಿತ್ರತೆಯ ವಿಷಯದಲ್ಲಿ ಮಾತ್ರ ಜನರಿಗೆ ಲೇಶ ಮಾತ್ರವೂ ಅನಾದರ ಹುಟ್ಟಲಿಲ್ಲ. ಈಗ ನಮ್ಮ ಕಾಲದಲ್ಲಿಯೂ ಮಕ್ಕಾ ನಗರಕ್ಕೆ ಹೋಗಿ ಬರುವುದು ಮಹಾ ಯಾತ್ರೆಯೆಂದೇ ಮುಸಲ್ಮಾನರ ಭಾವನೆ. ಪ್ರಸಕ್ತ ಸಮಯದಲ್ಲಿ, ಮಹಮ್ಮದನಿಗೂ ಅವನ ಅನುಯಾಯಿಗಳಿಗೂ ಮಕ್ಕಾ ನಗರಕ್ಕೆ ಹೋಗಿಬರಬೇಕೆಂಬ ಆಸೆಯು ಹುಟ್ಟಿತು. ಇತರ ನಾನಾ ಪ್ರದೇಶಗಳಿಂದಲೂ ಜನರು ವರ್ಷಂಪ್ರತಿ ಮಕ್ಕಾ ನಗರದ ಯಾತ್ರೆಯನ್ನು ಮಾಡಿಕೊಂಡು ಹೋಗುತ್ತಿರುವಲ್ಲಿ, ಅದೇ ನಗರದಲ್ಲಿಯೇ ಹುಟ್ಟಿ ಬೆಳೆದವರು ಆರು ವರುಷ ಕಾಲ ಪರಸ್ಥಳವಾದ ಮದೀನಾ ನಗರದಲ್ಲಿದ್ದು ಆ ಬಳಿಕ ಅಲ್ಲಿಗೆ ಹೋಗಲು ಉತ್ಕಟವಾದ ಅಭಿಲಾಷೆಯನ್ನು ಹೊಂದಿದರೆಂದರೆ, ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಮಕ್ಕಾ ನಗರಕ್ಕೆ ಹೊರಡಬೇಕೆಂಬ ಅಪೇಕ್ಷೆಯನ್ನು ಮಹಮ್ಮದನು ಸೂಚಿಸಿದ ಕೂಡಲೆ ಅವನ ಅನುಯಾಯಿಗಳೆಲ್ಲರಿಗೂ ಕಾಲಿಗೆ ಗೆಜ್ಜೆಯನ್ನು ಕಟ್ಟಿದಂತಾಯಿತು. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಎಂಬ ಉದಾತ್ತ ತತ್ತ್ವಕ್ಕೆ ಶರಣಾಗತರಾಗದಿರುವ ಜನಾಂಗಗಳುಂಟೆ ?

**ಪ್ರಯಾಣ**

ಮಕ್ಕಾ ನಗರದಲ್ಲಿ ಪ್ರಬಲರಾಗಿದ್ದ ಕೊರೈಷ್ ಮನೆತನದವರಿಗೂ ಮಹಮ್ಮದನಿಗೂ ಮೈತ್ರಿಯಿಲ್ಲದಿದ್ದರೂ ಮಹಮ್ಮದನು ಯಾತ್ರಾರ್ಥಿಯಾಗಿ ಮಕ್ಕಾ ನಗರಕ್ಕೆ ಹೊರಟುದರ ಔಚಿತ್ಯದ ವಿಷಯದಲ್ಲಿ ಕೆಲವರಿಗೆ ಸಂದೇಹವಾಗಬಹುದು.

ಆದರೆ ನಾವು ಈ ಸಂಬಂಧದಲ್ಲಿ ಎರಡು ವಿಷಯಗಳನ್ನು ಗಮನಿಸಬೇಕಾಗಿದೆ: ಮೊದಲನೆಯದು, ಮಹಮ್ಮದೀಯರು ಎಂತಹ ಪರಾಕ್ರಮಿಗಳೆಂಬುದು ಮದೀನಾ ನಗರದ ಮುತ್ತಿಗೆಯಲ್ಲಿ ಶತ್ರುಗಳಿಗೆ ಚೆನ್ನಾಗಿ ಮನದಟ್ಟಾಗಿದ್ದಿತೆಂದೂ. ಪ್ರಾಯಶಃ ಅವರು ತನ್ನ ಕಡೆಯವರ ಮೇಲೆ ಕೈಮಾಡಲಾರರೆಂದೂ ಮಹಮ್ಮದನಿಗೆ ತೋರಿಬಂದಿರಬಹುದು. ಎರಡನೆಯದು, ಮಕ್ಕಾ ನಗರದಲ್ಲಿದ್ದ **ಕಾಬಾ** ದೇವಾಲಯದ ಯಾತ್ರೆಗೆ ಶತ್ರುಗಳೇ ಬಂದರೂ, ಅವರ ಗೊಡವೆಗೆ ಹೋಗದೆ ಸುಮ್ಮನೆ ಇರುತ್ತಿದ್ದುದು ಆಗಿನ ಪದ್ಧತಿ. ಆದಕಾರಣ, ಕೊರೈಷ್ ಮನೆತನದವರು ತಮ್ಮನ್ನು ತೊಂದರೆಪಡಿಸುವ ಸಂಭವವಿಲ್ಲವೆಂದೂ ಮಹಮ್ಮದನು ನಿರ್ಧರಿಸಿರಬಹುದು. ಅಂತು, ಅವನು ಸಾವಿರದ ನಾನ್ನೂರು ಮಂದಿ ಮಹಮ್ಮದೀಯರೊಡನೆ ಮಕ್ಕಾ ನಗರಕ್ಕೆ ಪ್ರಯಾಣಮಾಡಿದನು. ಶಸ್ತ್ರ ಸಹಿತರಾಗಿದ್ದರೆ ಮಕ್ಕಾ ನಗರ ನಿವಾಸಿಗಳು ತಮ್ಮನ್ನು ಯುದ್ಧಾರ್ಥಿಗಳೆಂದು ಭಾವಿಸುವರೆಂಬ ಆಲೋಚನೆಯಿಂದ ಎಲ್ಲರೂ ನಿರಾಯುಧರಾಗಿ ಪ್ರಯಾಣ ಮಾಡಿ ಕಾಲ ಕ್ರಮದಲ್ಲಿ ಹುದೈಬಿಯ್ಯಾ ಎಂಬ ಪಟ್ಟಣವನ್ನು ಸೇರಿದರು. ಅಲ್ಲಿಂದ ಮುಂದೆ ಒಂದು ದಿನ ಪ್ರಯಾಣಮಾಡಿದ್ದರೆ ಅವರು ಮಕ್ಕಾ ನಗರವನ್ನು ಸೇರುತ್ತಿದ್ದರು. ಆದರೆ ಮಹಮ್ಮದೀಯರು ಮಕ್ಕಾ ನಗರವನ್ನು ಸೇರಿದೊಡನೆ ಅವರೊಡನೆ ಯುದ್ಧ ಮಾಡಲು ಶತ್ರುಗಳೆಲ್ಲರೂ ಅನುವಾಗುತ್ತಿದ್ದರೆಂಬ ಸಂಗತಿಯು, ಮಹಮ್ಮದೀಯನಲ್ಲದಿದ್ದರೂ ಮಹಮ್ಮದನಲ್ಲಿ ಪ್ರೀತಿಯನ್ನಿಟ್ಟಿದ್ದ, ಬುಡೇಲ್ ಎಂಬಾತನಿಂದ ಮಹಮ್ಮದನಿಗೆ ತಿಳಿಯಿತು.

**ಹುದೈಬಿಯ್ಯಾವಿನ ಒಪ್ಪಂದ**

ಯುದ್ಧ ಪ್ರಯತ್ನವನ್ನು ಬಿಟ್ಟು ಗೊತ್ತಾದೊಂದು ಅವಧಿಯವರೆಗೆ ಸಮಾಧಾನದಿಂದಿರುವ ಹಾಗೆ ತನ್ನೊಡನೆ ಒಪ್ಪಂದ ಮಾಡಿಕೊಳ್ಳುವಂತೆ ಮಹಮ್ಮದನು ಬುಡೇಲನೊಡನೆ ಶತ್ರು ಪಕ್ಷದವರಿಗೆ ಹೇಳಿಕಳುಹಿಸಿದನು. ಮಕ್ಕಾ ನಗರದ ಮುಖ್ಯಸ್ಥರೆಲ್ಲರೂ ಸಭೆ ಸೇರಿ, ಇಸ್ಲಾಂ ಮತವನ್ನು ನಿರ್ನಾಮಗೊಳಿಸುವುದು ತಮ್ಮಿಂದ

ಸಾಧ್ಯವಿಲ್ಲವೆಂದೂ ಸಿರಿಯಾ ರಾಜ್ಯದೊಡನೆ ವ್ಯಾಪಾರ ಮಾಡಬೇಕಾದರೆ ತಾವು ಮುಹಮ್ಮದನ ರಾಷ್ಟ್ರದ ಮೇಲೆ ಪ್ರಯಾಣ ಮಾಡಬೇಕಾಗಿರುವ ಕಾರಣ, ಮುಹಮ್ಮದನೊಡನೆ ಒಪ್ಪಂದ ಮಾಡಿಕೊಂಡರೆ, ಅದಕ್ಕೂ ಅನುಕೂಲವಾಗುವುದಲ್ಲದೆ, ನಿಂತುಹೋಗಿದ್ದ ವ್ಯಾಪಾರವು ಮತ್ತೆ ತಮ್ಮ ಹಸ್ತಗತವಾಗುವುದೆಂದೂ ಅವರಿಗೆ ತೋರಿತು. ಒಪ್ಪಂದದ ಕರಾರುಗಳನ್ನು ಚರ್ಚಿಸಿ ಗೊತ್ತುಮಾಡಿಕೊಂಡುಬರುವಂತೆ ಅವರು ಉರ್ವನೆಂಬವನನ್ನು ಕಳುಹಿಸಿದರು. ಅವನು ಮುಹಮ್ಮದನೊಡನೆ ಚರ್ಚೆಗೆ ಪ್ರಾರಂಭಿಸಿ, "ಅಯ್ಯಾ! ನೀನು ನಿನ್ನ ಅನುಯಾಯಿಗಳನ್ನು ನಂಬದೆ ಇರುವುದೇ ವಿವೇಕ; ನಿನಗೇನಾದರೂ ಕಷ್ಟವೂ ಅಪಾಯವೂ ಸಂಭವಿಸಿದಲ್ಲಿ ಅವರೆಲ್ಲರೂ ಇಲ್ಲಿದ್ದವರು ಅಲ್ಲಿಯೇ ಮಾಯವಾಗಿ ಹೋಗುವರು" ಎಂದನು. ಇದನ್ನು ಮುಹಮ್ಮದನ ಬಳಿಯಲ್ಲಿದ್ದ ಅಬೂಬಕರನು ಕೇಳಿ, ರೋಷದಿಂದ ಉರ್ವನನ್ನು ಚೆನ್ನಾಗಿ ಭಂಗಿಸಿ ಮಾತನಾಡಲು, ಉರ್ವನು ಮಕ್ಕಾ ನಗರಕ್ಕೆ ಹೊರಟುಹೋದನು. ಆ ಬಳಿಕ ಮುಹಮ್ಮದನು ಒಬ್ಬಿಬ್ಬರು ತನ್ನ ರಾಯಭಾರಿಗಳನ್ನು ಕಳುಹಿಸಲು, ಶತ್ರುಗಳು ಅವರೊಡನೆ ಧೂರ್ತತೆಯಿಂದ ವ್ಯವಹರಿಸಿ ಅವರನ್ನು ಸೆರೆಯಲ್ಲಿಟ್ಟರು. ಕೂಡಲೆ, ಮುಹಮ್ಮದೀಯರನ್ನು ನಿಪಾತಗೊಳಿಸಲು ಒಂದು ದಂಡು ಬಂದಿತು. ಮುಹಮ್ಮದನ ಕಡೆಯವರು ಆ ಸೈನಿಕರೆಲ್ಲರನ್ನೂ ಸೆರೆಹಿಡಿದರಾದರೂ, ಯುದ್ಧ ಮಾಡುವುದಕ್ಕಾಗಿ ತಾವು ಅಲ್ಲಿಗೆ ಬಂದಿರಲಿಲ್ಲವಾದ ಕಾರಣ, ಮುಹಮ್ಮದನ ಅಪ್ಪಣೆಯ ಮೇರೆಗೆ ಅವರನ್ನು ಸೆರೆಯಿಂದ ಬಿಡುಗಡೆ ಮಾಡಿ ಮಕ್ಕಾ ನಗರಕ್ಕೆ ಕಳುಹಿಸಿದರು. ಇಷ್ಟಾದರೂ ಕೊರೈಷ್ ಮನೆತನದವರು ಯುದ್ಧಸನ್ನದ್ಧರಾಗುತ್ತಲೇ ಇದ್ದುದರಿಂದ, ತಾವು ನಿರಾಯುಧರಾಗಿ ಬಂದುದು ತಪ್ಪು ಕೆಲಸವಾಯಿತೆಂದು ಮುಹಮ್ಮದನಿಗೆ ಆಗ ಗೋಚರವಾಯಿತು. ಪರಿಣಾಮದಲ್ಲಿ ಕದನವೇ ಕೈಗಟ್ಟುವಂತೆ ತೋರಿಬಂದುದರಿಂದ, ಮುಹಮ್ಮದನು ಮುಂದಣ ಕರ್ತವ್ಯವನ್ನು ನಿರ್ಧರಿಸಿ, ಒಬ್ಬ ಮುಹಮ್ಮದೀಯನು ಉಳಿದಿರುವ ವರೆಗೂ ತಾವು ಯುದ್ಧಮಾಡತಕ್ಕುದೆಂಬುದಾಗಿ ಎಲ್ಲರೂ ಒಂದು ಮರದ ಕೆಳಗೆ ಪ್ರಮಾಣ ವಚನಗಳನ್ನಾಡಿ ಪ್ರತಿಜ್ಞೆ ಮಾಡಿದರು. ನಿರಾಯುಧರಾಗಿ

ನಿಂತು ಯುದ್ಧ ಮಾಡಿದ್ದರೆ, ಅವರೆಲ್ಲರೂ ತಮ್ಮ ಪ್ರಾಣಗಳನ್ನು ಬಲಿಯಾಗಿ ಸಮರ್ಪಿಸಬೇಕಾಗುತ್ತಿದ್ದಿತು. ಆದರೆ, ಮುಹಮ್ಮದೀಯರ ಈ ವೀರ ಪ್ರತಿಜ್ಞೆಯನ್ನು ಕೇಳಿಯೋ, ಅಥವಾ ಮತ್ತಾವ ಕಾರಣದಿಂದಲೋ ಶತ್ರುಗಳು ಸಂಧಿಯ ಪ್ರಸ್ತಾವವನ್ನೆತ್ತಿ, ತಾವು ಹೇಳುವ ಷರತ್ತುಗಳಿಗೆ ಒಪ್ಪುವುದಾದರೆ ಮುಹಮ್ಮದೀಯರೊಡನೆ ಒಪ್ಪಂದ ಮಾಡಿಕೊಳ್ಳುವುದಾಗಿ ತಿಳಿಸಿದರು. ಅದರ ಫಲಿತಾಂಶವಾಗಿ ಹುದೈಬಿಯ್ಯಾ ಎಂಬಲ್ಲಿ ಒಪ್ಪಂದವು ಮುಂದೆ ಹೇಳುವ ಷರತ್ತುಗಳ ಮೇರೆಗೆ ನಡೆಯಿತು:—ಹತ್ತು ವರುಷಗಳ ಕಾಲ ಉಭಯತ್ರರೂ ಪರಸ್ಪರ ಯುದ್ಧ ಪ್ರಸಕ್ತಿಯಿಲ್ಲದೆ ತಟಸ್ಥರಾಗಿರಬೇಕು. ಮುಹಮ್ಮದನೂ ಅವನ ಪರಿವಾರವೂ ಆ ವರುಷ ಮಕ್ಕಾ ನಗರಕ್ಕೆ ಹೋಗದೆ ಮದೀನಾ ನಗರಕ್ಕೆ ಹಿಂದಿರುಗಬೇಕು. ಮಾರನೆಯ ವರುಷ ಅವರು ಮಕ್ಕಾ ನಗರಕ್ಕೆ ಹೋಗಬಹುದಾದರೂ, ಮೂರು ದಿನಗಳಿಗಿಂತಲೂ ಹೆಚ್ಚಾಗಿ ಅವರು ಆ ನಗರದಲ್ಲಿರಕೂಡದು. ಮಕ್ಕಾ ನಗರದಲ್ಲಿರುವ ಮುಹಮ್ಮದೀಯರಲ್ಲಿ ಯಾರೊಬ್ಬರನ್ನೂ ಈಗ ಅವರು ತಮ್ಮೊಡನೆ ಕರೆದುಕೊಂಡು ಹೋಗಕೂಡದು. ಅಲ್ಲದೆ, ತಮ್ಮೊಡನೆ ಬಂದಿರುವ ಮುಹಮ್ಮದೀಯರಲ್ಲಿ ಯಾರಾದರೂ ಮಕ್ಕಾ ನಗರದಲ್ಲಿಯೇ ಇದ್ದುಬಿಡಲು ಇಷ್ಟಪಡುವುದಾದರೆ, ಮುಹಮ್ಮದನು ಅದಕ್ಕೆ ಅಡ್ಡಿಮಾಡಕೂಡದು. ಮಕ್ಕಾ ನಗರದ ಮುಹಮ್ಮದೀಯರು ಯಾರಾದರೂ ಮದೀನಾ ನಗರಕ್ಕೆ ಹೋಗಿ ನೆಲಸಲು ಅಪೇಕ್ಷಿಸಿದಲ್ಲಿ ಮುಹಮ್ಮದನು ಅದಕ್ಕೆ ಸಮ್ಮತಿಸಕೂಡದು; ಆದರೆ, ಮದೀನಾ ನಗರದಲ್ಲಿರುವ ಯಾವನಾದರೂ ಮುಹಮ್ಮದೀಯನು ಮಕ್ಕಾ ನಗರಕ್ಕೆ ಹೊರಟುಹೋಗಲಿಚ್ಛಿಸಿದರೆ ಮುಹಮ್ಮದನು ಅದಕ್ಕೆ ಅನುಮತಿಯನ್ನು ಕೊಡಬೇಕು. ಅರಬ್ಬೀ ದೇಶದಲ್ಲಿರುವ ಇತರ ಬುಡಕಟ್ಟಿನ ಜನರು ತಮಗೆ ಇಷ್ಟ ಬಂದಂತೆ ಯಾರೊಡನೆ ಬೇಕಾದರೂ ಸೇರುವುದಕ್ಕೆ ಅವಕಾಶವಿರಬೇಕು.

ಸಂದರ್ಭೋಚಿತವಾಗಿ ಕೆಲಸ ಮಾಡಬೇಕೇ ಹೊರತು, ಮೂರ್ಖತನದಿಂದ ದುಡುಕಿ ನಡೆಯುವುದರಿಂದ ಲೇಶವೂ ಫಲವಿಲ್ಲವೆಂಬುದನ್ನು ಮುಹಮ್ಮದನು ಚೆನ್ನಾಗಿ ಅರಿತಿದ್ದನು. ತಾಳ್ಮೆ ತಪ್ಪಿ ವರ್ತಿಸು

ಮಹಮ್ಮದೀಯರ ಅಸಮಾಧಾನ

ವುದನ್ನಂತು ಅವನು ಎಂದೂ ಕಂಡರಿಯನು. ಆದಕಾರಣ, ತನ್ನ ಕಡೆಯವರಿಗೆ ಕೇವಲ ಪ್ರತಿಕೂಲವಾಗಿದ್ದ ಈ ಒಪ್ಪಂದಕ್ಕೆ ನಿರ್ವಾಹವಿಲ್ಲದೆ ಅವನು ಸಮ್ಮತಿಸಬೇಕಾಯಿತು. . ಕೇವಲ ಅಪಮಾನಕರವಾದ ಈ ಒಪ್ಪಂದದಿಂದ ತಮ್ಮ ಕೈಕಾಲುಗಳನ್ನು ತಾವೇ ಕಟ್ಟಿಹಾಕಿಕೊಂಡಂತಾಯಿತೆಂದು ಅವನ ಶಿಷ್ಯರೆಲ್ಲನೇಕರಿಗೆ ಅಸಮಾಧಾನವಾಯಿತು. ಅವರ ಅಭಿಪ್ರಾಯವು ಸಾಧುವೆಂಬುದಕ್ಕೆ ಒಂದು ನಿದರ್ಶನವೂ ದೊರೆಯಿತು: ಒಪ್ಪಂದವನ್ನು ಬರೆದು ಷರತ್ತುಗಳ ಪತ್ರಕ್ಕೆ ಉಭಯತ್ರರ ರುಜುಗಳೂ ಬೀಳುವ ವೇಳೆಗೆ, ಮಕ್ಕಾ ನಗರ ನಿವಾಸಿಯಾದ ಅಬೂ ಜಂಡಲನೆಂಬೊಬ್ಬ ಮುಹಮ್ಮದೀಯನು ಅಲ್ಲಿಗೆ ಬಂದು, ತಾನು ಇಸ್ಲಾಂ ಮತಾವಲಂಬಿಯಾದುದಕ್ಕಾಗಿ ಕೊರೈಷ್ ಮನೆತನದವರು ತನ್ನನ್ನು ಹಿಂಸಿಸುತ್ತಿದ್ದಾರೆಂದೂ, ಮುಹಮ್ಮದನು ತನ್ನನ್ನು ಮೆದೀನಾ ನಗರಕ್ಕೆ ಕರೆದೊಯ್ಯಬೇಕೆಂದೂ ಮೊರೆಯಿಟ್ಟು ತನ್ನ ಮೈ ಕೈಗಳ ಮೇಲೆ ಶತ್ರುಗಳ ಪ್ರಹಾರದಿಂದುಂಟಾದ ಗಾಯಗಳ ಗುರುತುಗಳನ್ನು ತೋರಿಸಿದನು. ಮುಹಮ್ಮದನ ಅಂತಃಕರಣವು ನೆನೆದು ನೀರಾಗಿ, ಷರತ್ತುಗಳಿಗೆ ಆತನೊಬ್ಬನ ವಿಷಯವನ್ನು ಮಾತ್ರ ಅಪವಾದವಾಗೆಣಿಸಿ ಆತನನ್ನು ತನ್ನೊಡನೆ ಕಳುಹಿಸಬೇಕೆಂದು ಮುಹಮ್ಮದನು ಶತ್ರುಗಳನ್ನು ಕೇಳಿದನು. ಅವರು ಅದಕ್ಕೆ ಸಮ್ಮತಿಸದೆಹೋಗಲು, ಮುಹಮ್ಮದನು ನಿರುಪಾಯನಾಗಿ ಸುಮ್ಮನಾಗಬೇಕಾಯಿತು. ಮುಹಮ್ಮದನ ಈ ವಿಧದ ವರ್ತನೆಯನ್ನು ಕಂಡು, ಅವನ ಶಿಷ್ಯರೆಲ್ಲರ ಸ್ಫುರಣೆಯೂ ಅಳಿದು ಹೋಯಿತು; ಉಮಾರನೆಂಬೊಬ್ಬನ ಹೊರತು ಉಳಿದವರೆಲ್ಲರೂ ಮುಹಮ್ಮದನಲ್ಲಿ ತಮಗಿದ್ದ ವ್ಯಕ್ತಿ ಗೌರವದ ದೆಸೆಯಿಂದ ಸುಮ್ಮನಿದ್ದರು. ಉಮಾರನಿಗೆ ಮಾತ್ರ ಅದು ಸಾಧ್ಯವಾಗಲಿಲ್ಲ; ಮುಹಮ್ಮದನ ವರ್ತನೆಯು ನ್ಯಾಯವಾದುದಲ್ಲವೆಂದು ಅವನು ಆಕ್ಷೇಪಿಸಿಯೇಬಿಟ್ಟನು. ಮುಹಮ್ಮದನು ಆಗಲೂ ಅವನಲ್ಲಿ ಕೋಪಗೊಳ್ಳದೆ ನಸು ನಗುತ್ತ, "ಅಯ್ಯಾ! ನಾನು ಭಗವದಿಚ್ಛೆಗೆ ಅಧೀನನಾಗಿ ಕೆಲಸಮಾಡುವನಲ್ಲವೆ? ಆಡಿದ ಭಾಷೆಯನ್ನು ನಾವು ಉಳಿಸಿಕೊಳ್ಳುವವರು ಅಹುದೋ ಅಲ್ಲವೋ

ಎಂಬ ಸತ್ವ ಪರೀಕ್ಷೆಯ ಸಮಯವು ಈಗ ಒದಗಿದೆ. ಅಬೂ ಜಂಡಲನ ದುರವಸ್ಥೆಯನ್ನು ನೋಡಿ ನಮ್ಮೆಲ್ಲರಿಗೂ ಸಂಕಟವೂ ಅನುತಾಪವೂ ಉಂಟಾಗಿರುವುದೇನೋ ನಿಜ. ಆದರೂ, ನಾವು ವಚನ ಭ್ರಷ್ಟರಾಗುವುದು ಮಾತ್ರ ಸರಿಯಲ್ಲ" ಎಂದು ತಾಳ್ಮೆಯಿಂದ ಉತ್ತರ ಹೇಳಿದನು.

ಮುಹಮ್ಮದನೂ ಅವನ ಶಿಷ್ಯರೂ ಮೆದೀನಾ ನಗರವನ್ನು ಸೇರಿದ ಸ್ವಲ್ಪ ಕಾಲದಲ್ಲಿಯೇ ಇದೇ ವಿಧದ ಮತ್ತೊಂದು ಧರ್ಮ ಸಂಕಟವು ಬಂದೊದಗಿತು: ಹೊಸದಾಗಿ ಇಸ್ಲಾಂ ಮತಕ್ಕೆ ಸೇರಿದ್ದ ಉತ್ಬನೆಂಬೊಬ್ಬನನ್ನು ಕೊರೈಷ್ ಮನೆತನದವರು ಅಬೂ ಜಂಡಲನಂತೆಯೇ ಹಿಂಸಿಸತೊಡಗಲು, ಅವನು ಮಕ್ಕಾ ನಗರವನ್ನು ಬಿಟ್ಟು ಮೆದೀನಾ ನಗರಕ್ಕೆ ಬಂದು ಮುಹಮ್ಮದನ ಶರಣುಹೊಕ್ಕನು. ಶತ್ರುಪಕ್ಷದವರಿಬ್ಬರು ಅವನ ಬೆನ್ನಹತ್ತಿ ಬಂದು, ಅವನನ್ನು ಮಕ್ಕಾ ನಗರಕ್ಕೆ ಕಳುಹಿಸಿಕೊಟ್ಟು ಒಪ್ಪಂದದ ಷರತ್ತನ್ನು ಉಳಿಸಿಕೊಳ್ಳಬೇಕೆಂದು ಮುಹಮ್ಮದನೊಡನೆ ಹೇಳಿದರು. ಮುಹಮ್ಮದನು ಆಲೋಚಿಸುತ್ತ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು, ಉತ್ಬನನ್ನು ಹಿಂದಕ್ಕೆ ಹೊರಟುಹೋಗುವಂತೆ ಅಪ್ಪಣೆ ಮಾಡಿದನು. ಉತ್ಬನು, "ನಾನು ಪವಿತ್ರವಾದ ಇಸ್ಲಾಂ ಮತವನ್ನು ಅವಲಂಬಿಸಿದ್ದೂ, ಹಿಂಸಕರಾದ ವಿಧರ್ಮಿಗಳ ವಶಕ್ಕೆ ತಾವೇ ನನ್ನನ್ನು ಒಪ್ಪಿಸಿಬಿಡುವಿರಾ?" ಎಂದು ಗೋಳಿಡಲು, ಮುಹಮ್ಮದನಿಗೆ ಬಹಳ ದುಃಖವಾಯಿತು. ಆದರೂ, ಮುಹಮ್ಮದನು ಚಿತ್ತ ಸಂಯಮ ಮಾಡಿ ತಾನೆಂದಿಗೂ ವಚನ ಭ್ರಷ್ಟನಾಗಕೂಡದೆಂದು ಸ್ಥಿರ ಮನಸ್ಕನಾದನು. ಮುಹಮ್ಮದನು ಮನಸ್ಸುಮಾಡಿದ್ದರೆ ಮಕ್ಕಾ ನಗರದಿಂದ ಬಂದಿದ್ದ ಶತ್ರು ಪಕ್ಷದವರನ್ನು ಕಾರಾ ಗೃಹದಲ್ಲಿ ಬಂಧಿಸಿ, ಆಗಂತುಕನಿಗೆ ಆಶ್ರಯ ಕೊಡಬಹುದಾಗಿದ್ದಿತು. ಶರಣಾಗತನಾಗಿ ಬಂದವನಿಗೆ ಆಶ್ರಯ ಕೊಡುವುದಕ್ಕಿಲ್ಲದ ವಿಷಮ ಸಂಕಟದಲ್ಲಿ ಅವನ ಮನಸ್ಸು ತಲ್ಲಣಿಸಿಹೋದರೂ ಮುಹಮ್ಮದನು ಆಗಂತುಕನೊಡನೆ, "ಉತ್ಬ! ನಿನಗೆ ಆಶ್ರಯವನ್ನು ಕೊಡುವುದಕ್ಕಾಗಿ ನಾನು ಒಪ್ಪಂದದ ಷರತ್ತನ್ನು ಮೀರಿ ವಚನ ಭ್ರಷ್ಟನಾಗಲಾರೆ; ಯತ್ನವಿಲ್ಲದೆ ನಿನ್ನನ್ನು ಹಿಂದಕ್ಕೆ ಕಳುಹಿಸಬೇಕಾಗಿದೆ" ಎಂದು ಹೇಳಿದನು. ಉತ್ಬನೂ ಸಚ್ಛಿಷ್ಯನಲ್ಲದೆ ಹೊರಗಿನ ವೇಷದಿಂದ

ಮಹಮ್ಮದೀಯನಾಗಿದ್ದವನಲ್ಲ; ಆದಕಾರಣ, ಅವನು ಗುರುವಿನ ಅಪ್ಪಣೆಯನ್ನು ಶಿರಸಾ ವಹಿಸಿ ಹಿಂದಕ್ಕೆ ಹೊರಟುಹೋದನು. ಮಹಮ್ಮದನ ಕಡೆಯವರಿಗೆ ಮೊದಲೇ ಮನಸ್ಸಿನಲ್ಲಿದ್ದ ಬೇಗುದಿಯು ಇದರಿಂದ ಮತ್ತಷ್ಟು ಹೆಚ್ಚಿದರೂ ಅವರ ಗುರುಭಕ್ತಿಯು ಅದನ್ನು ಮೆಟ್ಟಿ ಶಾಂತತೆಯನ್ನುಂಟುಮಾಡಿತು.

ಹೊಸ ವಸತಿಯ ಸ್ಥಾಪನೆ

ಅನಾಥನಾಗಿದ್ದ ಉತ್ಬನು ಮಕ್ಕಾ ನಗರದ ಕಡೆಗೆ ಪಯಣ ಹೊರಟು ನಗರವನ್ನು ತಲಪಿದೊಡನೆಯೇ ಶತ್ರುಗಳ ಕೈಯಿಂದ ತನಗೆ ಸಾವು ಸಿದ್ಧವೆಂಬುದನ್ನು ಗೊತ್ತುಮಾಡಿಕೊಂಡವನಾಗಿ, "ವಿಶಾಲವಾದ ಈ ಪ್ರಪಂಚದಲ್ಲಿ ನನ್ನನ್ನು ರಕ್ಷಿಸುವವರು ಯಾರೂ ಇಲ್ಲವೆ!" ಎಂದು ವ್ಯಥೆಪಟ್ಟನು; ಸ್ವಲ್ಪ ಕಾಲದಲ್ಲಿಯೇ ಧೈರ್ಯತಂದುಕೊಂಡು, "ಜಗದ್ರಕ್ಷಕನಾದ ಭಗವಂತನೇ ಸಹಾಯಕ್ಕಿರುವಲ್ಲಿ, ತನ್ನವರು ಯಾರೂ ಇಲ್ಲವೆಂದು ವ್ಯಥೆಪಡಲೇಕೆ?" ಎಂದಾಲೋಚಿಸಿ ತನ್ನ ಮನಸ್ಸಿಗೆ ತಾನೇ ಸಮಾಧಾನ ಹೇಳಿಕೊಂಡನು. ಸಮಯವನ್ನು ನಿರೀಕ್ಷಿಸಿಕೊಂಡಿದ್ದ ಉತ್ಬನು, ತನ್ನ ಮೇಲೆ ಕಾವಲಿದ್ದವರಲ್ಲೊಬ್ಬನನ್ನು ದಾರಿಯಲ್ಲಿಯೇ ಕೊಂದುಬಿಟ್ಟನು; ಪ್ರಾಣಭಯದಿಂದ ಮತ್ತೊಬ್ಬನು ಪಲಾಯನ ಮಾಡಿದನು. ಆದರೆ ಉತ್ಬನು ಮೆದೀನಾ ನಗರಕ್ಕೆ ಹಿಂದಿರುಗಿ ಹೋಗುವಂತೆ ಇರಲಿಲ್ಲ; ಮಕ್ಕಾ ನಗರವಂತೂ ಅವನ ಭಾಗಕ್ಕೆ ವಧ್ಯಭೂಮಿಯಂತಿದ್ದಿತು. ಆದಕಾರಣ, ಸಮಯಸಾಹಸಿಯಾದ ಆ ಉತ್ಬನು ಆ ಎರಡು ಯೋಜನೆಗಳನ್ನೂ ಬಿಟ್ಟು ಇಸ್ ಎಂಬ ತೀರ ಪ್ರದೇಶವನ್ನು ಸೇರಿ ಅಲ್ಲಿ ಹೊಸ ವಸತಿಯೊಂದನ್ನು ಸ್ಥಾಪಿಸಿಕೊಂಡು ನೆಲಸಿದನು. ಕೊರೈಷಾ ಮನೆತನದವರ ಹಿಂಸೆಗೊಳಗಾಗಿದ್ದ ಇತರ ಮಹಮ್ಮದೀಯರೂ ಕ್ರಮೇಣ ಅಲ್ಲಿಗೆ ಬಂದು ಸೇರಿ, ಯಾರ ಭಯವೂ ಇಲ್ಲದೆ ಅವರೆಲ್ಲರೂ ನಿರುಪಾಧಿಕವಾಗಿ ವಾಸಮಾಡಲು ಅನುಕೂಲವಾಯಿತು. ದಿನ ದಿನಕ್ಕೆ ಅವರ ಪ್ರಾಬಲ್ಯವು ಹೆಚ್ಚುತ್ತ ಬಂದುದರಿಂದ, ಪರಿಣಾಮದಲ್ಲಿ ಅವರ ದೆಸೆಯಿಂದ ತಮ್ಮ ವ್ಯಾಪಾರಕ್ಕೆ ಕುಂದಕವುಂಟಾಗಿ, ಸಿರಿಯಾ ದೇಶದೊಡನೆ ತಮಗಿದ್ದ ಸಂಬಂಧವು ಮತ್ತೊಮ್ಮೆ ಎಲ್ಲಿ ತಪ್ಪಿಹೋಗು

ವುದೋ ಎಂದು ಮಕ್ಕಾ ನಗರದಲ್ಲಿದ್ದ ಶತ್ರು ಪಕ್ಷದವರಿಗೆ ಭೀತಿಯು ತಲೆದೋರಿತು. ಇದರಿಂದ, ಮಕ್ಕಾ ನಗರದ ಯಾವ ಮುಹಮ್ಮದೀಯ ನಾದರೂ ಮದೀನಾ ನಗರಕ್ಕೆ ಹೋಗಿ ನೆಲಸಲು ಅವಕಾಶವಿರುವಂತೆ ಶತ್ರು ಪಕ್ಷದವರು ತಾವಾಗಿಯೇ ಒಪ್ಪಂದದ ಷರತ್ತುಗಳನ್ನು ಮಾರ್ಪಡಿಸಿದರು.

ಮುಹಮ್ಮದನು ತಾಳ್ಮೆಯಿಂದಿದ್ದು ತನಗೆ ಪ್ರತಿಕೂಲವಾಗಿದ್ದ ಷರತ್ತುಗಳಿಗೂ ಒಪ್ಪಿದುದರ ದೆಸೆಯಿಂದ ಪರಿಣಾಮದಲ್ಲಿ ಸತ್ಫಲವೇ ಉಂಟಾಯಿತು. ಮುಹಮ್ಮದನು ತನಗೆ ಸ್ವಲ್ಪವೂ ಅನುಕೂಲವಲ್ಲದ ಷರತ್ತುಗಳಿಗೂ ಒಪ್ಪಿಕೊಂಡು ತಾನು ಮದೀನಾ ನಗರಕ್ಕೆ ಹೋದಮೇಲೆ ಕೂಡ— ಸ್ವಸ್ಥಾನದಲ್ಲಿ ಮತ್ತೆ ಬಲಶಾಲಿಯಾಗಿ ಕುಳಿತಮೇಲೆ ಕೂಡ—ಅವು ಗಳನ್ನು ತಪ್ಪದೆ ಪ್ರತಿಪಾಲಿಸಿದುದನ್ನು ಕಂಡು, ಅವನು ಸತ್ಯಸಂಧ ನೆಂಬ ಅಭಿಪ್ರಾಯವು ಜನರಲ್ಲಿ ದೃಢಗೊಂಡಿತು. ಮುಹಮ್ಮದನು ಬಹಳ ಹಿಂದಣಿಂದಲೂ ನಡೆದುಬಂದಿದ್ದ ಮತ ಸಂಪ್ರದಾಯಗಳಿಗೆ ವಿರುದ್ಧ ವಾದ ಚಳವಳವನ್ನೆಬ್ಬಿಸಿದ ಪಾಷಂಡನೆಂದು ಅಭಿಪ್ರಾಯಪಟ್ಟಿದ್ದವರು ಕೂಡ ಅವನ ಸದ್ಗುಣಗಳನ್ನು ಪ್ರತ್ಯಕ್ಷವಾಗಿ ತಿಳಿಯಲು ಅವನ ಈ ಪ್ರಯಾಣದಿಂದ ಅವಕಾಶ ದೊರೆಯಿತು. ಯಾವ ಅರಬ್ಬೀಯರು, ಇಸ್ಲಾಂ ಮತವು ಹೊಸದೆಂಬ ಕಾರಣದಿಂದ ಅದನ್ನು ದ್ವೇಷಿಸಿ, ಮುಹಮ್ಮದನನ್ನು ಕೊಲ್ಲಲು ಸಿದ್ಧರಾಗಿದ್ದರೋ ಅದೇ ಅರಬ್ಬೀಯರಲ್ಲಿ ಅನೇಕರು ಅದರ ಉದಾತ್ತ ತತ್ತ್ವಗಳನ್ನರಿತು ಬದ್ಧಾದರರಾಗಿ ಆ ಮತ ವನ್ನವಲಂಬಿಸಿ ಮುಹಮ್ಮದನ ಪ್ರಿಯ ಶಿಷ್ಯರಾದರು. ಸುಮಾರು ಒಂದೂ ವರೆ ವರುಷದ ಮೇಲೆ ಮುಹಮ್ಮದನು ಮತ್ತೆ ಮಕ್ಕಾ ನಗರಕ್ಕೆ ಹೊರಡುವ ವೇಳೆಗೆ, ಮೊದಲಣ ಸಾವಿರದ ನಾನ್ನೂರು ಮಂದಿ ಮುಹಮ್ಮ ದೀಯರಿಗೆ ಬದಲಾಗಿ ಹತ್ತು ಸಾವಿರ ಮಂದಿ ಮುಹಮ್ಮದೀಯರು ಅವನ ಹಿಂದೆ ಹೋಗುವಂತಾಯಿತು. ಶತ್ರು ವರ್ಗಕ್ಕೆ ಸೇರಿದ್ದ ವೀರಾ ಗ್ರಣಿಗಳಾದ ಕಾದಿರ್ ಮುಂತಾದವರು ಕೂಡ ಅವನ ಶಿಷ್ಯರಾದರೆಂದ ಮೇಲೆ ಮುಹಮ್ಮದನ ಆನಂದಕ್ಕೆ ಪಾರವುಂಟೆ?

ಒಪ್ಪಂದದ ಪರಿಣಾಮ ಫಲ

# ಹತ್ತನೆಯ ಅಧ್ಯಾಯ

## ಒಪ್ಪಂದವಾದ ಎರಡನೆಯ ವರುಷ

ತುಂಟರಾದ ಕೆಲವು ಮಂದಿ ಯೆಹೂದ್ಯರಿಗೆ ಮದೀನಾ ನ
ದಿಂದ ಉಚ್ಚಾಟನೆಯಾದುದನ್ನು ಹಿಂದೆ ಹೇಳಿದೆವಷ್ಟೆ. ಖೈಬ
ಪ್ರಾಂತಕ್ಕೆ ವಲಸೆ ಹೋಗಿದ್ದ ಆ ಜನರು, ಮದೀ
ಮುತ್ತಿಗೆಯಲ್ಲಿ ಶತ್ರು ಪಕ್ಷದವರು ಪರಾಭ
ಹೊಂದಿದ ಮೇಲೆ, ಇಸ್ಲಾಂ ಮತವು ರೂಢಮೂ

ಯೆಹೂದ್ಯರ ಮೇಲೆ ಯುದ್ಧ

ವಾಗಿ ನಿಂತುದನ್ನು ಕಂಡು ದ್ವೇಷಾಸೂಯೆಗಳಿಂದ ಕೂಡಿದವರಾ
ಅಲ್ಲಿ ಬಹುಸಂಖ್ಯಾಕರಾಗಿದ್ದ ಸ್ವಮತೀಯರನ್ನು ಮುಹಮ್ಮದ
ಮೇಲೆ ಎತ್ತಿಕಟ್ಟಿ, ಇಸ್ಲಾಂ ಮತವನ್ನು ಧ್ವಂಸ ಮಾಡಲು ಎಲ್ಲರ
ಸೊಂಟಗಟ್ಟಿ ನಿಂತರು. ಇದಕ್ಕಾಗಿ ಅವರು ಘಟಫನ್ ಪ್ರಾಂ
ಜನರನ್ನೂ ತಮ್ಮೊಡನೆ ಸೇರಿಸಿಕೊಂಡರು. ಮುಹಮ್ಮದನು ತನ
ಕೇವಲ ಪ್ರತಿಕೂಲವಾದ ಷರತ್ತುಗಳಿಗೊಪ್ಪಿ ಹುದಿಬೈಯ್ಯಾ
ಒಪ್ಪಂದವನ್ನು ಮಾಡಿಕೊಂಡಿದ್ದುದರಿಂದ, ಮುಹಮ್ಮದೀಯರು ಅಷ
ಬಲಿಷ್ಠರಲ್ಲವೆಂದೂ, ಒಪ್ಪಂದಮಾಡಿಕೊಳ್ಳುವುದಕ್ಕೆ ಅವರ ದೌರ್ಬಲ್ಯ
ಕಾರಣವೆಂದೂ, ತಾವು ಅವರನ್ನು ಸುಲಭವಾಗಿ ಧ್ವಂಸ ಮಾಡಬಹ
ದೆಂದೂ ಯೆಹೂದ್ಯರು ನಿರ್ಧರಿಸಿದರು. ಖೈಬರು ಪ್ರಾಂತದಲ್ಲಿ ಸುರಕ್ಷಿ
ವಾದ ಕೋಟೆ ಕೊತ್ತಲಗಳೇ ಮುಂತಾದ ಸಾಧನ ಸಂಪತ್ತುಗ
ತಮಗುಂಟೆಂಬ ದುರಹಂಕಾರವೂ ಅವರನ್ನು ಈ ರೀತಿಯಾಗಿ ಕುಣಿ
ತ್ತಿದ್ದಿತು.

ಅತ್ತ, ಮುಹಮ್ಮದನೂ ಎಚ್ಚರಗೊಳ್ಳದೆ ಇರಲಿಲ್ಲ. ಘಟಫ
ಪ್ರಾಂತದಿಂದ ಸೈನ್ಯವು ಬರುವುದಕ್ಕೆ ಮೊದಲೇ ಅವನು ೧,೬೦೦ ಮಂ
ಸೈನಿಕರುಳ್ಳ ಒಂದು ದಂಡನ್ನು ಕಳುಹಿಸಿದ್ದುದರಿಂದ, ಆ ದಂಡು ರಜ
ಎಂಬ ಸ್ಥಳದಲ್ಲಿ ಪಾಳೆಯವನ್ನು ಬಿಟ್ಟಿದ್ದಿತು. ಅದು ಘಟಫನ್ ಪ್ರಾಂ
ದಿಂದ ಖೈಬರಿಗೆ ಹೋಗುವ ಒಂದೇ ಮಾರ್ಗವಾಗಿದ್ದುದರಿಂದ ಆಯ
ವಾದ ಸ್ಥಳವಾಗಿದ್ದಿತು. ನಿರಪರಾಧಿಗಳಾದ ಮುಹಮ್ಮದೀಯರ ಮೇ

ತಾವು ದಂಡೆತ್ತಿ ಬಂದ ತಪ್ಪಿತಕ್ಕಾಗಿ ಮುಹಮ್ಮದನಿಂದ ತಮಗೆಲ್ಲಿ ದಂಡನೆ ಯಾಗುವುದೋ ಎಂದು ಭಯಪಟ್ಟು ಘಟಫನ್ ಪ್ರಾಂತದವರು ಖೈಬರಿಗೆ ಸೈನ್ಯವನ್ನು ಕಳುಹಿಸಲೇ ಇಲ್ಲ. ಮುಹಮ್ಮದೀಯರಿಗೂ ಖೈಬರಿನ ಯೆಹೂದ್ಯರಿಗೂ ಕದನವು ಕೈಗಟ್ಟಿ, ಯೆಹೂದ್ಯರು ಬಹು ಕಾಲದಿಂದಲೂ ಯುದ್ಧಕ್ಕೆ ಸಿದ್ಧಮಾಡಿಕೊಂಡಿದ್ದುದರಿಂದ, ಅವರನ್ನು ಸೋಲಿಸುವುದು ಮುಹಮ್ಮದೀಯರಿಗೆ ಬಹಳ ಕಷ್ಟವಾಯಿತು. ಆದರೂ, ಒಂದಾದ ಮೇಲೆ ಮತ್ತೊಂದರಂತೆ, ಯೆಹೂದ್ಯರ ಕೋಟೆಗಳು ಮುಹ ಮ್ಮದನ ವಶವಾದವು. ಅಲೀಯ ಅಧಿನಾಯಕತ್ವದಲ್ಲಿ ಅವರು ಅತಿ ಪರಾಕ್ರಮದಿಂದ ಇಪ್ಪತ್ತು ದಿನಗಳು ಯುದ್ಧ ಮಾಡಿ, ಅಧಿಕವಾದ ಸೈನ್ಯವಿದ್ದ ಕ್ವಾಮೂಸ್ ಎಂಬ ಬಹಳ ದೊಡ್ಡ ಕೋಟೆಯನ್ನೂ ಸ್ವಾಧೀನಪಡಿಸಿಕೊಂಡರು. ಅಲ್ಲಿಗೆ ಯೆಹೂದ್ಯರ ಹೆಮ್ಮೆ ಮುರಿದು ಅವರು ಶರಣಾಗತರಾದರು. ತಮ್ಮ ತಮ್ಮ ಭೂಮಿ ಕಾಣಿಗಳನ್ನು ತಮ ತಮಗೇ ಉಳಿಸಿಕೊಡಬೇಕೆಂದೂ, ಬೆಳೆಯಲ್ಲಿ ಅರ್ಧ ಭಾಗವನ್ನು ಕಾಣಿಕೆಯಾಗೊಪ್ಪಿಸಿ ತಾವು ಸ್ನೇಹದಿಂದಿರುವುವೆಂದೂ ಯೆಹೂ ದ್ಯರು ಕ್ರಿ. ಶ. ೬೨೮ರಲ್ಲಿ ಮುಹಮ್ಮದನೊಡನೆ ಒಪ್ಪಂದ ಮಾಡಿ ಕೊಂಡರು. ಅಲ್ಲಿಗೂ ಯೆಹೂದ್ಯರ ಕುತ್ಸಿತ ಬುದ್ಧಿಯು ಕೊನೆಗಾಣ ಲಿಲ್ಲ: ಅವರ ಮುಖ್ಯಸ್ಥರೆಲ್ಲರೂ ಸೇರಿ ತಮ್ಮ ರಾಣಿಯಿಂದ ಮುಹಮ್ಮದ ನಿಗೆ ಔತಣದ ಆಹ್ವಾನವನ್ನು ಕಳುಹಿಸಿದರು. ಮುಹಮ್ಮದನಿಗೂ ಅವನ ಕಡೆಯವರಿಗೂ ವಿಷ ಮಿಶ್ರಿತವಾದ ಆಹಾರವು ಸಿದ್ಧವಾಯಿತು. ಈ ಕೃತ್ರಿಮ ಸಂಧಾನದಿಂದ ಅವರೆಲ್ಲರನ್ನು ಕೊಂದು ಬಳಿಕ ತಾವು ನಿರುಪಾಧಿಕವಾಗಿ ಬಾಳಬೇಕೆಂಬುದೇ ಯೆಹೂದ್ಯರ ಸಂಕಲ್ಪ. ಭೋಜ ನಕ್ಕೆ ಕುಳಿತು ಒಂದು ತುತ್ತನ್ನು ಬಾಯಲ್ಲಿಟ್ಟುಕೊಂಡ ಕೂಡಲೆ ಭಗವಂತನ ದಯೆಯಿಂದ ಮುಹಮ್ಮದನಿಗೆ ಏನೋ ಒಂದು ಶಂಕೆಯು ತಲೆದೋರಿ, ಒಬ್ಬರೂ ಊಟಮಾಡಕೂಡದೆಂದು ತನ್ನವರಿಗೆ ತಿಳಿಸಿದನು. ಆದರೆ, ಅಷ್ಟರಲ್ಲಿ ಒಂದೆರಡು ತುತ್ತುಗಳು ಹೊಟ್ಟೆಗೆ ಸೇರಿದ್ದ ಬಿಷರ್ ಎಂಬಾತನು ಮಾತ್ರ ಸ್ವಲ್ಪ ಹೊತ್ತಿನಲ್ಲಿಯೇ ಮೃತಪಟ್ಟನು. ಈ ಘೋರ ಕೃತ್ಯಕ್ಕಾಗಿ ಮುಹಮ್ಮದನು ಯೆಹೂದ್ಯರೆಲ್ಲರನ್ನೂ ಕೊಲ್ಲಿಸ

ಬಹುದಾಗಿದ್ದಿತು ; ಆದರೆ ಅವರಲ್ಲಿ ಮೈತ್ರಿಯಿಂದಿರಬೇಕೆಂಬುದೇ ಮಹ
ಮ್ಮದನ ಆಸೆಯಾಗಿದ್ದುದರಿಂದ ಅವರ ರಾಣಿಯಾದ ಜೈನಾಬಳಿಗೆ
ಮಾತ್ರ ದಂಡನೆಯನ್ನು ವಿಧಿಸಿ ಉಳಿದವರಲ್ಲಿ ಕರುಣೆಯಿಂದ ವರ್ತಿಸಿ
ದನು. ಯೆಹೂದ್ಯರಲ್ಲಿ ತನಗೆ ಮೈತ್ರಿಯು ಸಿದ್ಧಿಸಲೆಂಬ ಉದ್ದೇಶದಿಂದ
ತನಗೆ ಸೆರೆ ಸಿಕ್ಕಿದ್ದ ಯೆಹೂದ್ಯರ ಅರಸನ ಮಗಳಾದ ಸಫಿಯಾ ಎಂಬಾಕೆ
ಯನ್ನು ಮಹಮ್ಮದನು ವಿವಾಹಮಾಡಿಕೊಂಡನು.

ರಾಜರುಗಳಿಗೆ ನಿರೂಪಗಳು

ಇಸ್ಲಾಂ ಮತವನ್ನವಲಂಬಿಸುವಂತೆ ನಾನಾ ದೇಶಗಳ ರಾಜರು
ಗಳಿಗೆ ಕ್ರಿ. ಶ. ೬೨೮ರಲ್ಲಿ ಮಹಮ್ಮದನು ನಿರೂಪಗಳನ್ನು ಕಳುಹಿಸಿ
ದನು. ಈಜಿಪ್ಟಿನ ದೊರೆಯಾದ ಮುಕೌಕಾಸನು
ಮಹಮ್ಮದನ ನಿರೂಪವನ್ನು ರತ್ನ ಖಚಿತವಾದ
ಭರಣಿಯಲ್ಲಿಟ್ಟು ಗೌರವಿಸಿ ಮಹಮ್ಮದನ ರಾಯ
ಭಾರಿಯನ್ನು ಕೇವಲ ಆದರದಿಂದ ಕಂಡು ಸತ್ಕರಿಸಿದನು. ಆ ದೊರೆಯು
ಇಸ್ಲಾಂ ಮತಕ್ಕೆ ಸೇರದೆಹೋದರೂ, ಮಹಮ್ಮದನಿಗೆ ಅನೇಕ ಬಗೆಯ
ಕಾಣಿಕೆಗಳನ್ನು ಸಮರ್ಪಿಸುವುದರಲ್ಲಿ, ಮೇರಿ ಎಂಬ ಕ್ರೈಸ್ತ ಮತದ
ಗುಲಾಮ ಕನ್ಯೆಯನ್ನೂ ಒಪ್ಪಿಸಿದನು. ಮಹಮ್ಮದನು ಆ ಕನ್ಯೆಯನ್ನು
ಗುಲಾಮತನದಿಂದ ಬಿಡುಗಡೆ ಮಾಡಿ ತಾನೇ ಮದುವೆ ಮಾಡಿಕೊಂಡನು.

ರೋಮನ್ ದೊರೆಯಾದ ಕೈಜರನ ಬಳಿಗೆ ಮಹಮ್ಮದನ ನಿರೂಪ
ವನ್ನು ತೆಗೆದುಕೊಂಡು ಕಾಲ್ಬಿಯೆಂಬಾತನು ಹೋಗುವ ಸಮಯಕ್ಕೆ,
ವ್ಯಾಪಾರಾರ್ಥವಾಗಿ ಸಿರಿಯಾ ದೇಶಕ್ಕೆ ಹೋಗಿದ್ದ ಅಬೂ ಸುಫ್ಯಾನ
ನಿಗೂ ದೊರೆಯ ಬಳಿಗೆ ಆಹ್ವಾನವು ಬಂದಿತು. ಕೈಜರ್ ದೊರೆಯು
ಮಹಮ್ಮದನ ವಿಚಾರವೇನೆಂದು ಅಬೂ ಸುಫ್ಯಾನನ್ನು ಕೇಳುವಲ್ಲಿ
ಅವನು, "ಮಹಾ ಸ್ವಾಮೀ! ಮಹಮ್ಮದನು ದೊಡ್ಡ ವಂಶದಲ್ಲಿ ಹುಟ್ಟಿ
ದವನು. ಅವನು ಸಟೆಯಾಡಿದುದನ್ನಾಗಲಿ ಕೊಟ್ಟ ಭಾಷೆಗೆ ತಪ್ಪಿದುದ
ನ್ನಾಗಲಿ ಯಾರೂ ಕಂಡರಿಯರು. ಒಬ್ಬನೇ ಭಗವಂತನನ್ನು ಆರಾಧಿಸ
ಬೇಕೆಂದೂ, ಇತರ ದೇವತೆಗಳ ಪೂಜೆಯನ್ನು ಬಿಟ್ಟುಬಿಡಬೇಕೆಂದೂ,
ಸುಳ್ಳನ್ನು ಹೇಳಬಾರದೆಂದೂ, ಸಾಧ್ಯವಾಗುವ ಮಟ್ಟಿಗೂ ಪರೋಪ
ಕಾರ ಮಾಡಬೇಕೆಂದೂ ಆತನು ಜನರಿಗೆ ಬೋಧಿಸುತ್ತಿದ್ದಾನೆ. ಆತನ

ಅನುಯಾಯಿಗಳ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಿದೆ'' ಎಂದು ಕೈಜರನಿಗೆ ತಿಳಿಸಿದನು. ಈ ಮಾತುಗಳು ಮುಹಮ್ಮದನ ಶತ್ರುವಿನ ಬಾಯಿಂದ ಬಂದುದರಿಂದ ಅವಕ್ಕೆ ಮತ್ತಷ್ಟು ಬೆಲೆ ಹೆಚ್ಚಿ ಕೈಜರನು ಸಂತೋಷಭರಿತನಾದನು. ಅವನು ತನ್ನ ಪ್ರಜೆಗಳಲ್ಲಿ ಮುಖ್ಯಸ್ಥರಾದವರನ್ನು ಸಭೆ ಸೇರಿಸಿ, ತಾವುಗಳೆಲ್ಲರೂ ಇಸ್ಲಾಂ ಮತವನ್ನವಲಂಬಿಸುವುದು ಉತ್ತಮವಲ್ಲವೇ ಎಂದು ಕೇಳಲು, ಅವರು ಯಾರೂ ಅದಕ್ಕೆ ಒಪ್ಪಿಗೆಯನ್ನು ಕೊಡಲಿಲ್ಲ. ಪ್ರಜಾ ಪ್ರಮುಖರ ವಿರೋಧವನ್ನು ಕಟ್ಟಿಕೊಂಡು ಹೊಸ ಮತವನ್ನು ಹರಡುವುದು ಆ ದೊರೆಗೆ ಸೂಕ್ತ ತೋರಲಿಲ್ಲ. ಆದಕಾರಣ, ಇಸ್ಲಾಂ ಮತದಲ್ಲಿ ತನಗೆ ಸಂಪೂರ್ಣ ಸಹಾನುಭೂತಿಯಿದ್ದರೂ ಕೈಜರನು ಸುಮ್ಮನಿರಬೇಕಾಯಿತು.

ಹುಜಾಫನ ಮಗನಾದ ಅಬ್ದುಲ್ಲಾ ಎಂಬಾತನು ಪರ್ಷಿಯಾ ದೇಶದ ಖುಸ್ರೂ ಚಕ್ರವರ್ತಿಯ ಬಳಿಗೆ ಮುಹಮ್ಮದನ ನಿರೂಪವನ್ನು ತೆಗೆದುಕೊಂಡು ಹೋಗಿದ್ದನು. ನಿರೂಪದಲ್ಲಿ ಖುಸ್ರೂ ಚಕ್ರವರ್ತಿಯ ಹೆಸರನ್ನು ಬರೆಯುವುದಕ್ಕೆ ಮೊದಲೇ ಮುಹಮ್ಮದನ ಹೆಸರು ಬರೆದಿದ್ದುದನ್ನು ಕಂಡು ಚಕ್ರವರ್ತಿಯು ಕೋಪದಿಂದ ಕಿಡಿಕಿಡಿಯಾಗಿ ಮುಹಮ್ಮದನನ್ನು ಮಿತಿ ಮೀರಿ ಶಪಿಸಿ, ಆ ನಿರೂಪವನ್ನು ಚೂರು ಚೂರಾಗಿ ಹರಿದುಹಾಕಿದನು. ಚಕ್ರೇಶ್ವರನಾದ ತನ್ನ ಹೆಸರನ್ನು ಮೊಟ್ಟಮೊದಲು ಬರೆಯಿಸದೆ ತಪ್ಪಿದ ಉದ್ಧಟತನಕ್ಕಾಗಿ ಮುಹಮ್ಮದನನ್ನು ಶಿಕ್ಷಿಸುವೆನೆಂದು ಗರ್ಜಿಸಿ, ಅವನನ್ನು ಹಿಡಿತರಿಸುವಂತೆ ಯಮನ್ ರಾಷ್ಟ್ರದಲ್ಲಿದ್ದ ತನ್ನ ಪ್ರತಿನಿಧಿಯಾದ ಬಜನ್ ಎಂಬಾತನಿಗೆ ಅಪ್ಪಣೆಮಾಡಲು, ಆತನು ತನ್ನ ಸೈನಿಕರಿಬ್ಬರನ್ನು ಇದಕ್ಕಾಗಿ ಮೆದೀನಾ ನಗರಕ್ಕೆ ಕಳುಹಿಸಿದನು. ಅರಬ್ಬಿಯವರೆಂದರೆ ಕೇವಲ ಸಾಮಾನ್ಯರೆಂದೂ, ಮುಹಮ್ಮದನು ಸುಲಭವಾಗಿ ಹಿಡಿತರಲು ಸಾಧ್ಯನಾದ ಅಲ್ಪ ಮನುಷ್ಯನೆಂದೂ ಪರ್ಷಿಯಾ ಚಕ್ರವರ್ತಿಗೆ ಭಾವನೆಯಿದ್ದಂತೆ ತೋರುತ್ತದೆ. ಯಮನ್ ರಾಷ್ಟ್ರದಿಂದ ಮೆದೀನಾಕ್ಕೆ ಹೋದ ಸೈನಿಕರು ಅಲ್ಲಿಯ ಪ್ರಜೆಗಳಿಗೆ ಮುಹಮ್ಮದನಲ್ಲಿದ್ದ ಪ್ರೀತಿ ಗೌರವಗಳನ್ನೂ ಗುರು ಭಕ್ತಿಯನ್ನೂ ಕಂಡು ಬೆರಗಾದರು. ಅವರು ಮುಹಮ್ಮದನ ಬಳಿಗೆ ಹೋಗಿ ತಾವು ಬಂದ

ಉದ್ದೇಶವನ್ನು ಅರಿಕೆಮಾಡಲು ಮಹಮ್ಮದನು, "ನಾನು ಬರುವ ಮಾತು ಹಾಗಿರಲಿ; ನಿಮ್ಮ ಚಕ್ರವರ್ತಿಯಾದ ಖುಸ್ರುವೇ ಬದುಕಿಲ್ಲವಲ್ಲಾ! ನಾನು ಯಾರ ಬಳಿಗೆ ಬರಬೇಕು?" ಎಂದನಂತೆ. ಅವರು ಬೆರಗಾಗಿ ಏನೂ ತೋರದೆ ಹಿಂದಕ್ಕೆ ಹೊರಟುಹೋದರಂತೆ. ಮಹಮ್ಮದನು ಆ ನುಡಿಗಳನ್ನಾಡಿದ ರಾತ್ರಿಯೇ ಖುಸ್ರೂ ಚಕ್ರವರ್ತಿಯು ಆತನ ಮಗನ ಕೈಯಿಂದ ಮರಣಹೊಂದಿದನಂತೆ. ಈ ಅದ್ಭುತವಾದ ವರ್ತಮಾನವನ್ನು ಕೇಳಿದೊಡನೆಯೇ ಬಜನನು ಇಸ್ಲಾಂ ಮತವನ್ನು ಸ್ವೀಕರಿಸಿ, ಚಕ್ರಾಧಿಪತ್ಯದ ದಾಸ್ಯವನ್ನು ಕೊಡಹಿಬಿಟ್ಟು, ಯಮನ್ ಪ್ರಾಂತಕ್ಕೆ ತಾನೇ ದೊರೆಯಾದನಂತೆ.

ಅಬಿಸಿನಿಯಾ ದೇಶದ ಅರಸನಾದ ನೇಗುಸನು ಮಹಮ್ಮದನ ನಿರೂಪವನ್ನು ಆದರದಿಂದ ಸ್ವೀಕರಿಸಿ, ಇಸ್ಲಾಂ ಮತದ ತತ್ತ್ವಗಳು ಅತ್ಯುತ್ತಮವಾದವುಗಳೆಂದು ಆತನ ಮನಸ್ಸಿಗೆ ತೋರಲು, ಒಡನೆಯೇ ಇಸ್ಲಾಂ ಮತವನ್ನವಲಂಬಿಸಿ ಮಹಮ್ಮದನ ಶಿಷ್ಯನಾದನು. ಅರಬ್ಬೀ ದೇಶದ ಒಬ್ಬ ಪಾಳೆಯಗಾರನು ಮಾತ್ರ ಮಹಮ್ಮದನ ನಿರೂಪದ ವಿಷಯದಲ್ಲಿ ಅಕ್ಷಮ್ಯವಾದ ಅತ್ಯಾಚಾರವನ್ನು ನಡೆಯಿಸಿದನು: ರಾಯಭಾರಿತನದ ನಿಯಮಗಳನ್ನೇ ಉಲ್ಲಂಘಿಸಿ, ತನ್ನಲ್ಲಿಗೆ ನಿರೂಪವನ್ನು ತಂದ ಮಹಮ್ಮದನ ದೂತನನ್ನು ಅವನು ಕೊಂದುಬಿಟ್ಟನು. ಅವನಿಗೆ ಬುದ್ಧಿಯನ್ನು ಕಲಿಸಲೋಸುಗ ಮಾರನೆಯ ವರುಷ (ಎಂದರೆ, ೬೨೯ನೆಯ ಇಸವಿಯಲ್ಲಿ) ಮಹಮ್ಮದನು ಮೂರು ಸಾವಿರ ಮಂದಿ ಸೈನಿಕರನ್ನು ಕಳುಹಿಸಿ ಅವನೊಡನೆ ಯುದ್ಧವನ್ನು ಹೂಡಿದನು. ಆ ಯುದ್ಧದಲ್ಲಿ ಮಹಮ್ಮದೀಯರಿಗೆ ಜಯವಾಯಿತು.

# ಹನ್ನೊಂದನೆಯ ಅಧ್ಯಾಯ

## ಮಕ್ಕಾ ನಗರದ ಮುತ್ತಿಗೆ

ಮಕ್ಕಾ ಯಾತ್ರೆ

ಹುದೈಬಿಯ್ಯಾವಿನ ಕರಾರಿನ ಮೇರೆಗೆ, ಮೂರನೆಯ ವರುಷದ ವರೆಗೂ ಮಹಮ್ಮದನೂ ಅವನ ಕಡೆಯುವರೂ ಮಕ್ಕಾ ಯಾತ್ರೆಗೆ ಹೋಗುವಂತಿರಲಿಲ್ಲ. ಯಾತ್ರೆ ಹೊರಡುವ ಸಮಯವು ದೊರೆತೀತೇ ಎಂದು ಅವರೆಲ್ಲರೂ ತವಕಪಡುತ್ತಿದ್ದರು. ಖೈಬರ್ ಮುತ್ತಿಗೆಯೇ ಮುಂತಾದ ಕಾರ್ಯಕಲಾಪಗಳು ಮುಗಿದ ಮೇಲೆ, ಕ್ರಿ. ಶ. ೬೨೯ನೆಯ ಮಾರ್ಚಿ ತಿಂಗಳಲ್ಲಿ, ಮಹಮ್ಮದನು ಎರಡು ಸಾವಿರ ಮಂದಿ ಮಹಮ್ಮದೀಯರೊಡನೆ ಮಕ್ಕಾ ನಗರಕ್ಕೆ ಹೋಗಿ ಒಪ್ಪಂದದ ಮೇರೆಗೆ ಮೂರು ದಿನಗಳಲ್ಲಿ ಅಲ್ಲಿಯ ಕೆಲಸಗಳನ್ನು ಸಾಂಗವಾಗಿ ನೆರವೇರಿಸಿಕೊಂಡು ಮದೀನಾ ನಗರಕ್ಕೆ ಹಿಂದಿರುಗಿದನು.

ಒಪ್ಪಂದವನ್ನು ಮೀರಿ ನಡೆದುದಕ್ಕೆ ಶಿಕ್ಷೆ

ಮಹಮ್ಮದನಿಗೆ ಅವನ ಶಿಷ್ಯರು ತೋರಿಸುತ್ತಿದ್ದಷ್ಟು ಪ್ರೀತಿ ಗೌರವಗಳು ಖುಸ್ರು, ಕೈಜರ್ ಮುಂತಾದ ಪ್ರಭುಗಳಿಗೂ ಅವರ ಅಧೀನರಿಂದಲೂ ಪ್ರಜೆಗಳಿಂದಲೂ ದೊರೆಯುತ್ತಿರಲಿಲ್ಲ. ಮಹಮ್ಮದನು ಮಕ್ಕಾ ನಗರಕ್ಕೆ ಹೋಗಿದ್ದಾಗ ಅವನ ಶತ್ರು ವರ್ಗದವರು ಇದನ್ನು ತಮ್ಮ ಕಣ್ಣಾರೆ ನೋಡಿ ಅಸೂಯೆಯಿಂದ ಉರಿದುಬಿದ್ದು, ಒಪ್ಪಂದದ ಷರತ್ತುಗಳನ್ನೂ ಲಕ್ಷಿಸದೆ, ಮಹಮ್ಮದನ ಆಶ್ರಿತ ವರ್ಗಕ್ಕೆ ಸೇರಿದ್ದ ಖುಜಾ ಬುಡಕಟ್ಟಿನ ಕೆಲವರನ್ನು ನಿಷ್ಕಾರಣವಾಗಿ ಕೊಂದರು. ಮಹಮ್ಮದನು ತನ್ನ ಆಶ್ರಿತರ ಪ್ರಾರ್ಥನೆಯಂತೆ, ಹಿಂದಣ ವಾಗ್ದಾನಕ್ಕನುಸಾರವಾಗಿ ಅವರ ಪಕ್ಷವನ್ನವಲಂಬಿಸಿ, ಕೊಲೆಗೀಡಾದವರ ಕಡೆಯವರಿಗೆ ಪರಿಹಾರ ದ್ರವ್ಯವನ್ನು ಕೊಡಬೇಕೆಂದೂ, ಇಲ್ಲದಿದ್ದರೆ ಕೊಲ್ಲಲ್ಪಟ್ಟವರ ಶತ್ರುಗಳ ಪಕ್ಷವನ್ನಾದರೂ ಬಿಟ್ಟುಬಿಡಬೇಕೆಂದೂ, ಈ ಕೊಲೆಗೆಲಸವನ್ನು ಅಕಾರಣವಾಗಿ ನಡೆಯಿಸಿದ್ದ ಕೊರೈಷ್ ಮನೆತನದವರಿಗೆ ತಿಳಿಸಿದನು. ಅವರು ಅದಕ್ಕೆ ಕಿವಿಗೊಡದೆ ಅಲಕ್ಷ್ಯ ಭಾವದಿಂದಿದ್ದು

ಹಿಂದಣ ಒಪ್ಪಂದದ ನಿಯಮಗಳನ್ನೂ ಉಲ್ಲಂಘಿಸಿದರು. ಕೊನೆಗೆ, ಯತ್ನವಿಲ್ಲದೆ ಮುಹಮ್ಮದನು ಯುದ್ಧ ಸನ್ನಾಹ ಮಾಡಿ, ಮಕ್ಕಾ ನಗರವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಯೋಚಿಸಿದನು. ಆದರೆ, ಶತ್ರುಗಳೂ ಯುದ್ಧಕ್ಕೆ ಸಿದ್ಧರಾದರೆ ರಕ್ತಪಾತವು ತಪ್ಪದೆಂಬ ಶಂಕೆಯಿಂದ ಮುಹಮ್ಮದನು ಯುದ್ಧ ಸನ್ನಾಹವನ್ನು ಬಹಳ ರಹಸ್ಯವಾಗಿ ನಡೆಯಿಸಿದನು. ಈ ಮಧ್ಯೇ ಹತೀಬನೆಂಬ ದ್ರೋಹಿಯೊಬ್ಬನು ಈ ಸಂದರ್ಭವನ್ನರಿತು ಮುಹಮ್ಮದನು ಮಕ್ಕಾ ನಗರದ ಮುತ್ತಿಗೆಗೆ ಸಿದ್ಧಮಾಡಿಕೊಳ್ಳುತ್ತಿರುವನೆಂದು ಕಾಗದವನ್ನು ಬರೆದು ಅದನ್ನು ಶತ್ರುಗಳಿಗೆ ಮುಟ್ಟಿಸಲು ಮಕ್ಕಾ ನಗರಕ್ಕೆ ದೂತನನ್ನಟ್ಟಿದನು. ಆದರೆ, ಇಂತಹ ಕೃತ್ಯಗಳಿಗೆ ಅವಕಾಶವಾಗದಂತೆ, ಕಾರ್ಯ ಪಟುವಾದ ಮುಹಮ್ಮದನು ತಕ್ಕ ಏರ್ಪಾಡನ್ನು ಮಾಡಿದ್ದುದರಿಂದ, ಅವನ ಸೈನಿಕರು ಆ ದೂತನನ್ನು ಪತ್ರ ಸಹಿತವಾಗಿ ಹಿಡಿದು ಕಾರಾಗೃಹಕ್ಕೆ ಸೇರಿಸಿದರು. ತಮ್ಮವನೇ ತನಗೆ ಎರಡು ಬಗೆದನೆಂಬ ರೋಷದಿಂದ ಮುಹಮ್ಮದನ ಕಡೆಯವರು ಹತೀಬನ ಮೇಲೆ ಹಲ್ಲು ಕಡಿಯುತ್ತಿರುವಲ್ಲಿ, ಕರುಣಾಳುವಾದ ಮುಹಮ್ಮದನು ಅಪರಾಧಿಯಾದ ಹತೀಬನನ್ನೂ ಅವನ ದೂತನನ್ನೂ ಕ್ಷಮಿಸಿ, ಅವರಿಬ್ಬರೂ ತಮ್ಮ ಅಕಾರ್ಯಕ್ಕಾಗಿ ಪಶ್ಚಾತ್ತಾಪಪಡುವಂತೆ ಮಾಡಿದನು.

**ಮುತ್ತಿಗೆ**

ಯುದ್ಧ ಸನ್ನಾಹವು ಮುಗಿದೊಡನೆಯೇ ಮುಹಮ್ಮದನು ಕ್ರಿ. ಶ. ೬೩೦ನೆಯ ವರ್ಷದಲ್ಲಿ, ಸುಸಜ್ಜಿತವಾದ ದೊಡ್ಡ ಸೈನ್ಯದೊಡನೆ ಮಕ್ಕಾ ನಗರಕ್ಕೆ ಪ್ರಯಾಣ ಮಾಡಿದನು. ಅವನ ಕಾರ್ಯದಲ್ಲಿ ಪ್ರಾಣವನ್ನರ್ಪಿಸಲು ಸಿದ್ಧರಾಗಿ ಹತ್ತು ಸಾವಿರ ಮಂದಿ ಯೋಧರು ಆ ಸೈನ್ಯದಲ್ಲಿದ್ದರು. ಸಾಧ್ಯವಾದರೆ ರಕ್ತಪಾತವಿಲ್ಲದೆಯೇ ಮಕ್ಕಾ ನಗರವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದೂ, ಇಲ್ಲದೆ, ಅವಶ್ಯ ಕಂಡುಬಂದರೆ, ತಾವೆಲ್ಲರೂ ತಮ್ಮ ಉದ್ದೇಶ ಸಾಧನೆಯ ಪ್ರಯತ್ನದಲ್ಲಿ ಸಾಯಲು ಸಿದ್ಧರಾಗಿರಬೇಕೆಂದೂ ಮುಹಮ್ಮದನು ದೃಢ ಸಂಕಲ್ಪ ಮಾಡಿದನು. ಆಕಸ್ಮಿಕವಾಗಿ ಶತ್ರುಗಳು ತಮ್ಮ ನಗರಕ್ಕೆ ಮುತ್ತಿಗೆ ಹಾಕಿದುದನ್ನು ಕಂಡು ಮಕ್ಕಾ ನಿವಾಸಿಗಳು ಆಶ್ಚರ್ಯ

ದಿಂದ ಅಪ್ರತಿಭರಾಗಿ, ಯುದ್ಧಕ್ಕೆ ಸಿದ್ಧರಾಗಿಲ್ಲದುದರಿಂದ, ವ್ಯರ್ಥವಾಗಿ ಹೋರಾಡಿ ಫಲವಿಲ್ಲವೆಂದು ಬಗೆದು ಸುಮ್ಮನಿರಬೇಕಾಯಿತು. ಹೀಗೆ ಶ್ರಮವಿಲ್ಲದೆಯೇ, ಮಕ್ಕಾ ನಗರವು ಮುಹಮ್ಮದೀಯರ ವಶವಾಗಲು, ಮುಹಮ್ಮದನು ಶತ್ರುಗಳ ಮುಖ್ಯಸ್ಥರನ್ನು ಸೆರೆ ಹಿಡಿದು ತರಬೇಕೆಂದು ಅಪ್ಪಣೆ ಮಾಡಿದನು. ಹಾಗೆ ಹಿಡಿದು ತಂದವರಲ್ಲಿ, ಶತ್ರುಗಳ ಅಧಿನಾಯಕನಾಗಿದ್ದ ಅಬೂ ಸುಫ್ಯಾನನೇ ಮೊದಲನೆಯವನು. ಅವನು ಬಹು ಕಾಲದಿಂದಲೂ ಮುಹಮ್ಮದನಲ್ಲಿ ಅಪರಾಧಿಯಾಗಿದ್ದು ಅವನ ಶಿಷ್ಯರು ಕೆಲವರನ್ನು ಕೊಲೆ ಮಾಡಿದ್ದುದರಿಂದ, ತನಗೆ ಮರಣ ದಂಡನೆಯೇ ಗೊತ್ತಾದುದೆಂದು ನಿರ್ಧರಮಾಡಿಕೊಂಡಿದ್ದನು. ಆದರೆ ಮುಹಮ್ಮದನು ಅವನ ಅಪರಾಧಗಳಿಗಾಗಿ ಸ್ವಲ್ಪವೂ ಗದರಿಸದೆ ಮೆಲ್ನುಡಿಗಳಿಂದಲೇ ಅವನನ್ನು ಮಾತನಾಡಿಸಿ, ತಾನಾಗಿಯೇ ಅವನಿಗೆ ಕ್ಷಮಾಪಣೆ ಕೊಟ್ಟು ಅವನ ಆಸುರೀ ಭಾವವನ್ನು ಕ್ಷಣ ಮಾತ್ರದಲ್ಲಿ ನಿರ್ಮೂಲ ಮಾಡಿದನು. ಕೈಜರನ ಬಳಿಯಲ್ಲಿ ಮುಹಮ್ಮದನ ವಿಚಾರವನ್ನು ಬಿನ್ನವಿಸಿದಾಗಲೇ ಮುಹಮ್ಮದನ ಸದ್ಗುಣಗಳು ಅಬೂ ಸುಫ್ಯಾನನ ಹೃದಯವನ್ನು ಸೆರೆಹಿಡಿದಿದ್ದುವು. ಈಗ ಪ್ರತ್ಯಕ್ಷ ನಿದರ್ಶನದಿಂದ ಮುಹಮ್ಮದನ ಮನಸ್ಸು ಎಷ್ಟು ನಿರ್ಮಲವಾದುದೆಂಬುದನ್ನು ಕಂಡು ಇಪ್ಪತ್ತು ವರುಷಗಳಿಂದ ಇಸ್ಲಾಂ ಮತಕ್ಕೆ ವಿರೋಧವಾಗಿದ್ದ ಸುಫ್ಯಾನನ ಕಲ್ಲುಮನಸ್ಸೂ ಕರಗಿ ಹೋಯಿತು. ಅವನು ಇಸ್ಲಾಂ ಮತವನ್ನವಲಂಬಿಸುವುದಾಗಿ ಒಪ್ಪಿಕೊಂಡನು. ಶತ್ರು ಪಕ್ಷದ ಇತರ ಮುಖ್ಯಸ್ಥರೂ ಮುಹಮ್ಮದನಿಂದ ಪ್ರಾಣ ದಾನವನ್ನು ಪಡೆದು, ಅವನನ್ನು ಕೊಂಡಾಡಿ, ಅವನ ಸಾತ್ವಿಕ ವರ್ತನೆಗೆ ಮನ ಸೋತು ಮುಹಮ್ಮದೀಯರಾಗಲು ಒಪ್ಪಿಕೊಂಡರು.

ಮುಹಮ್ಮದನ ಸೈನಿಕರು ಶತ್ರು ಪಕ್ಷದವರನ್ನು ಹಿಡಿದು ಹಿಂಡು ಹಿಂಡಾಗಿ ತಂದು ಅವನ ಮುಂದೆ ನಿಲ್ಲಿಸಿದರು. ಚಿರ ಕಾಲದಿಂದಲೂ ಮುಹಮ್ಮದನಲ್ಲಿ ಅಪರಾಧಿಗಳಾಗಿದ್ದು ದ್ವೇಷ ಬುದ್ಧಿಯಿಂದ ವರ್ತಿಸಿ, ಅವನು ಮಕ್ಕಾ ನಗರದಲ್ಲಿದ್ದಾಗ ಅವನನ್ನೂ ಅವನ ಅನುಯಾಯಿಗಳನ್ನೂ ಚಿತ್ರ ಹಿಂಸೆಗೆ ಗುರಿ ಮಾಡಿ ನಡೆಬಡಿಯುತ್ತಿದ್ದ ಅನೇಕ ಮಂದಿ ಆ

ಸೆರೆಯಿಂದ ಬಿಡುಗಡೆ

ಗುಂಪಿನಲ್ಲಿದ್ದರು. ಮಕ್ಕಾ ನಗರದಲ್ಲಿ ಅವನನ್ನು ಹಿಂಸಿಸಿದುದು ಸಾಲದೆ ಮೆದೀನಾ ನಗರಕ್ಕೆ ಅವನು ಓಡಿಹೋದ ಮೇಲೂ ಅವನಿಗೆ ಹಲವು ಬಾರಿ ತೊಂದರೆಯನ್ನು ಕೊಟ್ಟು ಕಾಡಿದ ಅನೇಕರು ಅವನೆದುರಿಗೆ ಸಾಲಾಗಿ ನಿಂತಿದ್ದರು. ಹಿಂದಣ ಘಟನಾವಳಿಯು ನೆನಪಿಗೆ ಬಂದೊಡನೆಯೇ ದೇಹವು ಕ್ರೋಧ ಕಂಪಿತವಾಗುವಂತಿದ್ದಿತು. ದ್ವೇಷ ಸಾಧನೆಗೆ ಅದೆಂತಹ ಸುಸಮಯ? ಮುಹಮ್ಮದನು ಅವರೆಲ್ಲರನ್ನೂ ಸಾಲುಗಲ್ಲಿಗೆ ಏರಿ ಸಿದ್ದರೂ ಯಾರೂ ಅಡ್ಡಿಪಡಿಸುವಂತಿರಲಿಲ್ಲ. ಒಂದು ವಿಧದಲ್ಲಿ ನೋಡಿದರೆ, ಮುಹಮ್ಮದನ ಉದಾತ್ತತೆಯ ಸತ್ವ ಪರೀಕ್ಷೆಯ ಕಾಲವೇ ಆಗ ಒದಗಿದ್ದಿತೆಂದರೂ ಸಲ್ಲುವುದು. ಮುಹಮ್ಮದನು ಅವರನ್ನು ಕುರಿತು, "ನಾನು ನಿಮ್ಮೊಡನೆ ಯಾವ ರೀತಿಯಲ್ಲಿ ವರ್ತಿಸುವೆನೆಂದು ನೀವು ಭಾವಿಸಿರುವಿರಿ?" ಎಂದು ಕೇಳಲು, ಅವರೆಲ್ಲರೂ ಏಕ ವಾಕ್ಯತೆಯಿಂದ, "ಪ್ರೀತಿಪಾತ್ರನಾದ ಸಹೋದರನು ತನ್ನ ಒಡಹುಟ್ಟಿದವರಲ್ಲಿ ವರ್ತಿಸು ವಂತೆ" ಎಂದು ಉತ್ತರ ಹೇಳಿದರು. ಈ ಮಾತನ್ನು ಕೇಳಿ ಮುಹ ಮ್ಮದನ ಮನಸ್ಸು ಕರಗಿಹೋಗಿ ಅವನ ಕಣ್ಣುಗಳಿಂದ ಘಳ ಘಳನೆ ನೀರು ಸುರಿಯಿತು. ಅವನು ಗದ್ಗದ ಸ್ವರದಿಂದ, "ಆಗಲಿ, ನಿಮ್ಮಲ್ಲಿ ಸಹೋ ದರನಂತೆಯೇ ವರ್ತಿಸುವೆನು" ಎಂದು ಹೇಳಿ ಎಲ್ಲರನ್ನೂ ಸೆರೆಯಿಂದ ಬಿಡುಗಡೆ ಮಾಡಿ, ಅವರಿಗೆ ಸ್ವಾತಂತ್ರ್ಯ ದಾನವನ್ನು ಕೊಟ್ಟು ಶತ್ರು ಗಳಾಗಿದ್ದವರನ್ನೂ ಮಿತ್ರರನ್ನಾಗಿ ಮಾರ್ಪಡಿಸಿದನು.

ಬೋಧನೆ

ಮುಹಮ್ಮದನು ಅವರೆಲ್ಲರನ್ನೂ ಮನ್ನಿಸಿದುದು ಮಾತ್ರವೇ ಅಲ್ಲದೆ, ಅವರ ಕಡೆಯ ಹೆಂಗುಸರನ್ನಾಗಲಿ ಹುಡುಗರನ್ನಾಗಲಿ ತನ್ನವರು ಯಾರೊಬ್ಬರೂ ಬಾಧೆಪಡಿಸಕೂಡದೆಂದು ಕಟ್ಟಾಜ್ಞೆ ಮಾಡಿದ್ದನು. ಮಕ್ಕಾ ನಗರದಲ್ಲಿ ಕ್ವೇಯಿಸ್ ಎಂಬ ಭಾಗದಲ್ಲಿದ್ದವರು ಮಾತ್ರ ಎದುರುಬಿದ್ದು, ಅಸ್ತ್ರ ಚಾಲನವಿಲ್ಲದೆ ಅವರನ್ನು ಕೈವಶ ಮಾಡಿಕೊಳ್ಳುವುದು ಅಸಾಧ್ಯವಾಗಿ, ಖಾಲಿದ್ ಮುಂತಾದ ಕೆಲವು ಮಂದಿ ಶತ್ರುಗಳನ್ನು ಕೊಲ್ಲಲೇ ಬೇಕಾ ಯಿತು. ಇದಕ್ಕೂ ಮುಹಮ್ಮದನು ಆಗ್ರಹಗೊಳ್ಳಲು, ನಿರ್ವಾಹವಿಲ್ಲದೆ ತಾವು ನರ ವಧೆಗೆ ಕೈಹಾಕಬೇಕಾಯಿತೆಂದು ಸೈನಿಕರು ಅವನಿಗೆ ಅರಿಕೆ

ಮಾಡಿದರು. ಮುಹಮ್ಮದನ ಉದಾತ್ತ ಸ್ವಭಾವವನ್ನು ಕಂಡು ಶತ್ರುಗಳೆಲ್ಲರೂ ನಾಚಿಕೊಂಡು ಶರಣಾಗತರಾಗಲು, ಮುಹಮ್ಮದನು ಅವರನ್ನೂ ಮನ್ನಿಸಿ ಪಟ್ಟಣದಲ್ಲಿ ಶಾಂತಿಯನ್ನು ನೆಲೆಗೊಳಿಸಿದ ಬಳಿಕ, ಪುರಜನರೆಲ್ಲರಿಗೂ ಇಸ್ಲಾಂ ಮತ ಧರ್ಮಗಳನ್ನು ಬೋಧಿಸಿದನು; ವಿಗ್ರಹಗಳೇ ದೇವರೆಂಬ ಭಾವನೆಯು ತಪ್ಪೆಂಬುದನ್ನು ಅವರು ಮನಗಾಣುವಂತೆ ಅವರಿಗೆ ತಿಳಿವಳಿಕೆಯನ್ನು ಹೇಳಿ ಕಾಬಾ ದೇವ ಮಂದಿರದಲ್ಲಿದ್ದ ವಿಗ್ರಹಗಳನ್ನೆಲ್ಲ ಒಡೆದು ಹಾಕಿದನು.

ಹಿಂದೆ ಕೊರೈಷ್ ಮನೆತನದವರು ಮುಹಮ್ಮದೀಯರನ್ನು ಮಕ್ಕಾ ನಗರದಿಂದ ಓಡಿಸಿ ಅವರ ಆಸ್ತಿಯನ್ನು ಸ್ವಾಧೀನಪಡಿಸಿಕೊಂಡಿದ್ದರು.

ಕ್ಷಮಾಗುಣದ ಪರಮಾವಧಿ

ಈ ಅಪರಾಧವನ್ನೂ ಮುಹಮ್ಮದನು ಕ್ಷಮಿಸಿ ಅವರ ಸ್ವಾಧೀನದಲ್ಲಿದ್ದ ತಮ್ಮ ಸ್ವತ್ತುಗಳನ್ನೂ ಅವರಿಗೇ ಬಿಟ್ಟುಕೊಡುವಂತೆ, ಸಖ್ಯಕ್ಕೆ ಗುರಿಯಾಗಿದ್ದ ತನ್ನ ಶಿಷ್ಯರಿಗೇ ಬೋಧಿಸಿದನು. ಅಬೂ ಸುಫ್ಯಾನನಂತಹ ದೊಡ್ಡ ದೊಡ್ಡ ಸೇನಾ ನಾಯಕರು ಕೂಡ ತಮ್ಮ ಪ್ರಯತ್ನವು ವಿಫಲವಾಗುವುದೆಂದು ಬಗೆದು ತಟಸ್ಥರಾಗಿದ್ದಾಗ, ಅಬೂ ಜಹಾಲನ ಮಗನಾದ ಇಕ್ರಮನೆಂಬವನು, ಮುಹಮ್ಮದೀಯರು ಪುರ ಪ್ರವೇಶ ಮಾಡುವ ಸಮಯದಲ್ಲಿ ಖಾಲಿದನ ಸೈನಿಕರನ್ನು ಹಿಂಸಿಸಿ, ಕೊನೆಗೆ ತಲೆ ತಪ್ಪಿಸಿಕೊಂಡು ಓಡಿಹೋಗಿದ್ದನು. ಅವನ ಪರವಾಗಿ ಅವನ ಹೆಂಡಿತಿಯು ಮುಹಮ್ಮದನ ಬಳಿಗೆ ಬಂದು ತನ್ನ ಪತಿಯನ್ನು ಕ್ಷಮಿಸುವಂತೆ ಬೇಡಿಕೊಳ್ಳಲು, ಮುಹಮ್ಮದನು ಇಕ್ರಮನ ಅಪರಾಧವನ್ನು ಕ್ಷಮಿಸಿರುವೆನೆಂದು ಆಕೆಗೆ ತಿಳಿಸಿದನು. ಊಹುದ್ ಕದನದಲ್ಲಿ ಮುಹಮ್ಮದನ ಚಿಕ್ಕಪ್ಪನಾದ ಹಂಜನನ್ನು ಕೊಂದಿದ್ದ ವಾಹ್ಷಿಯೆಂಬವನೂ, ರೋಷ ಪಾರವಶ್ಯದಿಂದ ಮೃತನ ಪಿತ್ತಕೋಶವನ್ನು ಹಲ್ಲಿನಿಂದ ಕಡಿದು ಹಾಕಿದ್ದ ಅವನ ಪತ್ನಿಯೂ ಶರಣಾಗತರಾಗಿ ಕ್ಷಮೆಯನ್ನು ಪಡೆದರು. ಮುಹಮ್ಮದನ ಮಗಳು ಹಿಂದೆ ಮಕ್ಕಾ ನಗರದಿಂದ ಮೆದೀನಾ ನಗರಕ್ಕೆ ಪ್ರಯಾಣ ಮಾಡುವಾಗ್ಗೆ ಹಬ್ಬಾರ್ ಎಂಬ ಘಾತುಕನೊಬ್ಬನು ಆಕೆಯನ್ನು ಕಲ್ಲುಗಳಿಂದ ಹೊಡೆದು ಗಾಸಿಪಡಿಸಿದ್ದ ಕಾರಣದಿಂದ ಆಕೆಯು

ಮರಣ ಹೊಂದಿದಳು. ಗರ್ಭಿಣಿಯಾಗಿದ್ದ ಆಕೆಯ ಮರಣಕ್ಕೆ ಆ ಪಾಪಿಯೇ ಕಾರಣವೆಂದು ತಿಳಿದಿದ್ದರೂ, ಅಂಥವನು ಕ್ಷಮೆಯನ್ನು ಬೇಡಿದಾಗ, ಮಹಮ್ಮದನು ಆ ಅಧಮನನ್ನೂ ಕ್ಷಮಿಸಿ, ಎಲ್ಲರನ್ನೂ ಆಶ್ಚರ್ಯಮಗ್ನರನ್ನಾಗಿ ಮಾಡಿದನು.

ಪರಿಣಾಮ ಫಲ

ಅಪರಾಧಿಗಳಿಗೆಲ್ಲ ಹೀಗೆ ಕ್ಷಮೆಯನ್ನು ತೋರಿಸಿದುದರಿಂದ ಜನರೆಲ್ಲರಿಗೂ ಮಹಮ್ಮದನಲ್ಲಿ ಪ್ರೀತಿ ಗೌರವಗಳು ಹೆಚ್ಚಿದುವು. ಮಕ್ಕಾ ನಗರದವರಿಗೆ ಆತನಲ್ಲಿದ್ದ ದ್ವೇಷ ಬುದ್ಧಿಯು ಎಲ್ಲಿಯೋ ಮಾಯವಾಗಿ ಹೋಗಿ, ಜನರು ತಾವಾಗಿಯೇ ತಂಡೋಪತಂಡವಾಗಿ ಬಂದು ಇಸ್ಲಾಂ ಮತವನ್ನವಲಂಬಿಸಿದರು. ಈ ಮತಕ್ಕೆ ಸೇರಲೊಲ್ಲದವರೂ ಅನೇಕ ಮಂದಿಯಿದ್ದರೂ, ತನ್ನ ಮತಕ್ಕೆ ಸೇರಲಿಲ್ಲವೆಂಬ ಕಾರಣದ ಮೇಲೆಯೇ ಮಹಮ್ಮದನು ಅವರಲ್ಲಿ ಯಾರೊಬ್ಬರಿಗೂ ನಿರ್ದಯನಾಗಿರಲಿಲ್ಲ. ಅಂತು, ಮಕ್ಕಾ ನಗರ ನಿವಾಸಿಗಳಲ್ಲಿ ಬಹು ಮಂದಿ ಇಸ್ಲಾಂ ಮತವನ್ನವಲಂಬಿಸಿದರು ; ಉಳಿದವರೂ ಕೂಡ ಮಹಮ್ಮದನ ಸದ್ಗುಣಗಳನ್ನು ಶ್ಲಾಘಿಸುತ್ತ ಅವನಲ್ಲಿ ಸ್ನೇಹ ಭಾವದಿಂದಲೇ ವರ್ತಿಸುತ್ತಿದ್ದರು. ಅವರು ಬರಿಯ ವೇಷವನ್ನು ಕಟ್ಟಿರಲಿಲ್ಲವೆಂಬುದಕ್ಕೆ ಹುನೇನ್ ಕದನದಲ್ಲಿ ಅವರು ಮಹಮ್ಮದನ ಸೈನ್ಯದಲ್ಲಿ ಸೇರಿ ಪರಾಕ್ರಮದಿಂದ ಯುದ್ಧ ಮಾಡಿದುದೇ ಸಾಕ್ಷಿ.

ಹುನೇನ್ ಕದನ

ಮಹಮ್ಮದನು ಮದೀನಾ ನಗರವನ್ನು ಬಿಟ್ಟು ಒಂದು ತಿಂಗಳೊಳಗಾಗಿಯೇ ಹುನೇನ್ ಕದನವು ಕೈಗಟ್ಟಿತು. ಹವಾಜಿನ್ ಬುಡಕಟ್ಟಿನವರು ಮಹಮ್ಮದನ ಮೇಲೆ ಯುದ್ಧ ಮಾಡಲು ಸೈನ್ಯವನ್ನು ಜೊತೆಗೂಳಿಸಿ ತಾಕೀಫ್ ಮುಂತಾದ ಇತರ ಕೆಲವು ಗುಂಪುಗಳವರನ್ನೂ ತಮ್ಮ ಜೊತೆಗೆ ಸೇರಿಸಿಕೊಂಡು ಯುದ್ಧಸನ್ನಾಹ ಮಾಡತೊಡಗಿದರು. ಮಕ್ಕಾ ನಗರವು ಮಹಮ್ಮದನ ಸ್ವಾಧೀನವಾಗಿ ಅನೇಕರು ಇಸ್ಲಾಂ ಮತಕ್ಕೆ ಸೇರಿದುದೇ ಅವರ ಹೊಟ್ಟೆಯ ಕಿಚ್ಚಿಗೆ ಕಾರಣವಾಗಿ, ಸರ್ವ ಸಾಹಸದಿಂದಲೂ

ಮುಹಮ್ಮದನನ್ನು ಸೋಲಿಸಬೇಕೆಂದು ಅವರು ಸಂಕಲ್ಪಿಸಿದರು. ಆಗ್ಗೆ ಅತ್ಯಂತ ಪ್ರಸಿದ್ಧವಾಗಿದ್ದ ತಾಯೆಫ್ ನಗರದ ಭದ್ರವಾದ ಕೋಟೆಯೂ ಅವರ ವಶದಲ್ಲಿದ್ದುದರಿಂದ ಮುಹಮ್ಮದನನ್ನು ತಾವು ನೆಗ್ಗಬಹುದೆಂದು ಅವರೆಲ್ಲರಿಗೂ ಭರವಸೆಯಿದ್ದಿತು. ಆದರೆ ಮುಹಮ್ಮದನೂ ಕೇವಲ ಜಾಗರೂಕನಾಗಿದ್ದುದರಿಂದ, ಶತ್ರುಗಳು ಗರಿಗಟ್ಟಿಕೊಳ್ಳುವ ಮೊದಲೇ ಅವನು ಸೈನ್ಯದೊಡನೆ ಹುನೇನ್ ಎಂಬ ಪ್ರದೇಶದಲ್ಲಿ ಬಂದಿಳಿದನು. ಮೆದೀನಾ ನಗರದಿಂದ ಬಂದಿದ್ದ ಹತ್ತು ಸಾವಿರ ಮಂದಿ ಸೈನಿಕರ ಜೊತೆಗೆ ಮಕ್ಕಾ ನಗರದಿಂದ ಎರಡು ಸಾವಿರ ಮಂದಿ ಸೈನಿಕರು ಬಂದು ಸೇರಿದರು. ಈ ಸೈನ್ಯದಲ್ಲಿ, ಇಸ್ಲಾಂ ಮತಕ್ಕೆ ಸೇರದೆ ಇದ್ದ ಮಕ್ಕಾ ನಗರ ನಿವಾಸಿಗಳೂ ಅನೇಕರಿದ್ದರು. ಅವರೆಲ್ಲರೂ ಮುಹಮ್ಮದನ ಮೇಲಣ ಪ್ರೀತಿಯಿಂದ, ಮುಹಮ್ಮದೀಯರಂತೆಯೇ ತಾವೂ ಪ್ರಾಣದ ಮೇಲಣ ಆಸೆಯನ್ನು ತೊರೆದು, ಅವನಿಗಾಗಿ ಯುದ್ಧ ಮಾಡಿದರು. ಹುನೇನ್ ಪ್ರಾಂತವು ಬೆಟ್ಟಗುಡ್ಡಗಳ ಸೀಮೆಯಾದುದರಿಂದಲೂ, ಶತ್ರುಗಳಿಗೆ ಪ್ರಬಲವಾದ ಗಿರಿದುರ್ಗಗಳಿದ್ದುದರಿಂದಲೂ ಈ ಕದನದಲ್ಲಿ ಮುಹಮ್ಮದೀಯರಿಗೆ ಬಹಳ ಕಷ್ಟವಾಯಿತು. ಆದರೂ ಭಗವಂತನ ದಯೆಯಿಂದ ಮುಹಮ್ಮದನ ಪಕ್ಷದವರಿಗೇ ಜಯವಾಯಿತು ; ಇಪ್ಪತ್ತನಾಲ್ಕು ಸಾವಿರ ಕುರಿಗಳೂ, ಹದಿನೈದು ಸಾವಿರ ತೊಲಾ ತೂಕದ ಬೆಳ್ಳಿಯೂ, ಇತರ ಸಾಮಾನುಗಳೂ ಕೊಳ್ಳೆಯಾಗಿ ಸಿಕ್ಕಿದುದಲ್ಲದೆ, ಆರು ಸಾವಿರ ಮಂದಿ ಸೈನಿಕರೂ ಸೆರೆಸಿಕ್ಕಿದರು. ಶತ್ರುಗಳ ಸೈನ್ಯವನ್ನು ಚದರಿಸಿದೊಡನೆಯೇ ಮುಹಮ್ಮದನು ತಾಯೆಫ್ ನಗರದ ಮುತ್ತಿಗೆಯನ್ನೆತ್ತಿ ಹಿಂದಿರುಗಿದುದನ್ನು ನೋಡಿದರೆ, ಇಸ್ಲಾಂ ಮತಸ್ಥರಿಗೊದಗಿದ್ದ ಕೋಟಲೆಯನ್ನು ಪರಿಹಾರ ಮಾಡಿಕೊಳ್ಳುವುದು ಮಾತ್ರವೇ ಅವನ ಉದ್ದೇಶವಾಗಿದ್ದಿತೇ ಹೊರತು ಬಲಾತ್ಕಾರವಾಗಿ ತನ್ನ ಮತವನ್ನು ಹರಡುವುದಾಗಲಿ, ಅಥವಾ ದೇಶ ಕೋಶಗಳ ಸಂಪಾದನೆಯಾಗಲಿ ಅವನ ಉದ್ದೇಶವಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಕೊಳ್ಳೆ ಹೊಡೆದ ವಸ್ತುಗಳ ಹಂಚಿಕೆಯಲ್ಲಿ ಮಕ್ಕಾ ನಗರದ ಸೈನಿಕರಿಗೂ ಮೆದೀನಾ ನಗರದ ಸೈನಿಕರಿಗೂ ಅವರವರ ಭಾಗಗಳು ಸಂದ

ಅಸಮಾಧಾನ ನಿವಾರಣೆ

ಬಳಿಕ, ರಾಜ್ಯದ ಖಜಾನೆಗೆಂದು ತೆಗೆದಿಟ್ಟಿದ್ದ ಐದ ನೆಯ ಒಂದು ಪಾಲಿನ ಭಾಗದಿಂದ ಮಕ್ಕಾ ನಗರ ದವರಿಗೆ ಮಹಮ್ಮದನು ಕೆಲವು ಪಾರಿತೋಷಿಕ ಗಳನ್ನು ಕೊಟ್ಟನು. ಮದೀನಾ ನಗರದಿಂದ ಬಂದಿ ದ್ದವರು ಕೆಲವರಿಗೆ ಇದರಿಂದ ಅಸಮಾಧಾನವುಂಟಾಯಿತು. ತನ್ನ ಸ್ವಜನರೆಂಬ ಅಭಿಮಾನದಿಂದ ಮಹಮ್ಮದನು ಅವರಿಗೆ ಹೆಚ್ಚು ಪಾರಿ ತೋಷಿಕಗಳನ್ನು ಕೊಟ್ಟನೆಂದು ಅವರೆಲ್ಲರೂ ಮಾತನಾಡಿಕೊಳ್ಳು ತ್ತಿದ್ದುದು ಹೇಗೋ ಮಹಮ್ಮದನ ಕಿವಿಗೆ ಬಿದ್ದಿತು. ರಾಷ್ಟ್ರದ ಮೇಲೆ ರಾಷ್ಟ್ರವನ್ನು ಗೆದ್ದು ಪ್ರಭುವಾಗಿದ್ದ ಮಹಮ್ಮದನು ನಿರಂಕುಶ ಪ್ರವೃತ್ತಿಯುಳ್ಳವನಾಗಿದ್ದಲ್ಲಿ ಅವರನ್ನು ಕ್ರೂರ ದಂಡನೆಗೆ ಗುರಿ ಮಾಡ ಬಹುದಾಗಿದ್ದಿತು ; ಆದರೆ ಸಾತ್ವಿಕ ಪ್ರಕೃತಿಯುಳ್ಳವನಾಗಿದ್ದುದ ರಿಂದ ಹಾಗೆ ಮಾಡದೆ ಅವರನ್ನು ತನ್ನ ಬಳಿಗೆ ಕರೆಯಿಸಿ, "ನಾನು ಸಾಮಾನುಗಳ ಹಂಚಿಕೆಯಲ್ಲಿ ಪಕ್ಷಪಾತ ಬುದ್ಧಿಯಿಂದ ವರ್ತಿಸಿದೆ ನೆಂದು ನಿಮ್ಮಲ್ಲಿ ಕೆಲವರಿಗೆ ಅಸಮಾಧಾನವಾಗಿರುವುದಂತೆ; ಇದು ನಿಜವೆ ?" ಎಂದು ಕೇಳಿದನು. ಅವರು ಅಹುದೆಂದು ಹೇಳಲು ಮಹಮ್ಮದನು, "ನೀವೆಲ್ಲರೂ ಅಧರ್ಮದ ದಾರಿಯನ್ನು ಹಿಡಿ ದಿದ್ದಾಗ ನಾನು ಬಂದು ನಿಮ್ಮನ್ನು ಸನ್ಮಾರ್ಗಕ್ಕೆ ತಂದು ಬಿಡಲಿಲ್ಲವೆ ? ಭಗವಂತನ ದಯೆಯಿಂದ ನಾನು ಈ ಕೆಲಸವನ್ನು ನೆರವೇರಿಸಿದೆನು. ನೀವೆಲ್ಲರೂ ಬಡವರಾಗಿದ್ದಿರಿ; ಒಬ್ಬರ ಕೊರಲನ್ನು ಕೊಯ್ಯಲು ಮತ್ತೊಬ್ಬರು ಕತ್ತಿಯನ್ನು ಹಿರಿದು ನಿಂತಿದ್ದಿರಿ. ಭಗವಂತನ ದಯೆಯಿಂದ ನೀವೆಲ್ಲರೂ ಈಚೆಗೆ ಧನಿಕರಾದಿರಿ ; ನಿಮ್ಮಲ್ಲಿ ಸೋದರ ಭಾವವು ಹುಟ್ಟಿ ಪ್ರೇಮವು ನೆಲೆಗೊಂಡಿತು ; ಇದೆಲ್ಲ ನಿಮಗುಂಟಾದ ಪ್ರಯೋಜನದ ಮಾತು. ಇನ್ನು, ನನಗಾದ ಪ್ರಯೋಜನವನ್ನು ಹೇಳಬೇಕಾದರೆ, ನನ್ನ ಸ್ವಕೀಯರೇ ನನ್ನ ಮಾತನ್ನು ನಂಬದೆ ನನ್ನಲ್ಲಿ ಅನಾದರವನ್ನು ತೋರಿಸಿ ಅಟ್ಟಿದಾಗ ಪರಕೀಯರಾದ ನೀವು ನನ್ನನ್ನು ನಂಬಿ ಆದರ ದಿಂದ ಕರೆದುಕೊಂಡಿರಿ. ನನಗೆ ಸಹಾಯಕರು ಯಾರೂ ಇಲ್ಲದಿದ್ದಾಗ ನೀವೆಲ್ಲರೂ ನನಗೆ ಸಹಾಯ ಮಾಡಿದಿರಿ. ಪ್ರಿಯ ಶಿಷ್ಯರಿರಾ ! ನಿಮ್ಮಿಂದ

ಇಷ್ಟು ಉಪಕಾರವನ್ನು ಹೊಂದಿಯೂ ನಾನು ನಿಮ್ಮಲ್ಲಿ ಪ್ರೀತಿಯನ್ನು ತೊರೆದು ಪಕ್ಷಪಾತ ಮಾಡುವೆನೆ? ಮಕ್ಕಾ ನಿವಾಸಿಗಳು ಇದುವರೆಗೂ ನನಗೆ ಶತ್ರುಗಳಾಗಿದ್ದ ಕಾರಣ, ಅವರ ಮನಸ್ಸಿಗೆ ಸಂತೋಷವಾಗಲೆಂಬ ಇಚ್ಛೆಯಿಂದ ಅವರಿಗೆ ಸ್ವಲ್ಪ ಹೆಚ್ಚಾಗಿ ಪಾರಿತೋಷಿಕವನ್ನು ಕೊಟ್ಟ ಮಾತ್ರಕ್ಕೇ ನೀವು ನನ್ನಲ್ಲಿ ಪಕ್ಷಪಾತ ಬುದ್ಧಿಯನ್ನು ಆರೋಪಿಸಬಹುದೆ? ಇಷ್ಟಕ್ಕೂ, ಇಸ್ಲಾಂ ಮತಕ್ಕಿಂತ ಮತ್ತೆ ಯಾವ ಹೆಚ್ಚಿನ ಭಾಗ್ಯವು ನಮಗೆ ಬೇಕು? ಅದರ ಮುಂದೆ ತುಚ್ಛವಾದ ಐಹಿಕ ವಸ್ತುಗಳು ಹೆಚ್ಚು ಬೆಲೆಯುಳ್ಳವುಗಳೇ! ಅವರು ಮೇಕೆಗಳನ್ನೂ ಒಂಟೆಗಳನ್ನೂ ಸಾಗಿಸಿಕೊಂಡು ಹೋಗುವುದಾದರೆ, ನನ್ನನ್ನೇ ನೀವು ಸಂಗಡ ಕರೆದುಕೊಂಡು ಹೋಗುವಿರಲ್ಲಾ! ನೀವೆಲ್ಲರೂ ಸೇರಿ ಯಾವ ದಾರಿಯನ್ನು ತೋರಿಸಿದರೆ ಅದನ್ನು ನಾನು ಅವಲಂಬಿಸತಕ್ಕವನೇ ಹೊರತು, ಎಂದಿಗೂ ನಿಮ್ಮನ್ನು ಬಿಟ್ಟು ಕದಲಲೊಲ್ಲೆನು. ಹೀಗಿದ್ದೂ, ನಾನು ಪಕ್ಷಪಾತ ಮಾಡುವೆನೆ?'' ಎಂದು ಅವರಿಗೆ ಸಮಾಧಾನ ಹೇಳಿದನು. ಈ ಮಾತುಗಳನ್ನು ಕೇಳಿ ಅವರಲ್ಲನೇಕರು ಆನಂದ ಬಾಷ್ಪಗಳನ್ನು ಸುರಿಸಿದರು. ಮುಹಮ್ಮದನು ಇನ್ನುಮುಂದೆ ಮಕ್ಕಾ ನಗರದಲ್ಲಿಯೇ ನಿಂತುಬಿಡುವನೆಂದು ಸಂಶಯಪಟ್ಟಿದ್ದ ಆ ಜನರು ಅವನು ತಮ್ಮೊಡನೆ ಬರುವನೆಂದು ತಿಳಿದು ಅತ್ಯಾನಂದ ಹೊಂದಿದರು.

ಮುಹಮ್ಮದನ ಕರುಣೆ

ಶತ್ರುಪಕ್ಷದವರು ತಮ್ಮ ಕಡೆಯ ಸೆರೆಯಾಳುಗಳಾದ ಆರು ಸಾವಿರ ಮಂದಿಯನ್ನೂ ಬಿಟ್ಟುಕೊಟ್ಟು ಉಪಕಾರ ಮಾಡಬೇಕೆಂದು ಮುಹಮ್ಮದನನ್ನು ಬೇಡಿಕೊಳ್ಳಲು ಅಲ್ಲಿಗೆ ಬಂದರು. ಅವರೆಲ್ಲರೂ ವಿಗ್ರಹಾರಾಧಕರು. ಆದುದರಿಂದ, ಸೆರೆ ಸಿಕ್ಕಿದ್ದವರೆಲ್ಲರೂ ಇಸ್ಲಾಂ ಮತವನ್ನವಲಂಬಿಸದೆ ಹೋದರೆ ಅವರನ್ನು ಬಿಡುಗಡೆ ಮಾಡುವುದಿಲ್ಲವೆಂದು ಮುಹಮ್ಮದನು ಹೇಳಬಹುದಾಗಿದ್ದಿತು; ಅದಕ್ಕೆ ಅವರು ಒಪ್ಪದೆ ಹೋಗಿದ್ದರೆ ಎಲ್ಲರನ್ನೂ ಕೊಲ್ಲಿಸುವ ಪ್ರಯತ್ನವನ್ನಾದರೂ ಅವನು ಮಾಡಬಹುದಾಗಿದ್ದಿತು. ಆದರೆ, ಕರುಣಾಳುವಾದ ಮುಹಮ್ಮದನು ಪರ ಮತ ಸಹಿಷ್ಣುವಾಗಿಯೂ ಇದ್ದ ಕಾರಣ, ಇಸ್ಲಾಂ ಮತಕ್ಕೆ ಸೇರಬೇಕೆಂದು ಅವನು ಯಾರೊಬ್ಬ

ರನ್ನೂ ನಿರ್ಬಂಧಪಡಿಸದೆ ಆರು ಸಾವಿರ ಮಂದಿ ಸೆರೆಯಾಳುಗಳನ್ನೂ ಬಿಡುಗಡೆ ಮಾಡಿದನು. ಆ ಬಳಿಕ ಸ್ವಲ್ಪ ಕಾಲದಲ್ಲಿಯೇ ಮಹಮ್ಮದನು ಮೆದೀನಾ ನಗರಕ್ಕೆ ಹೊರಟುಹೋದನು.

# ಹನ್ನೆರಡನೆಯ ಅಧ್ಯಾಯ

## ಅಭ್ಯುದಯ ದಶೆ

ಮಹಮ್ಮದನು ಮೊಟ್ಟಮೊದಲು ಮಕ್ಕಾ ನಗರದಿಂದ ಮದೀನಾ ನಗರಕ್ಕೆ ಹೋಗಿ ನೆಲಸಿದಾಗ, ಅಬ್ದುಲ್ಲಾ ಎಂಬಾತನು ಅಲ್ಲಿಗೆ ರಾಜನಾಗಬೇಕೆಂದು ಹವಣಿಸುತ್ತಿದ್ದನು. ಸಮಯ ಸನ್ನಿವೇಶಗಳೂ ಅವನಿಗೆ ಅನುಕೂಲವಾಗಿದ್ದುವು. ಆದರೆ, ಮಹಮ್ಮದನು ಅಲ್ಲಿಗೆ ಹೋದುದರಿಂದ ಅವನನ್ನು ಕೇಳುವವರೇ ಇಲ್ಲದಂತಾಯಿತು. ರಾಜತ್ವವು ದೂರವಾದ ದುಃಖದಿಂದ ಅವನ ಮತ್ತು ಅವನ ಆಪ್ತವರ್ಗದವರ ಅಂತಃಕರಣವು ಕುಂದಿಹೋಯಿತು. ಅಬ್ದುಲ್ಲಾನು ತನ್ನ ಕಾರ್ಯ ಸಾಧನೆಯ ಉದ್ದೇಶದಿಂದ ತಾನೂ ತನ್ನ ಕಡೆಯವರೂ ಇಸ್ಲಾಂ ಮತವನ್ನವಲಂಬಿಸುವ ನಟನೆ ಮಾಡುತ್ತ ಬಯಲು ಬಿನ್ನಾಣವನ್ನು ಹೂಡಿದರು. ಅಂತರಂಗದಲ್ಲಿ ಅವರೆಲ್ಲರೂ ಮಹಮ್ಮದನ ಶತ್ರುಗಳ ಸನ್ಮಿತ್ರರಾಗಿದ್ದು, ಹೊರಗೆ ಮಾತ್ರ ಅವನಿಗೆ ಕೇವಲ ಆಪ್ತರಂತೆ ನಟಿಸುತ್ತ ಅನೇಕ ವೇಳೆ ಮಹಮ್ಮದನ ರಹಸ್ಯ ವಿಚಾರಗಳನ್ನು ಗೋಪ್ಯವಾಗಿ ಶತ್ರುಗಳ ಕಿವಿಗೆ ಮುಟ್ಟಿಸುತ್ತಿದ್ದರು; ಯುದ್ಧವು ಒದಗಿದರಂತು, ಒಂದಲ್ಲದಿದ್ದರೆ ಮತ್ತೊಂದು ನೆಪವನ್ನು ಹೇಳಿ ರಣಭೂಮಿಗೆ ಹೋಗದೆ ತಪ್ಪಿಸಿಕೊಳ್ಳುತ್ತಿದ್ದರು. ಮಹಮ್ಮದನ ಆಪ್ತರಲ್ಲಿ ಐಕಮತ್ಯವನ್ನು ತಪ್ಪಿಸುವುದಕ್ಕಾಗಿ ಅವರು ಪ್ರಯತ್ನಿಸದ ದಿನವೇ ಇರುತ್ತಿರಲಿಲ್ಲ; ಅವನ ಕಾರ್ಯಗಳು ಕೈಗೂಡದಂತೆ ಬಗೆಬಗೆಯ ವಿಘ್ನಗಳನ್ನು ತಂದೊಡ್ಡುತ್ತಿದ್ದರು. ಆದರೇನು? ಮಹಮ್ಮದನು ಮೈಯೆಲ್ಲ ಕಣ್ಣುಳ್ಳವನಾಗಿ ಅತ್ಯಂತ ಜಾಗರೂಕನಾಗಿದ್ದುದರಿಂದ ಅವರ ಪ್ರಯತ್ನಗಳು ಫಲಿಸದೆ ಹೋದುವು. ಕಾಲ ಕ್ರಮದಲ್ಲಿ ಅವರ ಒಳಸಂಚು ಹೊರಬಿದ್ದು ಅವರ ನಾಯಕನಾದ ಅಬ್ದುಲ್ಲಾ ಎಂಬಾತನನ್ನು ಮರಣ ದಂಡನೆಗೆ ಗುರಿಮಾಡಬೇಕೆಂದು ಮಹಮ್ಮದನನ್ನು ಅವನ ಕಡೆಯವರೆಲ್ಲರೂ ಬೇಡಿದರು. ಮಹಮ್ಮದನು ಅವರ ಸಲಹೆಗೆ ಕಿವಿಗೊಡದೆ ಅವನನ್ನು ಕ್ಷಮಿಸಿದರೂ, ಆ ಪಾಪಿಯು ಅಲ್ಲಿಗೂ ತನ್ನ ವಿಷ

ವಿಘ್ನ ಪರಿಸಮಾಪ್ತಿ

ವನ್ನು ಬಿಡದೆ, ತನ್ನವರ ಸಹಾಯದಿಂದ ಮಹಮ್ಮದನಿಗೆ ಹಜ್ಜೆ ಹಜ್ಜೆಗೂ ಎಡರು ತೊಡರುಗಳನ್ನು ಕಲ್ಪಿಸಿ ಕಾಡುತ್ತ ಬಂದನು. ಕೊನೆಗೆ ಅವನಿಗೆ ಅವಸಾನ ಕಾಲವು ಬಂದೊದಗಿತು. ಸಾಯುವಾಗಲೂ, ಅವನು ಇಸ್ಲಾಂ ಮತಸ್ಥನೆಂಬ ವೇಷವನ್ನು ಧರಿಸಿದ್ದರೂ, ವಾಸ್ತವಿಕವಾಗಿ ಮಹಮ್ಮದನ ಶತ್ರುವಾಗಿಯೇ ಮರಣಹೊಂದಿದನು. ಆದರೆ ಅವನ ಮಗನ ಸ್ವಭಾವವು ಹಾಗಿರದೆ ಅವನು ತ್ರಿಕರಣ ಶುದ್ಧನಾದ ಮಹಮ್ಮದೀಯನಾಗಿದ್ದನು. ಅವನು ತಂದೆಯ ಮರಣದಿಂದ ದುಃಖಿತನಾಗಿ ಮಹಮ್ಮದನ ಬಳಿಗೆ ಬಂದು, ಶವಕ್ಕೆ ಹೊದಿಸಲು ತನ್ನ ಮೇಲುಹೊದಿಕೆಯನ್ನು ಕೊಟ್ಟು ಮೃತನ ದೇಹವನ್ನು ಪವಿತ್ರಗೊಳಿಸಬೇಕೆಂದೂ, ಮಹಮ್ಮದನೇ ಬಂದು ನಿಂತು ಉತ್ತರ ಕ್ರಿಯೆಗಳನ್ನು ನಡೆಯಿಸಬೇಕೆಂದೂ ಬೇಡಿಕೊಂಡನು. ಇವು ತನ್ನ ಮಿತ್ರ ವರ್ಗದವರಿಗೆ ಮಾತ್ರವೇ ಮಹಮ್ಮದನು ಕರುಣಿಸುತ್ತಿದ್ದ ಅನುಗ್ರಹ ವಿಶೇಷಗಳಾಗಿದ್ದುದರಿಂದ, ಅಂಥವುಗಳನ್ನು ಶತ್ರುವಾದವನಿಗೆ ಎಂದಿಗೂ ಅನುಗ್ರಹಿಸದಂತೆ ಮಾಡಲು ಮಹಮ್ಮದನ ಕಡೆಯವರು ಪ್ರಯತ್ನಿಸಿದರು. ಆದರೂ ಮಹಮ್ಮದನು ಕ್ಷಮೆಯನ್ನು ತೋರಿಸಿ, ಶತ್ರುವಿನ ಮಗನ ಕೋರಿಕೆಯನ್ನು ಸಲ್ಲಿಸಿಯೇಬಿಟ್ಟನು. ಇದರಿಂದ, ಮೃತನ ಅನುಯಾಯಿಗಳೆಲ್ಲರ ಮನಸ್ಸಿನ ಮೇಲೂ ಅನಿರ್ವಚನೀಯವಾದೊಂದು ಪರಿಣಾಮವುಂಟಾಗಿ, ಮಹಮ್ಮದನ ಸೌಜನ್ಯವನ್ನು ನೋಡಿ ಅವರೆಲ್ಲರೂ ವಿಸ್ಮಯಹೊಂದಿದರು. ಅಷ್ಟೇ ಅಲ್ಲ; ತಾವು ನಡೆಯಿಸುತ್ತಿದ್ದ ಅಕಾರ್ಯಗಳಿಗಾಗಿ ಅವರೆಲ್ಲರೂ ಪಶ್ಚಾತ್ತಾಪಪಟ್ಟು, ನಿಶ್ಚಲ ಮನಸ್ಸಿನಿಂದ ನಿಜವಾದ ಮಹಮ್ಮದೀಯರಾದರು. ಮಹಮ್ಮದನ ಕಾರ್ಯಸಾಧನೆಗೆ ಅಡ್ಡಿಯಾಗಿ ಬರುತ್ತಿದ್ದ ವಿಘ್ನ ಪರಂಪರೆಯು ಅಂದಿಗೆ ಪರಿಸಮಾಪ್ತಿ ಹೊಂದಿ ಮುಂದೆ ಅವನ ಕಾರ್ಯಗಳು ನಿರ್ವಿಘ್ನವಾಗಿಯೂ ನಿರಾತಂಕವಾಗಿಯೂ ನೆರವೇರಲು ಅನುಕೂಲವಾಯಿತು.

ಮಕ್ಕಾ ನಗರವೂ ಇತರ ಪ್ರಾಂತಗಳೂ ಮಹಮ್ಮದನ ಅಧೀನಕ್ಕೆ ಬಂದುದರಿಂದ ಅವನ ಪ್ರಾಬಲ್ಯವು ಹೆಚ್ಚಿತು. ಮಕ್ಕಾ ನಗರವು ಅರಬ್ಬೀ ದೇಶದ ಪ್ರಧಾನ ಪಟ್ಟಣದಂತಿದ್ದಿತು. ಕಾಲ ಕ್ರಮದಲ್ಲಿ, ಮಹಮ್ಮದನು ಕಳುಹಿಸಿದ ಬೋಧಕರ ಉಪ

**ಮತ ಪ್ರಚಾರ**

ದೇಶವನ್ನು ಕೇಳಿ, ಇಸ್ಲಾಂ ಮತದ ಶ್ರೇಷ್ಠತೆಯನ್ನು ಗ್ರಹಿಸಿ, ಅನೇಕರು ಅವನ ಶಿಷ್ಯರಾಗುತ್ತ ಬಂದರು. ಕೆಲವು ವರುಷಗಳಲ್ಲಿಯೇ ಸ್ವಲ್ಪ ಹೆಚ್ಚು ಕಡಿಮೆಯಾಗಿ ಒಟ್ಟು ಅರಬ್ಬೀ ದೇಶದವರೆಲ್ಲರೂ ಇಸ್ಲಾಂ ಮತವನ್ನವಲಂಬಿಸಿ ಮುಹಮ್ಮದನಿಗೆ ಮುಖ್ಯ ಶಿಷ್ಯರಾದರು. ಮುಹಮ್ಮದನು ದೊರೆಯೆಂಬ ಹೆಸರನ್ನು ಸ್ವೀಕರಿಸದಿದ್ದರೂ, ಒಟ್ಟು ಅರಬ್ಬೀ ದೇಶಕ್ಕೇ ಪ್ರಭುವಾಗಿ ಪರಿಣಮಿಸಿದನು. ಲೌಕಿಕ ದೃಷ್ಟಿಯಿಂದ ರಾಜ್ಯಭಾರದ ವಿಚಾರಗಳಲ್ಲಿದ್ದಂತೆಯೇ, ಪಾರಮಾರ್ಥಿಕ ದೃಷ್ಟಿಯಿಂದ ಮತ ವಿಚಾರಗಳಲ್ಲಿಯೂ ಅವನಿಗೆ ಅರಬ್ಬೀ ದೇಶದ ಮೇಲೆ ಅಪ್ರತಿಹತವಾದ ಅಧಿಕಾರವಿದ್ದಿತು. ಆದಕಾರಣ, ಮುಹಮ್ಮದನ ಸ್ಥಿತಿಯು ಕೇವಲ ರಾಜತ್ವಕ್ಕಿಂತಲೂ ಎಷ್ಟೋ ಹೆಚ್ಚಿನದಾಗಿದ್ದಿತು. ಅರಬ್ಬೀ ದೇಶದ ಪ್ರಜೆಗಳ ಮೇಲೆ ಸಮಸ್ತ ವಿಚಾರಗಳಲ್ಲಿಯೂ ಅವನಿಗೆ ಸರ್ವಾಧಿಕಾರವಿದ್ದಿತೆಂದರೂ ಅತಿಶಯೋಕ್ತಿಯಾಗದು.

**ಕೈಜರನ ಅಸಹಿಷ್ಣುತೆ**

ಯಾವ ಕೈಜರ್ ಚಕ್ರವರ್ತಿಯು ಅಬೂ ಸುಫ್ಯಾನನಿಂದ ಮುಹಮ್ಮದನ ಗುಣ ಸಂಕೀರ್ತನೆಯನ್ನು ಕೇಳಿ ಆನಂದಪಟ್ಟಿದ್ದನೋ ಅದೇ ಕೈಜರ್ ಚಕ್ರವರ್ತಿಯು ಅರಬ್ಬೀ ದೇಶದಲ್ಲೆಲ್ಲ ಇಸ್ಲಾಂ ಮತವು ಹಬ್ಬುತ್ತಿದ್ದುದನ್ನು ಕಂಡು ಅಸೂಯೆಯಿಂದ ಕೇವಲ ಕಳವಳಕ್ಕೊಳಗಾದನು. ಮುಹಮ್ಮದನ ಪ್ರಾಬಲ್ಯವು ಹೆಚ್ಚಿದಂತೆಲ್ಲ ಕ್ರೈಸ್ತ ಮತೀಯನಾದ ಆ ದೊರೆಯು ಆತಂಕಗೊಂಡು, ಮುಹಮ್ಮದನು ಅರಬ್ಬೀ ದೇಶಕ್ಕೆಲ್ಲ ಒಡೆಯನಾಗುವನೆಂಬ ಚಿಂತೆಯಿಂದ, ಚಿತ್ತಶಾಂತಿಯೇ ಇಲ್ಲದವನಾದನು. ಮುಹಮ್ಮದನು ತನ್ನ ರಾಷ್ಟ್ರದಲ್ಲಿದ್ದ ಕ್ರೈಸ್ತ ಮತೀಯರ ವಿಷಯದಲ್ಲಿ ಹೇಗೆ ವರ್ತಿಸುತ್ತಿದ್ದನೆಂಬುದನ್ನು ಪರಿಗಣಿಸಿದರೆ, ಕೈಜರನ ಅಸಹನೆಯು ಅನ್ಯಾಯವಾದುದೆಂದೇ ಹೇಳಬೇಕು. ಕ್ರೈಸ್ತ ಮತಾಧಿಪತಿಗಳ ಮತ್ತು ಕ್ರೈಸ್ತ ಮತೀಯರ ಹಕ್ಕು ಬಾಧ್ಯತೆಗಳು ಸುರಕ್ಷಿತವಾಗಿರುವಂತೆ ಮುಹಮ್ಮದನು ನಿರೂಪವನ್ನು ಕೊಟ್ಟು, ತನ್ನ ರಾಷ್ಟ್ರದಲ್ಲಿ ಯಾರೂ ಕ್ರೈಸ್ತರ ಸ್ವತ್ತನ್ನು ಅಪಹರಿಸಕೂಡದೆಂದೂ, ಅವರ ಮತವನ್ನು ದೂಷಿಸಕೂಡದೆಂದೂ, ಅವರ ಮತಾಚಾರಗಳಿಗೆ ಅಡ್ಡಿ ಬರಕೂಡದೆಂದೂ, ಇಸ್ಲಾಂ

ಮತಕ್ಕೆ ಸೇರುವಂತೆ ಅವರನ್ನು ಕೇಳಕೂಡದೆಂದೂ ಕಟ್ಟಾಜ್ಞೆ ಮಾಡಿದ್ದನು. ಕ್ರೈಸ್ತರ ಮೇಲೆ ಹೆಚ್ಚು ತೆರಿಗೆಯನ್ನು ಹಾಕಕೂಡ ದೆಂದೂ, ಮುಸಲ್ಮಾನರ ಮನೆಗಳನ್ನಾಗಲಿ ಮಸೀದಿಗಳನ್ನಾಗಲಿ ಕಟ್ಟುವುದಕ್ಕಾಗಿ ಕ್ರೈಸ್ತ ದೇವಾಲಯಗಳನ್ನು ಎಂದಿಗೂ ಕೆಡಹಕೂಡ ದೆಂದೂ, ಕ್ರೈಸ್ತರ ಮಠಗಳಿಗೂ ದೇವಾಲಯಗಳಿಗೂ ಕಾಮಗಾರಿ ಮಾಡುವುದರಲ್ಲಿ ಮುಸಲ್ಮಾನರೂ ಉಚಿತವಾಗಿ ಸಹಾಯ ಮಾಡ ಬೇಕೆಂದೂ ಮಹಮ್ಮದನು ಅಪ್ಪಣೆ ಮಾಡಿದ್ದನು. ಒಂದು ವೇಳೆ ಪರ ದೇಶದ ಕ್ರೈಸ್ತರೊಡನೆ ಯುದ್ಧವು ಸಂಘಟಿಸಿದರೂ ಕೂಡ, ಕ್ರೈಸ್ತರು ತಮ್ಮ ವಿರೋಧಿಗಳೆಂಬ ಕಾರಣದ ಮೇಲೆ, ಮಹಮ್ಮದೀಯರು ತನ್ನ ಕ್ರೈಸ್ತ ಪ್ರಜೆಗಳಿಗೆ ಲೇಶಮಾತ್ರವೂ ತೊಂದರೆಯನ್ನುಂಟುಮಾಡಕೂಡದೆಂದೂ ಅವನು ತನ್ನ ನಿರೂಪದಲ್ಲಿ ಕಾಣಿಸಿದ್ದನು. ತನ್ನ ಆಜ್ಞೆಯನ್ನು ವಿಾರಿ ಈ ನಿಯಮಗಳಿಗೆ ವಿರೋಧವಾಗಿ ನಡೆಯುವವರೆಲ್ಲರೂ ದೈವದ್ರೋಹಿ ಗಳೆಂದೂ ಗುರುದ್ರೋಹಿಗಳೆಂದೂ ಆತ್ಮದ್ರೋಹಿಗಳೆಂದೂ ಮಹ ಮ್ಮದನು ಪ್ರಕಟಿಸಿದ್ದಲ್ಲದೆ, ಅಂಥವರಿಗೆ ಕ್ರೂರ ದಂಡನೆಯನ್ನೂ ಗೊತ್ತು ಮಾಡಿದ್ದನು. ಈ ನಿಯಮಗಳನ್ನು ನೋಡಿದರೆ ಮಹಮ್ಮದನು ಎಷ್ಟು ಮಟ್ಟಿಗೆ ಪರಮತ ಸಹಿಷ್ಣುವಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ, ಘಜನಿಯ ಮಹಮ್ಮದನೇ ಮುಂತಾದವರೆಲ್ಲರೂ ಇದೇ ವಿಧದಲ್ಲಿ ಪರಮತ ಸಹಿಷ್ಣುತೆಯನ್ನು ತೋರ್ಪಡಿಸಿದ್ದರೆ, ಇಸ್ಲಾಂ ಮತದ ಕೀರ್ತಿಯು ಇನ್ನೆಷ್ಟು ಉಜ್ಜ್ವಲವಾಗಿರುತ್ತಿದ್ದಿತೋ ಎಂಬ ಭಾವನೆಯು ಹುಟ್ಟುತ್ತದೆ.

ಮಹಮ್ಮದನು ಇಷ್ಟುಮಟ್ಟಿಗೆ ಪರಮತ ಸಹಿಷ್ಣುತೆಯಿಂದಿದ್ದರೂ ರೋಮನ್ ಚಕ್ರವರ್ತಿಯಾದ ಕೈಜರನು ಅವನ ಮೇಲೆ ಯುದ್ಧ ಸನ್ನಾಹ ಮಾಡಿ, ಘಸ್ಸನ್ ಮುಂತಾದ ಗುಂಪುಗಳ ಜನರನ್ನು ತನ್ನ ಕಡೆಗೆ ಸೇರಿಸಿಕೊಂಡು, ದೊಡ್ಡ ದೊಂದು ಸೈನ್ಯವನ್ನು ಸಿದ್ಧಗೊಳಿಸಲುಪಕ್ರಮಿ ಸಿದನು. ಅತ್ತ, ಮಹಮ್ಮದನೂ ಕಷ್ಟನಿವಾರಣೆಗಾಗಿ ತಕ್ಕ ಉಪಾಯವನ್ನಾಲೋಚಿಸಿ, ಮಾತೃಭೂಮಿಯು ಪರರ ವಶವಾಗ

**ತಾಬೂಕಿಗೆ ಪ್ರಯಾಣ**

ಡಂತೆ ಅರಬ್ಬಿಯುವರೆಲ್ಲರೂ ಅನುವಾಗಬೇಕೆಂದು ಜನರನ್ನು ಪ್ರೋತ್ಸಾಹಿಸಿ, ದೊಡ್ಡದೊಂದು ಸೈನ್ಯವನ್ನು ಕೂಡಿಸಿದನು. ಸೈನ್ಯದ ವೆಚ್ಚಕ್ಕೆ ಧನಿಕರು, "ನಾನು ಮುಂದು, ತಾನು ಮುಂದು" ಎಂದು ಉತ್ಸಾಹದಿಂದ ಧನ ಸಹಾಯ ಮಾಡಿದರು; ಸ್ತ್ರೀಯರು ಕೂಡ ತಮ್ಮ ಆಭರಣಗಳನ್ನೊಪ್ಪಿಸಿ ಮಾತೃಭೂಮಿಯ ಸೇವೆ ಮಾಡಿದರು. ಕೈಜರನ ಸೈನ್ಯವು ಅರಬ್ಬೀ ದೇಶಕ್ಕೆ ಮುತ್ತಿಗೆ ಹಾಕಲು ಬಂದಲ್ಲಿ ಯುದ್ಧಾರಂಭಮಾಡುವುದಾಗಿ ಮುಹಮ್ಮದನು ನಿರ್ಧರಿಸಿ, ಯಥಾ ಸಮಯದಲ್ಲಿ ಗಡಿ ನಾಡಿನ ಬಳಿಗೆ ಸೈನ್ಯವನ್ನು ಸಾಗಿಸಿದನು. ಮೂವತ್ತು ಸಾವಿರ ಮಂದಿ ಯೋಧರು ಜೀವದ ಮೇಲಣ ಹಂಗನ್ನು ತೊರೆದು ಕಾದಲು ಸಿದ್ಧರಾದರು. ಹಿಂದೆ, ಮೂರು ಸಾವಿರ ಸೈನ್ಯವೇ ಅಸಂಖ್ಯಾತವಾದ ಶತ್ರು ಸೈನ್ಯದೊಡನೆ ಯುದ್ಧ ಮಾಡಿ ಗೆದ್ದಿದ್ದ ಖ್ಯಾತಿಯನ್ನು ನೆನೆದು ಅವರೆಲ್ಲರೂ ಉತ್ಸಾಹದಿಂದ ಹುರಿಗೊಂಡರು. ಅದೇ ವಿಷಯವನ್ನು ಸ್ಮರಿಸಿಕೊಂಡು ಘಸ್ಸನ್ ಮುಂತಾದ ಬುಡಕಟ್ಟುಗಳ ಜನರು ಕಳೆಗುಂದಿ, ಕೈಜರನ ಸಹಾಯಕ್ಕೆ ಸೈನ್ಯವನ್ನು ಕಳುಹಿಸದೆ ತಟಸ್ಥರಾದರು. ಅರಬ್ಬೀ ದೇಶಕ್ಕೂ ದಮಾಸ್ಕಸಿಗೂ ನಡುವೆ ಇರುವ ತಾಬೂಕ್ ಎಂಬಲ್ಲಿ ಮುಹಮ್ಮದನ ಸೈನ್ಯವು ಬೀಡುಬಿಟ್ಟಿದ್ದಿತು. ಅತ್ತ, ಕಾರ್ಯಾಂತರದಿಂದ ಕೈಜರನು ಮುಹಮ್ಮದೀಯರ ಮೇಲೆ ಯುದ್ಧಮಾಡುವ ಯೋಚನೆಯನ್ನೇ ಬಿಟ್ಟು ಸುಮ್ಮನಾದನು. "ನಿನ್ನೊಡನೆ ಕಾಳೆಗಕ್ಕೆ ಬಂದವರೊಡನೆ ಮಾತ್ರ ನಿನ್ನ ಮತಕ್ಕಾಗಿ ಯುದ್ಧಮಾಡು; ಆದರೆ, ಈ ನಿಯಮವನ್ನು ಮೀರಿ ನಡೆಯಬೇಡ" ಎಂಬ ಖುರಾನಿನ ಉಪದೇಶಕ್ಕನುಗುಣವಾಗಿ ಮುಹಮ್ಮದನ ಸೈನ್ಯವು ಯಾರ ಗೋಜಿಗೂ ಹೋಗದೆ ಹಿಂದಿರುಗಿತು. ಬೇಸಗೆಯ ಬೇಗೆಯಿಂದ ಸೈನಿಕರೆಲ್ಲರಿಗೂ ಬಹಳ ಕಷ್ಟವಾಯಿತು. ತಾಬೂಕಿಗೆ ಪ್ರಯಾಣ ಮಾಡಿದಾಗ ಮುಹಮ್ಮದನು ಅಲೀಯನ್ನು ತನ್ನ ಪ್ರತಿನಿಧಿಯಾಗಿ, ಖಲೀಫನೆಂಬ ಹೆಸರಿನಿಂದ, ಮೆದೀನಾ ನಗರದ ಆಡಳಿತವನ್ನು ನೋಡಿಕೊಳ್ಳಲು ನೇಮಕಮಾಡಿದ್ದನು.

ತಾಯೆಫ್ ನಗರ ನಿವಾಸಿಗಳು ಇಸ್ಲಾಂ ಮತವನ್ನು ಸ್ವೀಕರಿಸಬೇಕೆಂದು ಕೂಡ ಕೇಳದೆ ಮುಹಮ್ಮದನು ಮುತ್ತಿಗೆಯನ್ನೆತ್ತಿ ಹೊರಟು

ತಾಯೆಫ್ ನಗರ ನಿವಾಸಿಗಳು

ಬಂದಿದ್ದನಷ್ಟೆ. ಆ ಸಮಯದಲ್ಲಿ ಆ ನಗರದ ಯಜಮಾನನಾದ ಉರ್ವನೆಂಬವನು ಯುದ್ಧ ವಿದ್ಯೆಯನ್ನು ಕಲಿಯಲು ಪರಸ್ಥಳಕ್ಕೆ ಹೋಗಿದ್ದನು. ಮುತ್ತಿಗೆಯು ಮುಗಿದ ಒಂದು ವರ್ಷದ ಮೇಲೆ ಅವನು ತನ್ನ ಊರಿಗೆ ಹಿಂದಿರುಗಿ ಬಂದು ಅಲ್ಲಿ ನಡೆದ ವಿದ್ಯಮಾನಗಳನ್ನು ಕೇಳಿ ಸಂತೋಷಪಟ್ಟು ಮದೀನಾ ನಗರಕ್ಕೆ ಹೋದನು. ಮೊದಲಿಂದಲೂ ಮಹಮ್ಮದನ ಮೇಲೆ ಅವನಿಗಿದ್ದ ಪ್ರೀತಿ ಗೌರವಗಳು ಆಗ ಮತ್ತಷ್ಟು ಹೆಚ್ಚಿ, ಉರ್ವನು ಮಹಮ್ಮದನನ್ನು ಕಂಡು ಇಸ್ಲಾಂ ಮತವನ್ನವಲಂಬಿಸಿ, ತನ್ನ ಊರಿನವರೂ ಈ ಮತವನ್ನವಲಂಬಿಸಲೆಂಬ ಆಸೆಯಿಂದ ಅವರಿಗೆ ವಿವೇಕ ಹೇಳುವುದಕ್ಕಾಗಿ ಅವಸರದಿಂದ ಹಿಂದಿರುಗಿದನು. ತನ್ನ ಊರಿನ ಜನರು ಹಳೆಯ ಮತವನ್ನು ಬಿಟ್ಟು ಇಸ್ಲಾಂ ಮತಕ್ಕೆ ಸೇರಬೇಕೆಂದು ಅವನು ಬೋಧಿಸಲಾರಂಭಿಸಿದೊಡನೆಯೇ ಆ ಊರಿನವರೆಲ್ಲರೂ ಅವನ ಮನೆಯ ಸುತ್ತಲೂ ಗುಂಪು ಸೇರಿ ಕಲ್ಲು, ಮಣ್ಣು, ಹೆಂಟೆಗಳಿಂದ ಅವನಿಗೆ ಪೂಜೆಮಾಡಲಾರಂಭಿಸಿದರು. ಅವರು ತನ್ನನ್ನು ಅಷ್ಟು ಹಿಂಸಿಸುತ್ತಿದ್ದರೂ ಕೇವಲ ಮತಾಭಿಮಾನದಿಂದ ಉರ್ವನು ಅದನ್ನೆಲ್ಲ ಸೈರಿಸಿಕೊಂಡು ಅವರಿಗೆ ಸಮಾಧಾನ ಹೇಳುತ್ತಲೇ ಇದ್ದನು. ಪಾಪಿಗಳಾದ ಆ ಪಾಷಂಡರ ಕೋಪವು ಅಲ್ಲಿಗೂ ಅಡಗದೆ ಹೋಯಿತು. ಉರ್ವನ ದೇಹವು ರಕ್ತಮಯವಾಗಿದ್ದುದನ್ನು ನೋಡಿಯೂ, ಅವರ ಕಲ್ಲೆದೆಯು ಕರಗಲಿಲ್ಲ. ಅವರು ಮರಳಿ ಕೊಟ್ಟ ಪೆಟ್ಟುಗಳಿಂದಲೇ ಉರ್ವನಿಗೆ ಮರಣವು ಸಂಭವಿಸಿತು. ಮಾತನಾಡಲು ತನಗೆ ಚೈತನ್ಯವು ಕಡಿಮೆಯಾಗುತ್ತ ಬಂದಾಗ ಆತನು ಹೇಳಿದ ಕೊನೆಯ ಸಂದೇಶವನ್ನು ಕೇಳಿ ಅವರಿಗೆ ಜ್ಞಾನೋದಯವಾಯಿತು: "ನನ್ನ ರಕ್ತವನ್ನು ಬಸಿದು ಸ್ವಾಮಿಯ ಸೇವೆಯನ್ನು ಮಾಡಿದ್ದೇನೆ; ಆತನು ಸುಪ್ರೀತನಾದರೆ ಸಾಕು. ಹುನೇನ್ ಕದನದಲ್ಲಿ ಮಡಿದ ಮಹಮ್ಮದೀಯ ಸೈನಿಕರ ಗೋರಿಗಳು ಇಲ್ಲಿಗೆ ಸಮೀಪವಾಗಿವೆ; ಅವುಗಳ ಬಳಿಯಲ್ಲಿ ನನ್ನ ಶವವನ್ನೂ ಹೂಳಿ ನನ್ನನ್ನು ಧನ್ಯನನ್ನಾಗಿ ಮಾಡಿರಿ" ಎಂಬ ಕೊನೆಯ ಮಾತುಗಳನ್ನು ಕೇಳಿ ಅವರಲ್ಲಿ ಅನೇಕರು ಕಂಬನಿದುಂಬಿದರು;

ತಾವು ಮಾಡಿದ ಪಾಪಕೃತ್ಯಕ್ಕಾಗಿ ಅವರೆಲ್ಲರೂ ನಾಚಿ ತಲೆತಗ್ಗಿಸಿದರು. ಸ್ವಲ್ಪ ಕಾಲದಲ್ಲಿಯೇ ಅವರೆಲ್ಲರೂ ಮುಹಮ್ಮದನಿಗೆ ಶರಣಾಗತರಾಗಿ ಇಸ್ಲಾಂ ಮತವನ್ನವಲಂಬಿಸಿದರು.

ತಾಯ್ ವಂಶೀಯರ ದೊರೆಯಾಗಿದ್ದ ಹಾತಿಮನ ಔದಾರ್ಯವು ಪ್ರಖ್ಯಾತವಾದುದು; ಅನೇಕ ಕವಿಗಳು ಅದನ್ನು ಹೊಗಳಿದ್ದಾರೆ.

ತಾಯ್ ವಂಶೀಯರು ಇಸ್ಲಾಂ ಮತಕ್ಕೆ ಸೇರಿದುದು

ಹಾತಿಮನ ಕಾಲಾನಂತರ ಅವನ ಮಗನಾದ ಆಡಿಯು ದೊರೆಯಾಗಲು, ಅವನ ಪ್ರಜೆಗಳು ಇಸ್ಲಾಂ ಮತಕ್ಕೆ ವಿರೋಧವಾಗಿ ಕಾರ್ಯಭಾಗ ಮಾಡಲುಪಕ್ರಮಿಸಿದರು. ಮುಹಮ್ಮದನು ಅವರನ್ನು ನಿಗ್ರಹಿಸುವುದಕ್ಕಾಗಿ ಅಲೀಯೊಡನೆ ಸಣ್ಣದೊಂದು ಸೈನ್ಯವನ್ನು ಕಳುಹಿಸಿದನು. ಆಡಿಯು ಭೀತನಾಗಿ ಸಿರಿಯಾ ದೇಶಕ್ಕೆ ಓಡಿಹೋಗಲು, ಅಲೀಯು ಅವನ ಪ್ರಜೆಗಳ ಮೇಲೆ ಯುದ್ಧಮಾಡಿ, ಯುದ್ಧದಲ್ಲಿ ಕೈಸೆರೆ ಸಿಕ್ಕಿದವರನ್ನು ಮೆದೀನಾ ನಗರಕ್ಕೆ ಕರೆತಂದನು. ಇವರಲ್ಲೊಬ್ಬಳಾದ ಆಡಿಯ ಸಹೋದರಿಯನ್ನು ವಿಶೇಷ ಮನ್ನಣೆಯಿಂದ ಅಲೀಯು ಕರೆತರಲು, ಮುಹಮ್ಮದನು ಆಕೆಯನ್ನು ಗೌರವದಿಂದ ಕಂಡು, ಊಟ ಉಡುಗೊರೆಗಳಿಂದುಪಚರಿಸಿ, ಅನರ್ಘ್ಯವಾದ ಪಾರಿತೋಷಿಕಗಳನ್ನು ಕೊಟ್ಟು, ಆಕೆಯನ್ನೂ ಆಕೆಯೊಡನಿದ್ದವರನ್ನೂ ಬಿಡುಗಡೆ ಮಾಡಿ ಹಿಂದಕ್ಕೆ ಕಳುಹಿಸಿಕೊಟ್ಟನು. ಆಡಿಯು ಇದನ್ನೆಲ್ಲ ಕೇಳಿ, ಮುಹಮ್ಮದನಲ್ಲಿ ಪೂಜ್ಯಬುದ್ಧಿಯುಂಟಾಗಿ, ಶಿಷ್ಯವೃತ್ತಿಯನ್ನವಲಂಬಿಸಿ ಇಸ್ಲಾಂ ಮತಕ್ಕೆ ಸೇರಿದನು. ಅವನ ಕಡೆಯವರೂ ಸಹ ಯಥಾಕಾಲದಲ್ಲಿ ಇಸ್ಲಾಂ ಮತವನ್ನವಲಂಬಿಸಿದರು.

ಮುಹಮ್ಮದನ ಕಾಲದ ಪ್ರಸಿದ್ಧ ಕವಿಯಾದ ಕಾಬನೆಂಬವನು ಶತ್ರುಸೈನ್ಯದಲ್ಲಿ ಸೇರಿಕೊಂಡು ಯೋಧರನ್ನು ತನ್ನ ಕವಿತೆಗಳಿಂದ ಹುರಿದುಂಬಿ

ಕಾಬನಿಗೆ ಬಹುಮಾನ

ಸುತ್ತಿದ್ದುದನ್ನು ನಾವು ಹಿಂದೆಯೇ ಕೇಳಿರುವೆವಷ್ಟೆ. ಕಾಲ ಕ್ರಮದಲ್ಲಿ ಕಾಬನಿಗೂ ಮುಹಮ್ಮದನಲ್ಲಿ ಭಕ್ತಿ ಹುಟ್ಟಿ, ಇಸ್ಲಾಂ ಮತಕ್ಕೆ ಸೇರಬೇಕೆಂಬ ಕುತೂಹಲವುಂಟಾಗಿ, ಅವನಿಗೆ ಅದರಲ್ಲಿ ಹಿಂದೆ ಎಷ್ಟು ದ್ವೇಷ

ಎದ್ದಿತೋ, ಈಗ ಅಷ್ಟು ಪ್ರೀತಿಯೂ ಮಮತೆಯೂ ಹುಟ್ಟಿದುವು. ಒಂದು ದಿನ ಅವನು ವೇಷವನ್ನು ಮರೆಯಿಸಿಕೊಂಡು, ತನ್ನವರೊಡನೆ ಮಸೀದಿಯಲ್ಲಿದ್ದ ಮುಹಮ್ಮದನ ಬಳಿಗೆ ಹೋಗಿ ಅವನನ್ನು ಕುರಿತು, "ಸ್ವಾಮಿಾ! ಕಾಬನು ತಮ್ಮಲ್ಲಿಗೆ ಬಂದು ಶರಣಾಗತನಾದರೆ ಅಪರಾಧಿಯಾದ ಅವನನ್ನು ಕ್ಷಮಿಸಿ, ಇಸ್ಲಾಂ ಮತಕ್ಕೆ ಸೇರಿಸಿಕೊಳ್ಳುವಿರಾ? ನಾನು ಅವನನ್ನು ಕರೆತರಲೆ?" ಎಂದು ಕೇಳಿದನು. ಮುಹಮ್ಮದನು ನಸು ನಕ್ಕು, "ಕ್ಷಮೆಯನ್ನು ಬೇಡಿದ ಮೇಲೆ ಅಪರಾಧವೆಲ್ಲಿ ಉಳಿಯುತ್ತದೆ? ಅವಶ್ಯವಾಗಿ ಅವನನ್ನು ಕರೆದುಕೊಂಡು ಬಾ" ಎನ್ನಲು ಕಾಬನು, "ನಾನೇ ಅವನು" ಎಂದು ಉತ್ತರ ಕೊಟ್ಟನು. ಮುಹಮ್ಮದನ ಶಿಷ್ಯರಲ್ಲಿ ಕೆಲವರು ಅವನ ಹಿಂದಣ ಅಪರಾಧಗಳಿಗಾಗಿ ಅವನನ್ನು ಶಿಕ್ಷಿಸಬೇಕೆಂದು ಸಲಹೆ ಕೊಟ್ಟರೂ ಮುಹಮ್ಮದನು ಅದಕ್ಕೆ ಕಿವಿಗೊಡದೆ, "ಅವನಿಗೆ ಕ್ಷಮೆಯು ವಾಗ್ದಾನವಾಗಿದೆ" ಎಂದನು. ಕಾಬನು ಮುಹಮ್ಮದನ ಅನುಮತಿಯನ್ನು ಪಡೆದು ಅರಬ್ಬೀ ಭಾಷೆಯಲ್ಲಿ ಒಂದು ಆಶುಕವಿತೆಯನ್ನು ರಚಿಸಿ ಹಾಡಿದನು: ಮುಹಮ್ಮದನು ಅಜ್ಞಾನ ವೃಕ್ಷಕ್ಕೆ ಅಸಿಪ್ರಾಯನೆಂದೂ, ಭಗವಂತನ ದಯೆಯಿಂದ ಅರಬ್ಬೀ ದೇಶದಲ್ಲಿ ಜನ್ಮಗ್ರಹಣ ಮಾಡಿದ ಜ್ಞಾನಜ್ಯೋತಿ ಸ್ವರೂಪನೆಂದೂ, ಆ ಕವಿತೆಯಲ್ಲಿ ಕೊಂಡಾಡಿದ್ದನು. ಮುಹಮ್ಮದನು ಕಾಬನ ಕವಿತಾ ಸಾಮರ್ಥ್ಯಕ್ಕೆ ಮೆಚ್ಚಿ ಅನರ್ಘ್ಯವಾದ ಕಿಂಕಾಬಿನ ಉಡಿಗೆಯನ್ನು ಅವನಿಗೆ ಬಹುಮಾನವಾಗಿ ಕೊಟ್ಟನು. ಅದು ಈಗಲೂ ಕಲೀಫರ ವಶದಲ್ಲಿದೆಯಂತೆ. ಕವಿತಾಮಾಧುರ್ಯಕ್ಕೂ ವಾಗ್ಧೋರಣೆಗೂ ಕಾಬನ ಆ ಕವಿತೆಯು ಇಂದಿಗೂ ಪ್ರಸಿದ್ಧವಾಗಿದೆಯಂತೆ. ಕಾಬನಂತಹ ಶಿಷ್ಯನನ್ನು ಪಡೆದ ಮುಹಮ್ಮದನೂ ಧನ್ಯನು, ಮುಹಮ್ಮದನಂತಹ ಗುರುವನ್ನು ಪಡೆದ ಕಾಬನೂ ಧನ್ಯನು.

ಆ ಬಳಿಕ ನಾನಾ ಪ್ರದೇಶಗಳಿಂದಲೂ ತಂಡೋಪತಂಡವಾಗಿ ಅರಸರ ರಾಯಭಾರಿಗಳೂ ಪ್ರಜೆಗಳ ಪ್ರತಿನಿಧಿಗಳೂ ಮುಹಮ್ಮದನಲ್ಲಿಗೆ ಬರಲಾರಂಭಿಸಿದರು. ಮಕ್ಕಾ ನಗರವು ಮುಹಮ್ಮದನ ಸ್ವಾಧೀನವಾದ ಎರಡು ವರುಷಗಳಲ್ಲಿಯೇ

**ಇಷ್ಟಾರ್ಥ ಪ್ರಾಪ್ತಿ**

ಒಟ್ಟು ಅರಬ್ಬೀ ದೇಶವು ಮುಹಮ್ಮದನಿಗೆ ಅಧೀನವಾಗಿ ಇಸ್ಲಾಂ ಮತವು ಎಲ್ಲೆಲ್ಲಿಯೂ ಹಬ್ಬಿತು. ಅಲ್ಲಲ್ಲಿ ಕೆಲವು ಮಂದಿ ಕ್ರೈಸ್ತರೂ ಕೆಲವು ಮಂದಿ ಯೆಹೂದ್ಯರೂ ಇದ್ದುದು ಹೊರತು ಒಟ್ಟಿನಲ್ಲಿ ಅರಬ್ಬೀ ದೇಶವೆಲ್ಲ "ಅಲ್ಲಾ-ಹೊ-ಅಕ್ಬರ್" ಎಂಬ ಧ್ವನಿಯಿಂದ ತುಂಬಿ ತುಳುಕುತ್ತಿದ್ದಿತು. ಮುಹಮ್ಮದನು ವಿಚಕ್ಷಣತೆಯಿಂದ ತನ್ನ ರಾಷ್ಟ್ರದ ಆಡಳಿತವನ್ನು ನೋಡಿಕೊಳ್ಳುತ್ತ, ಮತ ವಿಷಯಕ್ಕಾಗಲಿ ರಾಜ ಕಾರ್ಯಕ್ಕಾಗಲಿ ಹೊರಗಿನಿಂದ ಬಂದವರೆಲ್ಲರ ಕೋರಿಕೆಗಳನ್ನು ಸಲ್ಲಿಸುತ್ತ ಸುಖದಿಂದಿದ್ದನು. ಅರಬ್ಬಿಯವರಲ್ಲಿ ಅನೇಕ ದುರಾಚಾರ ಗಳಿದ್ದುವು: ಕೆರೆ ಕಟ್ಟೆಗಳಲ್ಲಿ ಸ್ತ್ರೀ ಪುರುಷರು ನಗ್ನರಾಗಿ ಸ್ನಾನಮಾಡು ವುದು; ಹೆಣ್ಣು ಕೂಸುಗಳನ್ನು ಸಜೀವವಾಗಿ ಹೂಳಿ, ಆ ಶಿಶು ಹತ್ಯಕ್ಕೆ ಹೇಸದೆ ಆನಂದಪಡುವುದು; ತಂದೆಯು ಮೃತನಾದ ಬಳಿಕ ತಾಯಿ ಯನ್ನೂ ಆಕೆಯ ಸಪತ್ನಿಯರನ್ನೂ ದಾಸಿಯರಂತೆ ಕಾಣುವುದು; ಪಾಪ ಭೀತಿಯೂ ಜನಾಪವಾದದ ಭಯವೂ ಇಲ್ಲದೆ ನಿರ್ಲಜ್ಜರಾಗಿ ನೀಚ ಕಾರ್ಯಗಳನ್ನು ಮಾಡುವುದು; ಐಕಮತ್ಯವಿಲ್ಲದೆ ಒಬ್ಬರೊಡನೊಬ್ಬರು ಹೊಡೆದಾಡುವುದು—ಇವೇ ಮುಂತಾದ ಹೇಯ ವರ್ತನೆಗಳು ಎಲ್ಲೆ ಲ್ಲಿಯೂ ತುಂಬಿದ್ದುವು. ಮುಹಮ್ಮದನು ಇವೆಲ್ಲವನ್ನೂ ತೊಲಗಿಸಿ, ಅರಬ್ಬಿಯವರಲ್ಲಿ ಸೋದರ ಪ್ರೇಮವನ್ನು ನೆಲೆಗೊಳಿಸಿ, ಐಕಮತ್ಯ ಭಾವನೆ ಯಿಂದ ಅವರೆಲ್ಲರನ್ನೂ ಹುರಿಗೂಡಿಸಿ, ತಾನು ಉಪಾಸಿಸಿದ ದಿವ್ಯ ತತ್ತ್ವ ಗಳನ್ನು ಅವರಿಗೆ ಬೋಧಿಸಿದನು. ಅಜ್ಞಾನಾಂಧಕಾರದಲ್ಲಿ ಮುಳುಗಿ ತತ್ತರಿಸುತ್ತಿದ್ದವರು ಜ್ಞಾನ ದೀಪಿಕೆಯ ಬೆಳಕಿನಲ್ಲಿ ಆನಂದದಿಂದೋಲಾ ಡುವಂತೆ ಮಾಡಿ ಅವನು ಚರಿತಾರ್ಥನಾದನು. ತಾನು ಕಳುಹಿಸಿದ ಮತ ಬೋಧಕರ ಬೋಧನೆಯಿಂದ ಹೊಸ ಹೊಸ ದೇಶದ ಜನರು ಮುಹಮ್ಮದನನ್ನು ಗುರುವಾಗಿ ಸ್ವೀಕರಿಸಿ ಭಕ್ತಿ ವಿಶ್ವಾಸಗಳನ್ನು ತೋರಿ ಸಿದರು. ಸ್ವದೇಶ ವಿದೇಶೀಯರೆಲ್ಲರ ಪ್ರೀತಿಗೂ ಪಾತ್ರನಾಗಿ ಮುಹ ಮ್ಮದನು ತನ್ನ ಕರ್ತವ್ಯ ನಿಷ್ಠೆಯನ್ನು ಪರಿಪಾಲಿಸಿದನು.

## ಹದಿಮೂರನೆಯ ಅಧ್ಯಾಯ

# ಮುಹಮ್ಮದನ ರೂಪವೂ ಗುಣಗಳೂ

ಮುಹಮ್ಮದನ ಜೀವನ ಚರಿತ್ರೆಯನ್ನು ಪರಿಸಮಾಪ್ತಿಗೊಳಿಸುವು ದಕ್ಕೆ ಮೊದಲು ಅವನ ರೂಪವನ್ನೂ ಗುಣಗಳನ್ನೂ ಸಂಕ್ಷೇಪವಾಗಿ ವಿಚಾರಮಾಡುವುದು ಆವಶ್ಯಕ. ಮುಹಮ್ಮದನು ಸ್ಫುರದ್ರೂಪಿ; ಅವನ ದೇಹವು ತಿಳಿಗೆಂಪಿನಿಂದ ಕೂಡಿದ ಬಿಳುಪು ಛಾಯೆಯಿಂದ ಕಂಗೊಳಿಸು ತ್ತಿದ್ದಿತು. ಅವನು ಅಷ್ಟು ಎತ್ತರವಾಗಿಯೂ ಇರಲಿಲ್ಲ, ಗಿಡ್ಡಾಗಿಯೂ ಇರಲಿಲ್ಲ; ಎತ್ತರಕ್ಕೆ ತಕ್ಕಷ್ಟು ದಪ್ಪವಾಗಿದ್ದು, ದೃಢಕಾಯ ನಾಗಿದ್ದನು. ಅವನ ಕೂದಲು ಅಚ್ಚ ಕಪ್ಪಾಗಿಯೂ, ಗುಂಗುರು ಗುಂಗುರಾಗಿಯೂ ಇದ್ದು ಕಿವಿಯ ಹಾಲೆಗಳ ವರೆಗೂ ಜೋಲಾಡುತ್ತ ಚಕ ಚಕಿಸುತ್ತಿದ್ದಿತು; ಮುಖವು ತುಂಬಿಕೊಂಡು ಮನೋಹರವಾ ಗಿದ್ದಿತು; ನೋಡಿದವರೆಲ್ಲರೂ ಅದನ್ನು ಚಂದ್ರಮಂಡಲಕ್ಕೆ ಹೋಲಿಸು ತ್ತಿದ್ದರು. ಹಣೆಯು ವಿಶಾಲವಾಗಿದ್ದಿತು. ಕಣ್ಣುಗಳು ಅಗಲವಾಗಿದ್ದು ಅಲ್ಪ ಸ್ವಲ್ಪ ಕೆಂಪು ಛಾಯೆಯಿಂದ ಕೂಡಿದ್ದುವು. ಹಲ್ಲುಗಳು ಒತ್ತಾ ಗಿಯೂ ಶುಭ್ರವಾಗಿಯೂ ಇದ್ದುವು. ಎದೆಯು ಅಗಲವಾಗಿದ್ದು ಅವನ ವೀರತ್ವವನ್ನು ಸೂಚಿಸುವಂತಿದ್ದಿತು. ಹೆಗಲಿನ ಬಳಿಯಲ್ಲಿ ಗುಂಡಗಿರುವ ಕರಿಯ ಮುತ್ತಿಯೊಂದಿದ್ದಿತು. ತೊಡೆಗಳೂ ತೋಳುಗಳೂ ತುಂಬಿ ಉಬ್ಬಿಕೊಂಡಿದ್ದುವು. ಮುಹಮ್ಮದನು ವೃದ್ಧಾಪ್ಯದಲ್ಲಿ ಕೂಡ ಬಲ ಶಾಲಿಯಾಗಿಯೂ ದೃಢಾಂಗನಾಗಿಯೂ ಇದ್ದನು. ಅವನ ಹಲವು ಸದ್ಗುಣಗಳನ್ನು ಈ ಮೊದಲೇ ಆ ಆ ಸಂದರ್ಭಗಳಲ್ಲಿ ಸೂಚಿಸಿರುವೆ ವಾದರೂ ಇನ್ನೂ ಕೆಲವು ಸಂಗತಿಗಳನ್ನು ವಿಚಾರ ಮಾಡುವುದು ಯುಕ್ತವಾಗಿದೆ.

ರೂಪ

ಮುಹಮ್ಮದನು ಉದಾರ ಚರಿತನಾದ ಧರ್ಮಾತ್ಮನು. ಅವನು ಪ್ರತಿ ದಿನವೂ ದೊರೆತ ಹಣವನ್ನು ಅಂದಿನ ರಾತ್ರಿಯೊಳಗಾಗಿ ಧರ್ಮ ಮಾರ್ಗದಲ್ಲಿ ವೆಚ್ಚ ಮಾಡುತ್ತಿದ್ದನು; ರಾತ್ರಿಯಾದಮೇಲೂ ಹಣ

ವೇನಾದರೂ ಉಳಿದಿದ್ದರೆ, ಅದನ್ನು ಸತ್ಪಾತ್ರನಾದ ಯಾವನಾದರೂ ದರಿದ್ರನಿಗೆ ದಾನವಮಾಡಿ ಬಂದಲ್ಲದೆ ಸುಮ್ಮನಿರುತ್ತಿರಲಿಲ್ಲ. ತನಗೆ ದೊರೆತ ಹಣದಲ್ಲಿ ತನ್ನ ಜೀವನಕ್ಕೆ ಅತ್ಯವಶ್ಯವಾಗಿ ಬೇಕಾದಷ್ಟನ್ನು ಮಾತ್ರ ಉಪಯೋಗಿಸಿಕೊಂಡು, ಉಳಿದುದನ್ನು ಭಗವತ್ಪ್ರೀತ್ಯರ್ಥವಾಗಿ ದೀನಾನಾಥರಿಗೆ ವಿನಿಯೋಗಿಸುತ್ತಿದ್ದನು. ತನಗೆ ವಿರಾಮವಿದ್ದಾಗಲೆಲ್ಲ ಭಗವಂತನ ಧ್ಯಾನದಲ್ಲಿ ಮಗ್ನನಾಗಿರುತ್ತ, ತಾನು ಈ ಪ್ರಪಂಚದಲ್ಲಿರುವುದು, ಪ್ರಯಾಣಹೊರಟವನು ಮಾರ್ಗ ಮಧ್ಯದಲ್ಲಿ ಸ್ವಲ್ಪ ಕಾಲ ಯಾವುದಾದರೂ ಒಂದು ಮರದ ಕೆಳಗೆ ಕುಳಿತಿದ್ದ ಹಾಗೆಂದು ಆಗಾಗ ಹೇಳುತ್ತಿದ್ದನು. ಈ ಭಾವನೆಯು ಅವನ ಮನಸ್ಸಿನಲ್ಲಿ ನಿಶ್ಚಲವಾಗಿದ್ದುದರಿಂದಲೇ ಅವನು ಕ್ಷಣಭಂಗುರವಾದ ಐಹಿಕ ಜೀವನದ ನಿಜಸ್ವಭಾವವನ್ನರಿತು, ವಿನಯಶೀಲನಾದ ಧರ್ಮಾತ್ಮನೆನಿಸಿ ಕೃತಾರ್ಥನಾದನು.

ಧಾರ್ಮಿಕ ಸ್ವಭಾವ

ಮಹಮ್ಮದನು ಸರಳಜೀವಿಯಾದ ಸಾಧು; ದರಿದ್ರನಾಗಿದ್ದಾಗ ಹೇಗೆ ವಿನೀತಭಾವದಿಂದ ವರ್ತಿಸುತ್ತಿದ್ದನೋ, ಪ್ರಭು ಪದವಿಯನ್ನು ಪಡೆದ ಮೇಲೂ ಅದೇ ರೀತಿಯಲ್ಲಿ ವರ್ತಿಸುತ್ತಿದ್ದನು. ಐಹಿಕ ಜೀವನದ ಅಟ್ಟಹಾಸದ ಕಡೆಗೆ ಅವನ ಬುದ್ಧಿಯು ಓಡುತ್ತಲೇ ಇರಲಿಲ್ಲ; ಹಾಗಿದ್ದಲ್ಲಿ, ಅರಬ್ಬೀ ದೇಶದ ರಾಜನೆಂದು ಮೆರೆದು ರಾಜಠೀವಿಯಿಂದಲೇ ಇರುತ್ತಿದ್ದನು. ಮಹಮ್ಮದನು ಆ ರೀತಿ ಮಾಡಲಿಲ್ಲ; ನೂರಾರು ಮಂದಿ ದಾಸ ದಾಸಿಯರಿಂದ ಓಲೈಸಿಕೊಳ್ಳುವಂತಹ ಪದವಿಯು ತನಗಿದ್ದೂ, ಸಾಮಾನ್ಯನಂತೆ ತನ್ನ ಕೆಲಸ ಕಾರ್ಯಗಳನ್ನು ತಾನೇ ಮಾಡಿಕೊಳ್ಳುತ್ತಿದ್ದನು; ಕಿಂಕಾಬಿನ ವಸ್ತ್ರಗಳನ್ನು ತೊಡುವ ಐಶ್ವರ್ಯವಿದ್ದೂ ಸಾಮಾನ್ಯರಂತೆ ಉಡುಪನ್ನು ಧರಿಸುತ್ತಿದ್ದನು; ಅಷ್ಟೇ ಅಲ್ಲ, ಬಟ್ಟೆಗಳು ಹರಿದುಹೋದರೆ ತಾನೇ ಅವುಗಳನ್ನು ಹೊಲಿದುಕೊಳ್ಳುತ್ತಿದ್ದನು; ಜೋಡು ಕಿತ್ತುಹೋದರೆ ತಾನೇ ಅದನ್ನು ಸರಿಮಾಡಿಕೊಳ್ಳುತ್ತಿದ್ದನು; ಪ್ರಾಸಾದಗಳಲ್ಲಿ ವಾಸಮಾಡಬಹುದಾದಷ್ಟು ಭಾಗ್ಯವನ್ನು ಭಗವಂತನು ಕರುಣಿಸಿದ್ದರೂ, ಬಡವನಂತೆ ಒಂದು

ಸರಳ ಜೀವನ

ಕುಟೀರದಲ್ಲಿ ವಾಸಮಾಡುತ್ತಿದ್ದನು ; ಭಿಕ್ಷುಕರು ಬಾಗಿಲಿಗೆ ಬಂದರೆ ತಾನೇ ಅವರಿಗೆ ಆದರದಿಂದ ಭಿಕ್ಷವನ್ನು ನೀಡುತ್ತಿದ್ದನು ; ತನ್ನ ಕೋಣೆಯನ್ನು ತಾನೇ ಗುಡಿಸಿಕೊಂಡು, ತನ್ನ ಒಂಟೆಯ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳುತ್ತಿದ್ದನು ; ಹಂಸ ತೂಲಿಕಾ ತಲ್ಪದಲ್ಲಿ ಪವಡಿಸುವ ಅನುಕೂಲವು ತನಗಿದ್ದೂ ಕಡು ಬಡವನಂತೆ ಹಗ್ಗ ಬಿಗಿದ ಮರದ ಮಂಚದ ಮೇಲೆಯೋ, ಕೆಲವು ವೇಳೆ ಬರಿಯ ನೆಲದ ಮೇಲೆಯೋ ಮಲಗುತ್ತಿದ್ದನು. ಅವನು ಕೂಲಿಯಾಳುಗಳೊಡನೆ ಸೇರಿ ಮಸೀದಿಯ ಗೋಡೆಯನ್ನು ಕಟ್ಟಿದುದನ್ನೂ ಕೋಟೆಯ ಕಂದಕವನ್ನು ಅಗೆದುದನ್ನೂ ಹಿಂದೆಯೇ ತಿಳಿಸಿದ್ದೇವೆ. ತನಗೆ ಬೇಕಾದ ಸಾಮಾನುಗಳನ್ನು ಅಂಗಡಿಯಿಂದ ತಾನೇ ತಂದುಕೊಳ್ಳುತ್ತಿದ್ದುದಲ್ಲದೆ, ನೆರೆ ಹೊರೆಯವರಿಗೆ ಕೂಡ ತಂದುಕೊಟ್ಟು ಸಹಾಯಮಾಡುತ್ತಿದ್ದನಂತೆ. ಒಮ್ಮೆ, ಅವನ ಪತ್ನಿಯರೂ ಪುತ್ರಿಯೂ ತಮ್ಮ ಠೀವಿಗೆ ತಕ್ಕಂತೆ ಇರಬೇಕೆಂದು ಸೂಚಿಸಿದುದಕ್ಕೆ, ಭಗವಂತನ ಸೇವಕರಾಗಿ ಕೆಲಸ ಮಾಡುವವರು ಅಂತಹ ಯೋಚನೆಯನ್ನೇ ಮಾಡಬಾರದೆಂದು ಉತ್ತರ ಹೇಳಿದನಂತೆ. ಮತಸ್ಥಾಪಕನಾಗಿಯೂ ಪ್ರಭುವಾಗಿಯೂ ಸಮಸ್ತ ಸೌಕರ್ಯಗಳನ್ನೂ ಘನತೆ ಗೌರವಗಳನ್ನೂ ಪಡೆದಿದ್ದರೂ ಯಾವ ಆನುಕೂಲ್ಯಗಳೂ ಇಲ್ಲದ ಸಾಮಾನ್ಯನಂತೆ ಅವನು ಜೀವನ ಮಾಡುತ್ತಿದ್ದನು. ನಸಿರುದ್ದೀನ್ ಚಕ್ರವರ್ತಿಯು ತಾನು ಡಿಲ್ಲೀಶ್ವರನಾಗಿದ್ದೂ ಪ್ರಜೆಗಳ ಹಣವನ್ನು ಸ್ವಂತಕ್ಕೆ ಉಪಯೋಗಿಸಿಕೊಳ್ಳಲು ಇಷ್ಟಪಡದೆ ಖುರಾನಿನ ಪ್ರತಿಗಳನ್ನು ಬರೆದು ಮಾರಿ ಬಡ ಭಿಕಾರಿಯಂತೆ ಜೀವನ ಮಾಡುತ್ತಿರಲಿಲ್ಲವೆ? ಮುಹಮ್ಮದನ ಆದರ್ಶ ಜೀವನವನ್ನೇ ಅನುಕರಿಸಿ ಐಹಿಕ ಭೋಗದ ತುಚ್ಛ ಸ್ವಭಾವವನ್ನರಿತು ಆ ದೊರೆಯು ಆ ರೀತಿ ಮಾಡಿದ್ದರೂ ಮಾಡಿರಬಹುದು.

**ಭೇದ ರಾಹಿತ್ಯ**

ಮುಹಮ್ಮದನ ಮನಸ್ಸಿನಲ್ಲಿ ಧನಿಕರು ದರಿದ್ರರು ಎಂಬ ಭೇದವೇ ಇರಲಿಲ್ಲ; ಸರಳ ಜೀವಿಯಾದ ಆ ಮಹಾನುಭಾವನು ಮನುಷ್ಯನ ಯೋಗ್ಯತೆಗೆ ಅವನ ಸಂಪತ್ತು ಎಂದಿಗೂ ಪ್ರಧಾನವಲ್ಲವೆಂಬುದನ್ನರಿತು, ಅದನ್ನು ಅಕ್ಷರಶಃ ಪ್ರತಿಪಾಲಿಸು

ತ್ತಿದ್ದನು. ಒಮ್ಮೆ, ಮುಹಮ್ಮದನು ಒಬ್ಬ ಧನಿಕನೊಡನೆ ಮಾತನಾಡು ತ್ತಿದ್ದಾಗ, ಅದೇ ಸಮಯದಲ್ಲಿ ತನ್ನೊಡನೆ ಇಸ್ಲಾಂ ಸಿದ್ಧಾಂತದ ವಿಚಾರವಾಗಿ ಚರ್ಚೆ ಮಾಡಲು ಬಂದಿದ್ದ ಅಂಧನಾದ ಒಬ್ಬ ಬಡವ ನೊಡನೆ ಕಾರಣಾಂತರದಿಂದ ಮಾತನಾಡುವುದಕ್ಕಿಲ್ಲದೆ ಹೋಯಿತು. ಆ ಬಡವನನ್ನು ತಾನು ಅಲಕ್ಷ್ಯದಿಂದ ಕಂಡಹಾಗಾಯಿತೆಂಬ ಮನೋವ್ಯಥೆ ಯಿಂದ ಮುಹಮ್ಮದನು ವಿಶೇಷ ಪಶ್ಚಾತ್ತಾಪ ಪಟ್ಟನಂತೆ. ಈ ತಪ್ಪಿತದಿಂದ ಭಗವಂತನು ಕೂಡ ಅಸಮಾಧಾನಪಟ್ಟನೆಂದು ಖುರಾನಿನಲ್ಲಿ ಹೇಳಿದೆಯಂತೆ. ಇದು ಹಾಗಿರಲಿ; ಅಲ್ಲಿಂದ ಮುಂದೆ ಆ ಅಂಧನನ್ನು ಕಂಡಾಗಲೆಲ್ಲ ಮುಹಮ್ಮದನು ತಾನೇ ಅವನ ಬಳಿಗೆ ಹೋಗಿ ಅವನನ್ನು ಗೌರವದಿಂದ ಕಂಡು, "ಪುಣ್ಯಾತ್ಮನಾದ ನಿನ್ನ ದೆಸೆಯಿಂದ ಭಗವಂತನು ನನ್ನನ್ನು ತಪ್ಪುಹಿಡಿದು ಬುದ್ಧಿ ಕಲಿಸಿದನಯ್ಯಾ! ನಿನ್ನನ್ನು ನಾನು ಎಷ್ಟು ಆದರದಿಂದ ಕಂಡರೂ ಸಾಲದು" ಎಂದು ಹೇಳುತ್ತಿದ್ದನು. ಆಗಿನ ಕಾಲದಲ್ಲಿ ಗುಲಾಮರನ್ನು ಅತಿ ನಿಕೃಷ್ಟರನ್ನಾಗಿ ಕಾಣು ತ್ತಿದ್ದುದು ವಾಡಿಕೆಯಾಗಿದ್ದರೂ ಮುಹಮ್ಮದನು ಆ ವಿಧದ ಭೇದ ಭಾವವನ್ನಿಡದೆ, ಗುಲಾಮರಾಗಲಿ ದರಿದ್ರರಾಗಲಿ ಯಾರು ತನ್ನನ್ನು ಭೋಜನಕ್ಕೆ ಕರೆದರೂ ತಪ್ಪದೆ ಅವರ ಮನೆಗೆ ಹೋಗುತ್ತಿದ್ದನು. ಧನಾಢ್ಯತೆಯಾಗಲಿ ದಾರಿದ್ರ್ಯವಾಗಲಿ ಘನತೆ ಗೌರವಗಳಿಗೆ ಕಾರಣವಾಗ ಕೂಡದೆಂಬುದನ್ನೂ, ಸದ್ಗುಣಗಳ ಆಧಾರದ ಮೇಲೆಯೇ ಮನುಷ್ಯನ ಯೋಗ್ಯತೆಯನ್ನು ನಿರ್ಣಯಿಸಬೇಕೆಂಬುದನ್ನೂ ಮುಹಮ್ಮದನು ಕಾರ್ಯತಃ ಆಚರಿಸಿ ತೋರಿಸಿದನು.

ಊಟ ಉಡುಪುಗಳು

ಮುಹಮ್ಮದನು ಊಟದಲ್ಲಿಯೂ ಉಡುಪಿನಲ್ಲಿಯೂ ಕೇವಲ ಸಾಮಾನ್ಯನಂತಿರುತ್ತಿದ್ದನು. ತನಗೆ ಮೃಷ್ಟಾನ್ನ ಭೋಜನವೇ ಆಗ ಬೇಕೆಂಬ ಬಯಕೆ ಇಲ್ಲದೆ, ಯಾರು ಯಾವ ಪದಾರ್ಥ ವನ್ನು ಉಣಬಡಿಸಿದರೂ ಅವನು ಸಂತೋಷದಿಂದ ಊಟ ಮಾಡುತ್ತಿದ್ದನು. ಗೋಧಿಯಿಂದ ಮಾಡಿದ ಪದಾರ್ಥಗಳು, ಖರ್ಜೂರ, ಹಾಲು—ಇವೇ ಅವನ ಮುಖ್ಯಾಹಾರಗಳು. ಅವನು ಮಾಂಸವನ್ನು ಹೆಚ್ಚಾಗಿ ಸೇವಿಸುತ್ತಿರಲಿಲ್ಲ. ಜೇನುತುಪ್ಪದ

ಮೇಲೆ ಅವನಿಗೆ ಬಹಳ ಪ್ರೀತಿ. ಈರುಳ್ಳಿ ಮುಂತಾದ ವಾಸನೆಯ ವಸ್ತುಗಳು ಅವನಿಗೆ ಸೇರವು. ಮುಹಮ್ಮದನು ಪರಿವಾರ ಸಮೇತನಾಗಿ ಯಾರ ಮನೆಗಾದರೂ ಭೋಜನಕ್ಕೆ ಹೋದಾಗ, ಅಲ್ಲಿ ಯಾವುದಾದರೂ ಆಹಾರ ಪದಾರ್ಥವು ಸಾಲದಂತಿದ್ದರೆ, ಅದರ ಸೂಕ್ಷ್ಮವನ್ನರಿತು, ಅದನ್ನು ಹೆಚ್ಚಾಗಿ ಕೇಳದಂತೆ ತನ್ನವರಿಗೆ ಸೂಚನೆ ಕೊಡುತ್ತಿದ್ದನು. ಮುಹಮ್ಮದನು ದರಿದ್ರನಂತಿದ್ದುದರಿಂದ ಅವನ ಮನೆಯಲ್ಲಿ ಅನೇಕ ವೇಳೆ ಆಹಾರ ವಸ್ತುಗಳು ತಕ್ಕಷ್ಟಿಲ್ಲದೆ ಅಡಿಗೆಗೆ ಒಲೆಯನ್ನೇ ಹೊತ್ತಿಸುತ್ತಿರಲಿಲ್ಲ. ಆಗ ಅವನೂ ಅವನ ಮನೆಯವರೂ ಒಂಟೆಯ ಹಾಲನ್ನೋ ಮೇಕೆಯ ಹಾಲನ್ನೋ ಕುಡಿದು, ಖರ್ಜೂರವನ್ನು ತಿಂದು ಸಂತೋಷದಿಂದ ಕಾಲ ಯಾಪನ ಮಾಡುತ್ತಿದ್ದರು. ಅವನು ವಿಲಾಸ ಪ್ರಿಯನಲ್ಲದುದರಿಂದ, ಯಾವ ಬಟ್ಟೆ ದೊರೆತರೆ ಅದನ್ನೇ ಹೊದೆದುಕೊಳ್ಳುತ್ತ, ಯಾವ ಬಣ್ಣದ ರುಮಾಲು ದೊರೆತರೆ ಅದನ್ನೇ ಸುತ್ತಿಕೊಳ್ಳುತ್ತ, ಕೆಲವು ವೇಳೆ ತೇಪೆ ಹಾಕಿದ ಹಳೆಯ ಬಟ್ಟೆಗಳನ್ನೂ ಧರಿಸುತ್ತಿದ್ದನು. ಹಾಗೆ ಮಾಡುವುದು ಹೀನಾಯವೆಂಬ ಮನೋಭಾವನೆಯೇ ಅವನಿಗಿರಲಿಲ್ಲ. ದೊರೆಗಳಿಗೂ ಚಕ್ರವರ್ತಿಗಳಿಗೂ ಮೊಹರು ಮಾಡಿದ ಪತ್ರಗಳನ್ನು ಬರೆಯುವ ಆವಶ್ಯಕತೆಯುಂಟಾದ ಮೇಲೆಯೇ ಅವನು ಮುದ್ರೆಯುಂಗುರವನ್ನಿಟ್ಟುಕೊಂಡುದು. ಹೆಚ್ಚೇಕೆ? ನಾಲ್ಕಾರು ಮಂದಿಯೊಡನೆ ಮುಹಮ್ಮದನು ಕುಳಿತಿದ್ದಾಗ ಯಾರಾದರೂ ಅಪರಿಚಿತರು ಅಲ್ಲಿಗೆ ಬಂದಲ್ಲಿ, ಮುಹಮ್ಮದನನ್ನು ಹೊರಗಿನ ವೇಷದಿಂದ ಗುರುತು ಹಿಡಿಯುವುದು ಸಾಧ್ಯವೇ ಇರಲಿಲ್ಲ. ಸತ್ವಶಾಲಿಗಳು ಬಾಹ್ಯಾಡಂಬರವಿಲ್ಲದೆಯೇ ಘನತೆ ಗೌರವಗಳನ್ನು ಪಡೆಯುವರೆಂಬುದಕ್ಕೆ ಮುಹಮ್ಮದನೇ ಪ್ರತ್ಯಕ್ಷ ನಿದರ್ಶನವೆನಿಸಿದ್ದನು.

ಮುಹಮ್ಮದನು ಹಿತಭಾಷಿಯಾಗಿಯೂ ಮಿತಭಾಷಿಯಾಗಿಯೂ ಇದ್ದನು; ಎಲ್ಲರೊಡನೆಯೂ ಸರಸವಾಗಿ ಮಾತನಾಡುತ್ತಿದ್ದರೂ,

**ಔಚಿತ್ಯವರಿತು ಮಾತು**

ಎಂತಹ ಸಂದರ್ಭದಲ್ಲಿಯೂ ಅವನು ಮಾತಿನ ಮಳೆಯನ್ನು ಸುರಿಸುತ್ತಿರಲಿಲ್ಲ; ತಾನು ಹೇಳಬೇಕಾದುದೇನೂ ಇಲ್ಲದೆ ಹೋದರೆ ಮೌನದಿಂದಿರುತ್ತಿದ್ದನು. ಅವನು

ದೊಡ್ಡವರಲ್ಲಿ ತೋರಿಸುತ್ತಿದ್ದ ವಿನಯವೂ, ಬಡವರಲ್ಲಿ ತೋರಿಸುತ್ತಿದ್ದ ಪ್ರೀತಿ ಮಮತೆಗಳೂ, ದುರಹಂಕಾರಿಗಳಲ್ಲಿ ತೋರಿಸುತ್ತಿದ್ದ ದರ್ಪವೂ ಸುಪ್ರಸಿದ್ಧವಾದ ವಿಷಯುಗಳು. ಅವನು ತನ್ನೆದುರಿಗೆ ಬಂದವರ ಸಂಸ್ಕೃತಿಯು ಅಂತಸ್ತನ್ನರಿತು ಅದಕ್ಕನುಗುಣವಾಗಿ ಅವರೊಡನೆ ಮಾತನಾಡುತ್ತಿದ್ದನು. ಮಕ್ಕಳನ್ನು ಕಂಡರಂತು, ಅವನಿಗೆ ಬಹಳ ಪ್ರೀತಿ; ಅವರನ್ನು ಕಂಡಾಗಲೆಲ್ಲ ತಡೆದು ನಿಲ್ಲಿಸಿ, ಆದರದಿಂದ ಅವರ ಕೆನ್ನೆಗಳನ್ನು ಸವರಿ, ಪ್ರೀತಿಯಿಂದ ಅವರೊಡನೆ ಮಾತನಾಡದಲ್ಲದೆ ಅವನು ಮುಂದಕ್ಕೆ ಹಜ್ಜೆಯಿಡುತ್ತಲಿರಲಿಲ್ಲ. ಮುದ್ದಿಗಾಗಿ ಅವರಿಗೆ ಅಡ್ಡ ಹೆಸರುಗಳನ್ನಿಟ್ಟು ಆ ಹೆಸರುಗಳಿಂದ ಅವರನ್ನು ಕೂಗಿ ಸಂತೋಷಪಡಿಸುವುದು ಅವನ ಪದ್ಧತಿ. ಪ್ರಭು ಪದವಿಯ ಕರ್ತವ್ಯಗಳನ್ನು ನಡೆಯಿಸುವುದರಲ್ಲಿ ಮುಹಮ್ಮದನಿಗೆ ಅನೇಕ ಮಂದಿ ಸೇವಕರಿದ್ದರು; ಅವರೊಡನೆಯೂ ಅವನು ಮೃದು ಮಧುರವಾಗಿ ದಯೆಯಿಂದ ಮಾತನಾಡುತ್ತಿದ್ದನಲ್ಲದೆ ಅವರ ಮನಸ್ಸು ನೋಯುವಂತೆ ಎಂದಿಗೂ ಮಾತನಾಡುತ್ತಿರಲಿಲ್ಲ. ಅವನು ಕೋಪಿಸಿಕೊಳ್ಳುತ್ತಿದ್ದುದೇ ಬಹಳ ಅಪೂರ್ವ; ಒಂದು ವೇಳೆ ಅಲ್ಪಸ್ವಲ್ಪ ಕೋಪಿಸಿಕೊಂಡರೂ, ಕ್ಷಣ ಮಾತ್ರದಲ್ಲಿ ಶಾಂತನಾಗುತ್ತಿದ್ದನು. ಅವನು ಎಂದೂ ದುರ್ಭಾಷೆಯನ್ನಾಡಿದವನಲ್ಲ. ಒಮ್ಮೆ, ಯುದ್ಧಭೂಮಿಯಲ್ಲಿ ಶತ್ರುಗಳನ್ನು ಶಪಿಸುವಂತೆ ಅವನ ಅನುಚರರು ಅವನನ್ನು ಪ್ರಾರ್ಥಿಸಿದಾಗ ಮುಹಮ್ಮದನು, ಉದ್ರೇಕವು ಲೇಶಮಾತ್ರವೂ ಇಲ್ಲದ ಗಂಭೀರ ವಾಣಿಯಿಂದ, "ನಾನು ಶಪಿಸುವುದಕ್ಕಾಗಿ ಈ ಲೋಕಕ್ಕೆ ಬಂದಿಲ್ಲ; ಮಧುರ ವಚನಗಳನ್ನಾಡಿ ಜನರನ್ನಾಶೀರ್ವದಿಸುವುದಕ್ಕೋಸುಗ ಭಗವಂತನು ನನ್ನನ್ನಿಲ್ಲಿಗೆ ಕಳುಹಿಸಿದ್ದಾನೆ" ಎಂದು ಉತ್ತರ ಹೇಳಿದನು. ಬೀದಿಯಲ್ಲಿ ಯಾರನ್ನು ಕಂಡರೂ, ತಾನೇ ಮೊದಲು ಅವರಿಗೆ ಸಲಾಮು ಮಾಡಿ, ಆದರದಿಂದ ಅವರ ಕ್ಷೇಮ ಸಮಾಚಾರಗಳನ್ನು ವಿಚಾರಿಸುತ್ತಿದ್ದನು; ಕಷ್ಟಪಡುತ್ತಿದ್ದವರೊಡನೆ ಮಧುರ ವಚನಗಳನ್ನಾಡಿ, ಅವರಿಗೆ ತನ್ನ ಕೈಯಲ್ಲಾದ ಸಹಾಯ ಮಾಡುವುದರಲ್ಲಿ ಮುಹಮ್ಮದನು ಅಸಮಾನನು.

ಸ್ನೇಹಿತರೆಂದರೆ ಮುಹಮ್ಮದನಿಗೆ ಪ್ರಾಣ; ನಗು ಮುಖದಿಂದಲ್ಲದೆ

ಅವನು ಮಿತ್ರರೊಡನೆ ಮಾತನಾಡಿದುದನ್ನು ಯಾರೂ ಕಂಡರಿಯರು.

ಸ್ನೇಹ ಪರತೆ

ಸ್ನೇಹಿತರಲ್ಲಿ ವಿನೋದ ಗೋಷ್ಠಿಯಿಂದಿದ್ದು, ಹಾಸ್ಯ ಪ್ರತಿಹಾಸ್ಯಗಳಿಂದ ಸಂತೋಷಿಸುತ್ತ ಮುಹಮ್ಮದನು ತಾನು ಮತ ಸ್ಥಾಪಕನೆಂಬ ಬಿಂಕವನ್ನು ತೋರ್ಪಡಿಸಿದವನೇ ಅಲ್ಲ. ಯಾರನ್ನೇ ಆಗಲಿ ಹಿಂದೆ ದೂರುವುದು ಕುತ್ಸಿತ ಪ್ರವೃತ್ತಿಯೆಂಬುದನ್ನು ಮಹಮ್ಮದನು ಚೆನ್ನಾಗಿ ಬಲ್ಲನಾದ ಕಾರಣ, ಎದುರಿಗಿಲ್ಲದವರನ್ನು ಯಾರಾದರೂ ಅವನೊಡನೆ ದೂರಿದರೆ ಅಂಥವರನ್ನು ಮಹಮ್ಮದನು ಆಕ್ಷೇಪಿಸುತ್ತಿದ್ದನು. ಅವನು ಯಾರಲ್ಲಾದರೂ ಸ್ನೇಹ ಮಾಡಿದರೆ, ಅವರೊಡನೆ ಎಂದೆಂದಿಗೂ ಮೈತ್ರಿಯಿಂದಿರುತ್ತಿದ್ದನು. ಸನ್ಮಿತ್ರನೆಂದರೆ ಮಹಮ್ಮದನು ಅರಬ್ಬಿಯವರೆಲ್ಲರಿಗೂ ಆದರ್ಶ ಪುರುಷನಾಗಿದ್ದನು.

ದಾನ ಧರ್ಮ

ದಾನ ಧರ್ಮದಲ್ಲಿಯೂ ಮಹಮ್ಮದನು ಇಸ್ಲಾಂ ಮತಸ್ಥರೆಲ್ಲರಿಗೂ ಮಾದರಿಯಾಗಿದ್ದನು. ಅವನಷ್ಟು ಕೊಡಗೈಯುಳ್ಳವನು ಅರಬ್ಬೀ ದೇಶದಲ್ಲಿ ಮತ್ತೆ ಯಾವನೂ ಇರಲಿಲ್ಲವೆಂದು ಅಲೀಯು ಹೇಳಿದ್ದಾನೆ. ಮಹಮ್ಮದೀಯರು ವಿಶೇಷವಾಗಿ ಧರ್ಮಸಹಾಯಮಾಡುವ ವಾಡಿಕೆಯುಳ್ಳ ರಮ್ಜಾನ್ ತಿಂಗಳಲ್ಲಿ ಒಮ್ಮೆ, ಮಹಮ್ಮದನು ತೊಂಬತ್ತು ಸಾವಿರ **ದರ್ಹಂ** ನಾಣ್ಯಗಳನ್ನಿಟ್ಟುಕೊಂಡು ಕುಳಿತನು. ಬಡವರು ಯಾಚನೆಗಾಗಿ ಬರತೊಡಗಿದರು. ಸ್ವಲ್ಪ ಹೊತ್ತಿನಲ್ಲಿಯೇ ಮಹಮ್ಮದನು ಆ ನಾಣ್ಯಗಳೆಲ್ಲವನ್ನೂ ದಾನ ಮಾಡಿ ಮೇಲಕ್ಕೆದ್ದನು. ಆವೇಳೆಗೆ ಸರಿಯಾಗಿ ಮತ್ತೊಬ್ಬನು ಬಂದು ಯಾಚಿಸಲು, ಅವನಿಗೆ ಕೊಡುವುದಕ್ಕೆ ಮಹಮ್ಮದನಲ್ಲಿ ಒಂದು ನಾಣ್ಯವೂ ಇರಲಿಲ್ಲ. ಅದಕ್ಕೆ ಮಹಮ್ಮದನು, "ಅಯ್ಯಾ! ನಿನಗೆ ಈಗ ಬೇಕಾದ ವೆಚ್ಚಕ್ಕೆ ಮತ್ತಾರಿಂದಲಾದರೂ ಸಾಲ ತೆಗೆದುಕೊ, ಆ ಸಾಲವನ್ನು ನಾನು ತೀರಿಸುವೆನು" ಎಂದು ಹೇಳಿದನು. ಇದನ್ನು ಕೇಳಿ, ಮಹಮ್ಮದನ ಬಳಿಯಲ್ಲಿದ್ದ ಶಿಷ್ಯನೊಬ್ಬನು, "ಗುರುದೇವ! ಇದೆಲ್ಲಿಯ ನ್ಯಾಯ? ನಿಮ್ಮ ಬಳಿಯಿರುವ ಹಣವನ್ನು ಅವಶ್ಯವಾಗಿ ದಾನ ಮಾಡಿರಿ; ನಿಮ್ಮಲ್ಲಿಲ್ಲದ ಹಣವನ್ನು ಮತ್ತೊಬ್ಬನಿಂದ ಸಾಲ

ಮಾಡಿ ಧರ್ಮ ಮಾಡಬೇಕೆ? ಸಾಲ ಮಾಡಿ ದಾನ ಮಾಡಬೇಕೆಂದು ಭಗವಂತನು ವಿಧಿಸಿದ್ದಾನೆಯೆ ? ಹೀಗೆ ಮಾಡುತ್ತ ಬಂದರೆ ಎಷ್ಟು ಕಾಲ ಹಣವು ತಾನೆ ಒದಗುತ್ತದೆ?'' ಎನ್ನಲು, ಮುಹಮ್ಮದನು ಇದಕ್ಕೆ ಉತ್ತರ ಕೊಡದೆ ಮೌನದಿಂದಿದ್ದನು. ಆಗ ಯಾಚಕನು, ''ಕೊಡುವ ಕರ್ತನು ಕೊಟ್ಟೇ ಕೊಡುತ್ತಾನೆ; ವೆಚ್ಚ ಮಾಡಿದಂತೆಲ್ಲ ಭಗವಂತನು ಹಣವನ್ನು ಒದಗಿಸಿಯೇ ಒದಗಿಸುವನು ; ಅವನನ್ನು ನಂಬಿದವರಿಗೆ ಎಂದಿಗೂ ಭಯವಿಲ್ಲ'' ಎಂದು ಉತ್ತರ ಹೇಳಿದುದನ್ನು ಕೇಳಿ ಮುಹಮ್ಮದನು ಸ್ವಲ್ಪ ನಕ್ಕು ಸುಮ್ಮನಾದನು. ಒಮ್ಮೆ, ಬಹ್ರೀನ್ ಪ್ರಾಂತದಿಂದ ಕಪ್ಪ ಕಾಣಿಕೆಗಳ ರೂಪದಲ್ಲಿ ಬಹಳ ಹೆಚ್ಚಾದ ದ್ರವ್ಯವು ಬಂದಿತು. ಮುಹಮ್ಮದನು ಅದರ ಲೆಕ್ಕವನ್ನು ಕೂಡ ಕೇಳದೆ ಅದನ್ನು ಮಸೀದಿಯ ಅಂಗಳದಲ್ಲಿ ಸುರಿಸಿ, ನಮಾಜು ಮುಗಿದ ಮೇಲೆ ಬಡವರಿಗೆ ಹಂಚಿದನು. ಬದರ್ ಕದನದಲ್ಲಿ ಅಬ್ಬಾಸ್ ಎಂಬಾತನು ತನ್ನ ಸರ್ವಸ್ವವನ್ನೂ ಕಳೆದುಕೊಂಡು ದರಿದ್ರನಾದಾಗ ಮುಹಮ್ಮದನು ಅವನಿಗೆ ಯಥೇಷ್ಟವಾಗಿ ದ್ರವ್ಯ ಸಹಾಯ ಮಾಡಿದನು. ಒಮ್ಮೆ, ಯಾಚಕರ ಸಂಖ್ಯೆಯು ಅಪರಿಮಿತವಾಗಿಯೂ, ತನ್ನಲ್ಲಿ ಹಣವು ಸ್ವಲ್ಪವಾಗಿಯೂ ಇದ್ದುದನ್ನು ನೋಡಿ, ವ್ಯಥೆಯಿಂದ ತನ್ನ ಆಪ್ತನೊಬ್ಬನೊಡನೆ ಮುಹಮ್ಮದನು, ''ಊಹುದ್ ಪರ್ವತವೇ ಚಿನ್ನವಾಗಿ ನನ್ನೆದುರಿಗೆ ರಾಸಿಬಿದ್ದರೆ ನಾನು ನಿರಾತಂಕವಾಗಿ ಅದನ್ನು ಬಡವರೆಲ್ಲರಿಗೂ ಆನಂದದಿಂದ ಹಂಚಿಬಿಟ್ಟೇನು ; ಆಷ್ಟು ಚಿನ್ನವೂ ನನ್ನಲ್ಲಿ ಮೂರು ದಿನಗಳಿಗಿಂತ ಹೆಚ್ಚಾಗಿ ಉಳಿಯಲಾರದು'' ಎಂದನಂತೆ.

ನ್ಯಾಯ ಪರತೆ

ಮುಹಮ್ಮದನ ಪ್ರಾಮಾಣಿಕತೆಯೂ ನಿಷ್ಪಕ್ಷಪಾತ ಬುದ್ಧಿಯೂ ಜನ ಜನಿತವಾಗಿ ಪ್ರಸಿದ್ಧವಾಗಿದ್ದುವು. ಮದೀನಾ ನಗರದಲ್ಲಿ, ಅನ್ಯಮತೀಯರಾದ ಯೆಹೂದ್ಯರೂ ಇತರರೂ ಕೂಡ ತಮ್ಮ ವಿವಾದಗಳನ್ನೆಲ್ಲ ನ್ಯಾಯ ವಿಚಾರಣೆ ಮಾಡಿ ತೀರ್ಪು ಹೇಳಲು ಮುಹಮ್ಮದನಿಗೇ ಒಪ್ಪಿಸುತ್ತಿದ್ದರು. ಯೆಹೂದ್ಯರಿಗೂ ಮುಹಮ್ಮದೀಯರಿಗೂ ಬದ್ಧ ದ್ವೇಷವಿದ್ದ ಕಾಲದಲ್ಲಿಯೂ ಸಹ, ಒಬ್ಬ ಯೆಹೂದ್ಯನಿಗೂ ಒಬ್ಬ ಮುಹಮ್ಮದೀಯನಿಗೂ ಇದ್ದ ಒಂದು ವಿವಾದವು ಮುಹಮ್ಮದನಲ್ಲಿ ವಿಚಾರಣೆಗೆ ಬಂದಿತು. ಆಗ

ಮಹಮ್ಮದನು ಇನ್ನೂ ಪ್ರಬಲನಾಗಿರಲಿಲ್ಲ; ಇಸ್ಲಾಂ ಮತವು ಇನ್ನೂ ಶೈಶವಾವಸ್ಥೆಯಲ್ಲಿದ್ದಿತು. ಆದರೂ, ಮಹಮ್ಮದನು ವಿವಾದವನ್ನು ಕೂಲಂಕಷವಾಗಿ ವಿಚಾರಣೆ ಮಾಡಿ, ಯೆಹೂದ್ಯನ ಕಡೆಗೆ ನ್ಯಾಯವಿದ್ದುದರಿಂದ, ಅವನಿಗೆ ಅನುಕೂಲವಾಗಿಯೇ ತೀರ್ಪು ಹೇಳಿದನು. ಈ ತೀರ್ಮಾನದಿಂದ, ಮಹಮ್ಮದನ ಕೆಲವು ಅನುಯಾಯಿಗಳು ಕ್ರುದ್ಧರಾಗಿ ಅವನ ಪಕ್ಷವನ್ನು ಬಿಟ್ಟುಬಿಡಬಹುದಾದ ಸಂಭವವಿದ್ದರೂ ಮಹಮ್ಮದನು ಲೇಶವೂ ಅಳುಕದೆ ನ್ಯಾಯವನ್ನೇ ಹಿಡಿದನು. ಮಹಮ್ಮದನ ಪ್ರಿಯ ಪುತ್ರಿಯಾದ ಫತೀಮಳು ಒಮ್ಮೆ ಆತನನ್ನು ಕುರಿತು, "ನಾನು ನಿಮ್ಮ ಮಗಳಾಗಿ ಹುಟ್ಟಿ ನಿಮ್ಮ ಜೊತೆಯಲ್ಲಿರುವುದರಿಂದ ನನಗೆ ಸದ್ಗತಿಯಾಗುವುದಿಲ್ಲವೆ?" ಎಂದು ಕೇಳಿದಳಂತೆ. ಅದಕ್ಕೆ ಮಹಮ್ಮದನು, "ಇಲ್ಲ, ತಾಯಿ! ನಿನಗೆ ಆ ಕಾರಣದಿಂದ ಮಾತ್ರವೇ ಸದ್ಗತಿಯುಂಟಾಗದು. ಭಗವಂತನು ಬಾಂಧವ್ಯವನ್ನು ನೋಡಿ ಸದ್ಗತಿಯನ್ನು ಕೊಡುವುದಿಲ್ಲ; ಪುಣ್ಯಕರ್ಮಗಳಿಗನುಗುಣವಾದ ಫಲವನ್ನೇ ಕರುಣಿಸುವನು" ಎಂದು ಉತ್ತರ ಹೇಳಿದನಂತೆ. ಖುರಾನಿನಲ್ಲಿ ಹೇಳಿರುವಂತೆ, "ನಿನ್ನ ದ್ವೇಷಿಗಳೆಂಬ ಕಾರಣದಿಂದ ಜನರಿಗೆ ಅನ್ಯಾಯ ಮಾಡಬೇಡ; ಅಧರ್ಮಕ್ಕೆ ಅವಕಾಶವಿಲ್ಲದಂತೆ ಅವರಲ್ಲಿ ವರ್ತಿಸು; ಅದೇ ಪುಣ್ಯದ ದಾರಿ" ಎಂಬ ಉಪದೇಶವನ್ನು ಅವನು ಅಕ್ಷರಶಃ ಆಚರಣೆಗೆ ತರುತ್ತಿದ್ದನು. ಅವನು ಮರಣ ಶಯ್ಯೆಯಲ್ಲಿದ್ದಾಗ ಕೂಡ, "ನಾನು ಯಾರಿಗಾದರೂ ಅನ್ಯಾಯ ಮಾಡಿದ್ದರೆ ಅವರು ಅವಶ್ಯವಾಗಿ ನನ್ನ ಮೇಲೆ ದ್ವೇಷವನ್ನು ತೀರಿಸಿಕೊಳ್ಳಬಹುದು" ಎಂದು ಹೇಳುತ್ತಲೇ ಇದ್ದನಂತೆ. ನ್ಯಾಯ ಮೂರ್ತಿಯಾಗಿ ಪರಿಶುದ್ಧಾತ್ಮನಾಗಿದ್ದ ಮಹಮ್ಮದನು ಯಾರಿಗೂ ಅನ್ಯಾಯ ಮಾಡಿರಲೂ ಇಲ್ಲ, ಯಾರೊಬ್ಬರೂ ಆತನ ಮೇಲೆ ದ್ವೇಷವನ್ನು ತೀರಿಸಿಕೊಳ್ಳುವ ಸಂದರ್ಭವೂ ಒದಗಲಿಲ್ಲ.

ಭೂತ ದಯೆ

ಕಟ್ಟುನಿಟ್ಟಾಗಿ ನ್ಯಾಯ ಪರಿಪಾಲನೆಮಾಡುವ ಗುಣದ ಜೊತೆಗೆ ಮಹಮ್ಮದನಲ್ಲಿ ಭೂತ ದಯೆಯೂ ಮೂರ್ತಿಮತ್ತಾಗಿ ನೆಲೆಗೊಂಡಿದ್ದುದರಿಂದ ಕನಕ ಕಮಲಕ್ಕೆ ಪರಿಮಳಗೂಡಿದಂತೆ ಶೋಭಿಸುತ್ತಿದ್ದಿತು. ಮೂಕ ಪ್ರಾಣಿಗಳಿಗೂ ದಯೆಯನ್ನು

ತೋರಿಸುವುದು ಅತ್ಯಾವಶ್ಯಕವೆಂಬ ನಂಬಿಕೆಯಿಂದ ಮುಹಮ್ಮದನು ಪ್ರಾಣಿ ಮಾತ್ರದಲ್ಲಿ ಅನುಕಂಪವುಳ್ಳವನಾಗಿದ್ದನು. ಆದರೆ ಅವನು ಆಗಾಗ ಮಾಂಸಾಹಾರ ಮಾಡುತ್ತಿದ್ದುದನ್ನೆತ್ತಿಕೊಂಡು, ಅಹಿಂಸಾ ತತ್ತ್ವದಲ್ಲಿ ಅವನನ್ನು ಬುದ್ಧನೊಡನೆ ಹೋಲಿಸುವುದು ನ್ಯಾಯವಲ್ಲ. ಹಾಗೆಯೇ, ಭಕ್ತಿಮಾರ್ಗ ವಿಚಾರದಲ್ಲಿ ಬುದ್ಧನನ್ನು ಮುಹಮ್ಮದನೊಡನೆ ಹೋಲಿಸುವುದೂ ನ್ಯಾಯವಲ್ಲ. ಲೋಕವಂದಿತರಾದ ಅವರಿಬ್ಬರನ್ನೂ ಹಾಗೆ ಪರಸ್ಪರ ಹೋಲಿಸಬೇಕಾದ ಆವಶ್ಯಕತೆಯೂ ಇಲ್ಲ. ಒಮ್ಮೆ, ಒಬ್ಬ ಮನುಷ್ಯನು ಬಾಯಾರಿಕೆಯಿಂದ ಬಳಲುತ್ತಿದ್ದ ಯಾವುದೋ ಒಂದು ನಾಯಿಗಾಗಿ ಬಾವಿಯಿಂದ ನೀರನ್ನು ಸೇದಿ ಇಟ್ಟನಂತೆ. ಭಗವಂತನ ಸೃಷ್ಟಿಗೆ ಸೇರಿದ್ದ ಆ ಮೂಕ ಪ್ರಾಣಿಗೆ ಕರುಣೆಯನ್ನು ತೋರಿಸಿದುದಕ್ಕಾಗಿ ಆತನಿಗೆ ಸ್ವರ್ಗಲೋಕದಲ್ಲಿ ಮನ್ನಣೆ ದೊರೆಯುವುದೆಂದು ಮುಹಮ್ಮದನು ತಿಳಿಸಿದನಂತೆ. ಮತ್ತೊಂದು ಸಂದರ್ಭದಲ್ಲಿ, ಒಬ್ಬ ಹೆಂಗುಸು ರೋಗದಿಂದ ನರಳುತ್ತಿದ್ದು ಸತ್ತು ಹೋದಳಂತೆ. ಅವಳು ಜೀವಂತಳಾಗಿದ್ದಾಗ ಒಂದು ಬೆಕ್ಕನ್ನು ಕಟ್ಟಿ ಹಾಕಿ ಅದು ಹಸಿವಿನಿಂದ ಸೊರಗುವಂತೆ ಮಾಡಿದ್ದಳಂತೆ. ಈ ಪಾಪ ಕರ್ಮಕ್ಕಾಗಿ ಅವಳಿಗೆ ಪರ ಲೋಕದಲ್ಲಿ ಶಿಕ್ಷೆಯು ಸಿದ್ಧವೆಂದು ಮುಹಮ್ಮದನು ಸಾರಿ ಹೇಳಿದನಂತೆ. ದೀನರಾದ ವಿಧವೆಯರಲ್ಲಿಯೂ, ಪೋಷಕರಿಲ್ಲದ ಮಕ್ಕಳಲ್ಲಿಯೂ, ಮುಹಮ್ಮದನಿಗೆ ವಿಶೇಷ ಸಹಾನುಭೂತಿಯಿದ್ದಿತು. ಅಂಥವರಿಗೆ ಅವನು ಅವಶ್ಯವಾಗಿ ಸಹಾಯ ಮಾಡುತ್ತಿದ್ದನು. ಖುರಾನಿನಲ್ಲಿ ಅನರ್ಘ್ಯವಾದ ಈ ವಾಕ್ಯವಿದೆ:—"ಮತ ಬಾಹಿರನು ಯಾವನೆಂಬುದನ್ನು ಬಲ್ಲೆಯಾ? ಅನಾಥರಾದ ಬಾಲಕರ ವಿಷಯದಲ್ಲಿ ಯಾವನು ಕ್ರೌರ್ಯವನ್ನು ತೋರಿಸುವನೋ, ದೀನರಿಗೆ ತಾನೂ ಸಹಾಯ ಮಾಡದೆ, ಸಹಾಯ ಮಾಡುವಂತೆ ಇತರರನ್ನೂ ಪ್ರೇರಿಸದೆ ಯಾವನು ಇರುವನೋ ಅವನೇ ಮತ ಬಾಹಿರನು." ಮುಹಮ್ಮದನು ತನಗೆ ಎಂತಹ ಘೋರ ವಿಪತ್ತು ಬಂದೊದಗಿದರೂ ತಾಳ್ಮೆಯಿಂದ ಸಹಿಸುತ್ತಿದ್ದನು; ಆದರೆ, ಇತರರಿಗೆ ಅಲ್ಪ ಸ್ವಲ್ಪ ತೊಂದರೆಯಾದರೂ, ಅನುತಾಪದಿಂದ ಕುಂದಿಹೋಗುತ್ತಿದ್ದನು. ಯಾರಾದರೂ ಮೃತಪಟ್ಟರೆ, ಮುಹ

ಮ್ಮದನು ಶವದ ಸಂಗಡ ಶ್ಮಶಾನಕ್ಕೆ ಹೋಗಿ, ಅನುಬಂಧಿಗಳು ಅದನ್ನು ಹೂಳುವ ವರೆಗೂ ಅಲ್ಲಿಯೇ ಇರುತ್ತಿದ್ದನು. ಈ ವಿಷಯದಲ್ಲಿ ಮುಹಮ್ಮದೀಯರ ವರ್ತನೆಯು ಇಂದಿಗೂ ಶ್ಲಾಘ್ಯವಾಗಿದೆ.

ಅತಿಥಿ ಸತ್ಕಾರ

ಅತಿಥಿ ಸತ್ಕಾರವು ಪೌರ್ವಾತ್ಯರಲ್ಲಿ ವಂಶಾನುಗತವಾಗಿ ನಡೆದು ಬಂದಿರುವ ಗುಣ ವಿಶೇಷ. ಮುಹಮ್ಮದನು ನಡೆಯಿಸುತ್ತಿದ್ದ ಅತಿಥಿ ಸತ್ಕಾರವು ಸುಪ್ರಸಿದ್ಧವಾದುದು. ಮುಹಮ್ಮದನು ತಾನೇ ಸ್ವಂತವಾಗಿ ಅತಿಥಿಗಳ ಸೇವೆಯನ್ನು ಮಾಡುತ್ತ, ಮನೆಯಲ್ಲಿ ತಕ್ಕಷ್ಟು ಆಹಾರ ಪದಾರ್ಥಗಳಿಲ್ಲದಿದ್ದರೆ, ಇದ್ದುದನ್ನೆಲ್ಲ ಅತಿಥಿಗಳಿಗಾಗಿ ಉಪಯೋಗಿಸಿ, ತಾನೂ ತನ್ನ ಮನೆಯವರೆಲ್ಲರೂ ಉಪವಾಸವಿರುತ್ತಿದ್ದರು. ಅತಿಥಿ ಸತ್ಕಾರದಲ್ಲಿ ಮುಹಮ್ಮದನು ಅನ್ಯ ಮತಸ್ಥರೆಂಬ ಭಾವನೆಯನ್ನು ಸ್ವಲ್ಪವೂ ಗಮನಕ್ಕೆ ತಂದುಕೊಳ್ಳುತ್ತಿರಲಿಲ್ಲ. ಒಂದು ಸಲ, ಅಬಿಸಿನಿಯಾ ದೇಶದಿಂದ ಬಂದಿದ್ದ ಕ್ರೈಸ್ತ ಮತದ ರಾಯಭಾರಿಗಳಿಗೆ ಮುಹಮ್ಮದನು ತನ್ನ ಮನೆಯಲ್ಲಿಯೇ ಅತ್ಯಾದರದಿಂದ ಉಪಚಾರ ಮಾಡಿ, ತಾನೇ ಅವರಿಗೆ ಊಟಕ್ಕೆ ಬಡಿಸಿ ಗೌರವಿಸಿದನು. ಅತಿಥಿಗಳೆಂಬ ದೃಷ್ಟಿಯಿಂದ ಅವನು ಹಾಗೆ ಉಪಚರಿಸಿದನೇ ಹೊರತು ಅವರು ರಾಜನ ಕಡೆಯವರೆಂಬ ಭಾವನೆಯಿಂದಲ್ಲ. ಒಂದು ಸಲ, ಕೇವಲ ಬಡವನಾದ ಅನ್ಯ ಮತೀಯ ಅತಿಥಿಯೊಬ್ಬನು ರಾತ್ರಿಯ ವೇಳೆ ಮುಹಮ್ಮದನ ಮನೆಗೆ ಬಹಳ ಹಸಿದು ಬಂದನು. ಆಗ ಮುಹಮ್ಮದನ ಮನೆಯಲ್ಲಿ ಅಡಿಗೆಯ ಪದಾರ್ಥಗಳೇ ಇಲ್ಲದಿದ್ದುದರಿಂದ ಅತಿಥಿಯ ಹಸಿವನ್ನು ಹೋಗಲಾಡಿಸುವುದಕ್ಕಾಗಿ, ಏಳು ಮೇಕೆಗಳ ಹಾಲನ್ನು ಕರೆದು ಅತಿಥಿಗೆ ಕೊಡಬೇಕಾಗಿ ಬಂದಿತು. ಇದರಿಂದ, ಮುಹಮ್ಮದನಿಗೆ ಆ ರಾತ್ರಿ ಆಹಾರವೇ ಇಲ್ಲದಂತಾಯಿತು. ಮತ್ತೊಂದು ಸಲ ಒಂದು ವಿಚಿತ್ರವಾದ ಸಂಗತಿ ನಡೆಯಿತು: ಪಂಡಿತೋತ್ತಮನಾದ ಅಬೂ ಹುರೈ ಎಂಬಾತನೂ ಅವನ ಸಂಗಡಿಗರೂ ಹಸಿವಿನಿಂದ ಬಳಲಿ ಹೋಗಿದ್ದರು. ಆಹಾರಕ್ಕಾಗಿ ಇತರರನ್ನು ಕೇಳಲು ಆ ಪಂಡಿತನಿಗೆ ಸಂಕೋಚ; ಕೇಳಿದಲ್ಲದೆ ಆ ದಿನ ಆಹಾರ ದೊರೆಯುವಂತಿರಲಿಲ್ಲ. ಆ ಸಮಯದಲ್ಲಿ ಅದೇ ಮಾರ್ಗವಾಗಿ ಹೋಗುತ್ತಿದ್ದ ಅಬೂ ಬಕರನನ್ನು

ಪಂಡಿತನು ಕಂಡು, ತಾವು ಹಸಿದಿರುವುದನ್ನು ಸೂಚಿಸುವುದಕ್ಕಾಗಿ, ಖುರಾನಿನಲ್ಲಿ ಹಸಿವಿನ ಬಾಧೆಯ ವಿಷಯವಾಗಿ ಹೇಳಿರುವ ಅತಿ ಸುಲಭವಾದ ಪದ್ಯವೊಂದಕ್ಕೆ ಅರ್ಥ ಹೇಳೆಂದು ಕೇಳಿದನು. ಪಂಡಿತನ ಈ ಆಶಯವು ಅಬೂ ಬಕರನಿಗೆ ತಿಳಿಯದೆ ಅವನು ಪದ್ಯಕ್ಕೆ ಅರ್ಥವನ್ನು ಹೇಳಿ ಮುಂದಕ್ಕೆ ಹೊರಟುಹೋದನು. ಆ ಬಳಿಕ ಅದೇ ಮಾರ್ಗವಾಗಿ ಓಮರನು ಬರಲು, ಪಂಡಿತನು ಅವನಿಗೂ ಹಿಂದಿನಂತೆಯೇ ತನ್ನ ಆಶಯವನ್ನು ಸೂಚಿಸಲು ಯತ್ನಿಸಿದನು. ಓಮರನೂ ಇದನ್ನು ಗ್ರಹಿಸದೆ ಪದ್ಯದ ಅರ್ಥವನ್ನು ಮಾತ್ರ ಹೇಳಿ ಹೊರಟುಹೋದನು. ಕೊನೆಗೆ ಮುಹಮ್ಮದನು ಅದೇ ಮಾರ್ಗವಾಗಿ ಬರಲು, ಪಂಡಿತನು ಅವನನ್ನೂ ಇದೇ ರೀತಿಯಾಗಿ ಪರೀಕ್ಷೆ ಮಾಡಿದನು. ಮುಹಮ್ಮದನು ಕೂಡಲೆ ಪಂಡಿತನ ಆಶಯವನ್ನು ಗ್ರಹಿಸಿ ಗಟ್ಟಿಯಾಗಿ ನಕ್ಕು, ಅವರೆಲ್ಲರನ್ನೂ ತನ್ನ ಮನೆಗೆ ಕರೆದುಕೊಂಡು ಹೋದನು. ಅದೃಷ್ಟವಶದಿಂದ ಆ ದಿನ ಯಾರೋ ಒಂದು ಗುಡಾಣದ ತುಂಬ ಹಾಲನ್ನು ಮುಹಮ್ಮದನ ಮನೆಗೆ ಕಳುಹಿಸಿದ್ದರು. ಮುಹಮ್ಮದನು ತನ್ನ ಅತಿಥಿಗಳಿಗೆ ಮೊದಲು ಆ ಹಾಲನ್ನು ಹಂಚಿ, ತರುವಾಯ ಇತರ ಆಹಾರ ವಸ್ತುಗಳನ್ನೂ ಕೊಟ್ಟು ಉಪಚರಿಸಿ ಕಳುಹಿಸಿದನು.

ರಣರಂಗದಲ್ಲಿ ಮುಹಮ್ಮದನು ಅಸೀಮ ಪರಾಕ್ರಮದಿಂದ ಯುದ್ಧ ಮಾಡುತ್ತಿದ್ದುದಕ್ಕೆ ಅವನಲ್ಲಿದ್ದ ಅಸಾಮಾನ್ಯವಾದ ಧೈರ್ಯೋತ್ಸಾಹಗಳೇ ಕಾರಣ. ಇದಕ್ಕೆ ಅನೇಕ ನಿದರ್ಶನಗಳನ್ನು ಹಿಂದೆಯೇ ಕೊಡಲಾಗಿದೆ. ಬದರ್ ಕದನದಲ್ಲಿ ತನ್ನ ಕಡೆಯ ಸೈನ್ಯವು ಬಹಳ ಕಡಿಮೆಯಾಗಿದ್ದು ಶತ್ರುಗಳ ಸೈನ್ಯವು ಬಹಳ ದೊಡ್ಡದಾಗಿದ್ದರೂ ಭಯಪಡದೆ, ತಾನು ಮುಂದಾಳಾಗಿ ನಿಂತು, ತನ್ನವರನ್ನು ಪ್ರೋತ್ಸಾಹ ವಚನಗಳಿಂದ ಹುರಿದುಂಬಿಸಿದುದರಿಂದಲೇ ಅಲ್ಲವೆ ಅಂದು ಅವರು ಯುದ್ಧಮಾಡಿ ಪರಿಣಾಮದಲ್ಲಿ ಅಜೇಯರೆನಿಸಿಕೊಂಡು ಪ್ರಖ್ಯಾತರಾದುದು ! ಇತರರೂ ತನ್ನಂತೆಯೇ ಧೈರ್ಯಶಾಲಿಗಳಾಗಿರಬೇಕೆಂಬುದು ಮುಹಮ್ಮದನ ಆಕಾಂಕ್ಷೆ. ಒಮ್ಮೆ, ಮುಹಮ್ಮದನ ಬಳಿಗೆ ಅವನ ಸೈನಿಕರು ಒಬ್ಬ

**ಧೈರ್ಯೋತ್ಸಾಹಗಳು**

ಮನುಷ್ಯನನ್ನು ಕರೆತಂದರು. ಆ ಮನುಷ್ಯನು ಅರಬ್ಬೀ ದೇಶಕ್ಕೆಲ್ಲ ಪ್ರಭು ಸಮಾನನಾಗಿದ್ದ ಮುಹಮ್ಮದನನ್ನು ನೋಡಿ ಭಯದಿಂದ ನಡುಗಲಾರಂಭಿಸಿದನು. ಅವನನ್ನು ಧೈರ್ಯದಿಂದ ನಿಂತು ಮಾತನಾಡು ವಂತೆ ಮಾಡಲು ಮುಹಮ್ಮದನಿಗೆ ಆಸೆಯಾಗಿ, "ಅಯ್ಯಾ! ಹೀಗೆ ಏತಕ್ಕೆ ನಡುಗುವೆ? ನಾನೇನು ದೊರೆಯೇನಯ್ಯಾ? ನಾನು ಕೇವಲ ದರಿದ್ರಳಾದ ಸಾಮಾನ್ಯ ಹೆಂಗುಸಿನ ಮಗ. ನೀನು ಧೈರ್ಯವಾಗಿ ನಿಂತು ಮಾತನಾಡಯ್ಯಾ" ಎಂದು ಹೇಳಿದನಂತೆ.

**ಯಾಚನಾ ವೃತ್ತಿಯಲ್ಲಿ ಅನಾದರ**

ಮುಹಮ್ಮದನು ಯಾಚನಾರ್ಥಿಗಳಾಗಿ ತನ್ನಲ್ಲಿಗೆ ಬಂದವರ ಇಷ್ಟಾರ್ಥವನ್ನು ನೆರವೇರಿಸುತ್ತಿದ್ದನಾದರೂ, ಕೆಲಸ ಮಾಡಲು ಶಕ್ತ ರಾಗಿದ್ದವರು ಭಿಕ್ಷೆ ಬೇಡಿ ಜೀವಿಸುವುದು ಪಾಪ ಕಾರ್ಯವೆಂದು ಭಾವಿಸಿದ್ದನು. ಗಟ್ಟಿಮುಟ್ಟಾಗಿದ್ದ ವರು ಭಿಕ್ಷೆಕ್ಕೆ ಬಂದರೆ ಮುಹಮ್ಮದನಿಗೆ ತಾಳ್ಮೆ ತಪ್ಪಿ ಅವರನ್ನು ಗದರಿಸಿ, "ಕಾಡಿಗೆ ಹೋಗಿ ಸೌದೆಯನ್ನು ಹೊತ್ತು ತಂದು ಮಾರಿ ಅದರಿಂದ ಜೀವಿಸುವ ಮನುಷ್ಯನು, ವ್ಯರ್ಥ ಕಾಲಕ್ಷೇಪ ಮಾಡಿ, ಜೀವನಕ್ಕಾಗಿ ಭಿಕ್ಷೆ ಬೇಡುವವನಿಗಿಂತಲೂ ಕೋಟಿ ಪಾಲು ಮೇಲು" ಎಂದು ಹೇಳುತ್ತಿದ್ದನು. ಒಮ್ಮೆ, ಒಬ್ಬ ಭಿಕ್ಷುಕನು ಮುಹಮ್ಮದನ ಬಳಿಗೆ ಯಾಚನೆಗೆ ಬಂದಾಗ ಮುಹಮ್ಮದನು, "ನಿನಗೆ ಏನೂ ಗತಿಯಿಲ್ಲವೆ? ನಿನ್ನಲ್ಲಿ ಯಾವ ವಸ್ತುವೂ ಇಲ್ಲವೆ?" ಎಂದು ಕೇಳಲು, ಅವನ ಮನೆಯಲ್ಲಿ ಒಂದು ಪಾತ್ರೆಯೂ ಒಂದು ಹಾಸಿಗೆಯೂ ಇದ್ದುದು ತಿಳಿಯಬಂದಿತು. ಮುಹಮ್ಮದನು ಅವನ್ನು ತರಿಸಿ ಹೆಚ್ಚು ಬೆಲೆಗೆ ಅವನ್ನು ಕೊಂಡುಕೊಂಡು ಆ ಬಡವನಿಗೆ ಸಹಾಯ ಮಾಡುವಂತೆ ತನ್ನ ಬಳಿಯಲ್ಲಿದ್ದವರನ್ನು ಕೇಳಿಕೊಂಡನು. ಆ ಸಾಮಾನುಗಳ ಬೆಲೆಯು ನಾಲ್ಕೈದರಷ್ಟು ಮೊತ್ತಕ್ಕೆ ಅವನ್ನು ಹರಾಜು ಮಾಡಿ ಮುಹಮ್ಮದನು ಆ ಹಣವನ್ನು ಆ ಭಿಕ್ಷುಕನ ಕೈಯಲ್ಲಿಟ್ಟು, "ಈ ಹಣದಲ್ಲಿ ಸ್ವಲ್ಪವನ್ನು ಉಪಯೋಗಿಸಿಕೊಂಡು ಆಹಾರ ವಸ್ತುಗಳನ್ನು ಕೊಂಡುಕೊ; ಉಳಿದು ದರಲ್ಲಿ ದೊಡ್ಡದೊಂದು ಹಗ್ಗವನ್ನು ಕೊಂಡುಕೊಂಡು, ಕಾಡಿನಿಂದ ಸೌದೆಯ ಹೊರೆಯನ್ನು ಹೊತ್ತು ತಂದು ಮಾರು; ಈ ವ್ಯಾಪಾರದಲ್ಲಿ

ಬಂದ ಹಣದಿಂದ ಮಾನವಾಗಿ ಜೀವನಮಾಡು; ಯಾಚನಾ ವೃತ್ತಿಗಿಂತಲೂ ಇದು ಎಷ್ಟೋ ಮೇಲಾದುದು'' ಎಂದು ಬುದ್ಧಿವಾದವನ್ನು ಹೇಳಿ ಕಳುಹಿಸಿದನು. ಅವನು ಅದರಂತೆಯೇ ನಡೆದು, ಕಾಲಕ್ರಮದಲ್ಲಿ ತಾನೇ ಇತರರಿಗೆ ಸಹಾಯ ಮಾಡುವ ಸ್ಥಿತಿಗೆ ಬಂದನು. ಮತ್ತೊಂದು ಸಮಯದಲ್ಲಿ, ಆಗ ತಾನೆ ಇಸ್ಲಾಂ ಮತಕ್ಕೆ ಸೇರಿದ್ದ ಮನುಷ್ಯನೊಬ್ಬನು ಮುಹಮ್ಮದನ ಬಳಿಗೆ ಯಾಚನೆಗೆ ಬಂದು ಸಹಾಯ ಪಡೆದು ಹೊರಟು ಹೋದನು; ಕೆಲವು ದಿನಗಳು ಕಳೆದ ಮೇಲೆ ಮರಳಿ ಬಂದು ಯಾಚಿಸಲು, ಆಗಲೂ ಮುಹಮ್ಮದನು ಅವನಿಗೆ ಸಹಾಯ ಮಾಡಿದನು. ತಾನು ಇಸ್ಲಾಂ ಮತಕ್ಕೆ ಸೇರಿದುದೇ ಮುಹಮ್ಮದನಿಗೆ ಮಹದುಪಕಾರವೆಂದು ಆ ಭಿಕ್ಷುಕನು ಭಾವಿಸಿದ್ದನೋ ಏನೋ! ಮರಳಿ ಮೂರನೆಯ ಸಾರಿ ಅವನು ಭಿಕ್ಷೆ ಬೇಡುವುದಕ್ಕೆ ಬರಲು, ದೃಢಾಂಗನಾಗಿದ್ದ ಆ ಮನುಷ್ಯನನ್ನು ನೋಡಿ ಮುಹಮ್ಮದನು, ''ಅಯ್ಯಾ! ಕೊಡುವವನ ಕೈ ಮೇಲಿರುತ್ತದೆ, ಕೇಳುವವನ ಕೈ ಕೆಳಗಿರುತ್ತದೆ. ದೀನನಾಗಿ ಬೇಡುವವನು ದಾನಿಯಾಗಿ ನೀಡುವವನಿಗಿಂತಲೂ ಎಂದಿದ್ದರೂ ಕೀಳಾದವನೇ; ಇದನ್ನು ನೀನು ಚೆನ್ನಾಗಿ ಗ್ರಹಿಸಯ್ಯಾ! ಹಣ ಕೊಡಲಾರದೆ ನಾನು ನಿನಗೆ ಹೀಗೆ ಹೇಳುತ್ತಿರುವೆನೆಂದು ಭಾವಿಸಬೇಡ; ನಿನಗೆ ವಿವೇಕವು ಬರಲೆಂಬ ಆಸೆಯಿಂದ ನಾನು ಹೀಗೆ ಹೇಳುತ್ತಿದ್ದೇನೆ'' ಎಂದು ಉಪದೇಶಿಸಿ ಅವನನ್ನು ಯಾಚಕ ವೃತ್ತಿಯಿಂದ ಬಿಡಿಸಿದನಂತೆ. ಅಶಕ್ತರಾದವರೂ ಆಪತ್ತಿಗೆ ಸಿಕ್ಕಿ ನಿರ್ಗತಿಕರಾದವರೂ ಮಾತ್ರವೇ ಭಿಕ್ಷೆ ಬೇಡಬಹುದಲ್ಲದೆ ದೃಢಾಂಗರಾಗಿರುವವರು ಎಂದಿಗೂ ಬೇಡಬಾರದೆಂಬುದು ಮುಹಮ್ಮದನ ಅಭಿಪ್ರಾಯವು.

ರಾಜಭೋಗವನ್ನನುಭವಿಸುವ ಸಾಧನಗಳಿದ್ದೂ ಬಡತನಕ್ಕೆ ಆಮಂತ್ರಣ ಕೊಟ್ಟು ಕುಟೀರ ವಾಸಿಯಾದ ಮುಹಮ್ಮದನ ನಿಸ್ಪೃಹತೆಯು ಎಷ್ಟು ಮಹತ್ತಮವಾದುದೆಂಬುದನ್ನು ಹತ್ತು ಬಾಯಿಗಳಿಂದ ಹೊಗಳಿದರೂ ಸಾಲದು.

**ನಿಸ್ಪೃಹತೆ**

ಯಾವುದಾದರೂ ವಸ್ತುವನ್ನು ಮತ್ತೊಬ್ಬನಿಂದ ಉಚಿತವಾಗಿ ಪಡೆದು ಹಂಗಿನ ಹೊರೆಯನ್ನು ಹೊತ್ತು ಜೀವಿಸುವುದು

ಮಾತ್ರ ಮುಹಮ್ಮದನಿಗೆ ಎಂದಿಗೂ ಒಪ್ಪಿಗೆಯಾಗುತ್ತಿರಲಿಲ್ಲ. ಇದಕ್ಕೆ ಒಂದೆರಡು ನಿದರ್ಶನಗಳನ್ನು ಕೊಡುವೆವು: ಮುಹಮ್ಮದನಿಗೆ ಪರಮಾಪ್ತನಾದ ಅಬೂಬಕರನು ಮುಹಮ್ಮದನಿಗಾಗಿ ತನ್ನ ಪ್ರಾಣವನ್ನು ಕೊಡುವುದಕ್ಕೂ ಹಿಂದುಮುಂದು ನೋಡದೆ ಸಿದ್ಧವಾಗಿದ್ದವನು. ಈತನೂ ಮುಹಮ್ಮದನೂ ಮಕ್ಕಾ ನಗರದಿಂದ ತಲೆ ತಪ್ಪಿಸಿಕೊಂಡು ಓಡಿಬಂದಾಗ ಅಬೂಬಕರನು ಮುಹಮ್ಮದನಿಗೆ ಪ್ರಯಾಣಕ್ಕಾಗಿ ತನ್ನ ಒಂಟೆಯೊಂದನ್ನು ಕೊಟ್ಟನು. ಆ ಒಂಟೆಯನ್ನು ಕಾಣಿಕೆಯಾಗಿ ಕೊಟ್ಟಿರುವೆನೆಂದು ಅಬೂಬಕರನು ಎಷ್ಟು ಹೇಳಿದರೂ ಕೇಳದೆ ಮುಹಮ್ಮದನು ಅದರ ಬೆಲೆಯನ್ನು ಕೊಟ್ಟು ತನ್ನ ಸಾಲದ ಹೊರೆಯನ್ನು ಇಳಿಸಿಕೊಂಡನು. ಮದೀನಾ ನಗರದಲ್ಲಿ ಒಂದು ಮಸೀದಿಯನ್ನು ಕಟ್ಟಿದರಷ್ಟೆ! ಅದರ ನಿವೇಶನವನ್ನು ಉಚಿತವಾಗೊಪ್ಪಿಸಿ, ಆ ಮೂಲಕ ಗುರುಸೇವೆ ಮಾಡಲು ಆ ಸ್ವತ್ತಿನ ಯಜಮಾನನು ಬಯಸಿದನು. ಮುಹಮ್ಮದನು ಅದಕ್ಕೊಪ್ಪದೆ, ನಿವೇಶನದ ಬೆಲೆಯನ್ನು ಸಲ್ಲಿಸುವ ವರೆಗೂ ನೆಲಕ್ಕೆ ಗುದ್ದಲಿಯನ್ನು ಹಾಕಿಸಲಿಲ್ಲ. ಒಮ್ಮೆ, ಓಮರನೂ ಅವನ ಮಗನೂ ಮುಹಮ್ಮದನೂ ಒಂಟೆಗಳ ಮೇಲೆ ಕುಳಿತು ಪ್ರಯಾಣ ಹೊರಟಾಗ, ಮುಹಮ್ಮದನ ಒಂಟೆಯನ್ನು ಮುಂದೆ ಬಿಟ್ಟು ತಾವಿಬ್ಬರೂ ಹಿಂದೆ ಹೋಗಬೇಕೆಂದು ತಂದೆ ಮಕ್ಕಳಿಬ್ಬರೂ ಅಪೇಕ್ಷಿಸಪಟ್ಟರು. ಓಮರನ ಮಗನು ಕುಳಿತಿದ್ದ ಒಂಟೆಯು ಮುಹಮ್ಮದನ ಒಂಟೆಗೆ ಆ ಗೌರವವನ್ನು ಬಿಟ್ಟುಕೊಡಲು ಒಪ್ಪದೆ ಹೋಯಿತೋ ಏನೋ ಎಂದು ತೋರುವಂತೆ ಮುಂದೆ ಹೊರಟಿತು. ಆತನು ತನ್ನ ಒಂಟೆಯ ಮೂಗಿನ ಹಗ್ಗವನ್ನು ಎಷ್ಟು ಎಳೆದರೂ ಒಂಟೆಯು ಹಿಂದಕ್ಕೆ ಬಾರದೆ ಹೋಯಿತು. ಇದನ್ನು ಕಂಡು ಓಮರನು ಅಸಮಾಧಾನ ಹೊಂದಿ, ಒಂಟೆಯ ತಪ್ಪಿಗಾಗಿ ಮಗನನ್ನು ಗದರಿಸಿದನು. ಮುಹಮ್ಮದನು ನಸು ನಕ್ಕು, "ನಿರಪರಾಧಿಯಾದ ಅವನನ್ನೇಕೆ ಬಯ್ಯುವೆ ? ಆ ಒಂಟೆಯನ್ನೇ ನನಗೆ ಕೊಟ್ಟುಬಿಡು" ಎಂದನು. ಓಮರನು ಬಹಳ ಸಂತೋಷಪಟ್ಟು, ಆ ಒಂಟೆಯನ್ನು ಕಾಣಿಕೆಯಾಗಿ ಸ್ವೀಕರಿಸಿ ತನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಮುಹಮ್ಮದನನ್ನು ಬೇಡಿಕೊಂಡನು. ಮುಹಮ್ಮದನು ಅದಕ್ಕೊಪ್ಪದೆ ಬೆಲೆ ಕೊಟ್ಟು ಆ ತುಂಟ

ಒಂಟೆಯನ್ನು ತೆಗೆದುಕೊಂಡು ಓಮರನ ಮಗನೊಡನೆ, "ನೋಡಯ್ಯಾ! ನಿಮ್ಮ ತಂದೆಯ ಸ್ವತ್ತಾಗಿದ್ದ ಒಂಟೆಯನ್ನು ನಾನು ಬೆಲೆಗೆ ತೆಗೆದು ಕೊಂಡೆನು; ಇಗೋ ! ಅದನ್ನು ಈಗ ನಿನಗೆ ಕೊಟ್ಟಿದ್ದೇನೆ, ತೆಗೆದುಕೊ. ಇನ್ನು ನಿಮ್ಮ ತಂದೆಯ ಕೈ ನಡೆಯುವಂತಿಲ್ಲ; ನಿನ್ನ ಒಂಟೆಯೇ ಮುಂದೆ ನಡೆಯಲಿ" ಎಂದು ಹೇಳಿ ಅವರನ್ನು ಸಂತೋಷಪಡಿಸಿದನಂತೆ.

ಮುಹಮ್ಮದನು ನಿಸ್ಪೃಹನೆಂದ ಮಾತ್ರಕ್ಕೇ, ಪಾರಿತೋಷಿಕಗಳನ್ನು ಕೊಡುವುದು, ಇತರರು ಆದರದಿಂದೊಪ್ಪಿಸಿದ ವಸ್ತುಗಳನ್ನು ಸ್ವೀಕರಿಸುವುದು—ಇವೇ ಮುಂತಾದ ಸಭ್ಯ ಸಂಪ್ರದಾಯಗಳಿಗೆ ಅನಾದರವುಳ್ಳವನಾಗಿದ್ದನೆಂದು ಅಭಿಪ್ರಾಯವಲ್ಲ. ಮಿತ್ರರು ಸಂತೋಷದಿಂದೊಪ್ಪಿಸಿದ ವಸ್ತುಗಳನ್ನು ಸ್ವೀಕರಿಸುವುದು ಅವಶ್ಯ ಕರ್ತವ್ಯವೆಂದೂ, ಅದರಿಂದ ಪರಸ್ಪರ ಮೈತ್ರಿಯು ಹೆಚ್ಚುವುದೆಂದೂ ಅವನು ಪದೇ ಪದೇ ಹೇಳುತ್ತಲೇ ಇದ್ದನು. ಆದರೆ, ಇತರರು ಕೊಟ್ಟ ವಸ್ತುಗಳನ್ನು ಸ್ವೀಕರಿಸಿದ ಮೇಲೆ ಸಮಯವರಿತು ಅವರಿಗೂ ಅದಕ್ಕನುಗುಣವಾಗಿ ಕೊಟ್ಟು ಮಿತ್ರಧರ್ಮವನ್ನುಳಿಸಿಕೊಳ್ಳುವುದು ಮುಹಮ್ಮದನು ಅನುಸರಿಸುತ್ತಿದ್ದ ನಿಯಮವಾಗಿದ್ದಿತು. ಒಂದು ಬಾರಿ ರೋಮನ್ ಚಕ್ರವರ್ತಿಯು ಬಹಳ ಹಸನಾದ ಬನಾತಿನ ಅಂಗಿಯನ್ನು ಮುಹಮ್ಮದನಿಗೆ ಕಾಣಿಕೆಯಾಗಿ ಕಳುಹಿಸಿದನು. ಮುಹಮ್ಮದನು ಅದನ್ನು ಸ್ವಲ್ಪ ಕಾಲ ಧರಿಸಿದ್ದು, ಅಷ್ಟು ಬೆಲೆಯುಳ್ಳ ಅಂಗಿಯು ತನಗೇಕೆಂದು ಬಗೆದು, ಅದನ್ನು ಅಲೀಯ ಸಹೋದರನಾದ ಜಫಾರ್ ಎಂಬವನಿಗೆ ಕೊಟ್ಟುಬಿಟ್ಟನು. ಮತ್ತೊಬ್ಬ ದೊರೆಯು ಮುಹಮ್ಮದನಿಗೆ ಅರವತ್ತಾರು ಒಂಟೆಗಳನ್ನು ಕಾಣಿಕೆಯಾಗೊಪ್ಪಿಸಿದನು. ಇದಕ್ಕೆ ಪ್ರತಿಯಾಗಿ ಮುಹಮ್ಮದನು ಅಮೂಲ್ಯವಾದ ಅಂಗಿಯೊಂದನ್ನು ಆ ದೊರೆಗೆ ಉಡುಗೊರೆಯಾಗಿ ಕಳುಹಿಸಿಕೊಟ್ಟನು.

ಮುಹಮ್ಮದನು ಅನೇಕ ಪತ್ನಿಯರನ್ನು ವರಿಸಿದ್ದನು. ಇದರಲ್ಲಿ ಮುಹಮ್ಮದನ ಆಶಯವು ಉದಾತ್ತವಾಗಿಯೇ ಇದ್ದಿತೆಂದೂ, ಸ್ವಲ್ಪವೂ ಆಕ್ಷೇಪಣೆಗೊಳಗಾಗತಕ್ಕುದಲ್ಲವೆಂದೂ ಕೆಲವು ಮಂದಿ ಲೇಖಕರು ಸಮಾಧಾನ ಹೇಳಿದ್ದಾರೆ. ಮತ್ತೆ ಕೆಲವರು, ಬಹುಪತ್ನೀತ್ವವು ಮುಹಮ್ಮದನಲ್ಲಿದ್ದ

ಬಹುಪತ್ನೀತ್ವದ ವಿಚಾರ

ದೊಡ್ಡದೊಂದು ದೋಷವೆಂದು ತೋರುವಂತೆ ಬರೆದಿದ್ದಾರೆ. ಇನ್ನೂ ಕೆಲವರು ಲೇಖಕರು, ಆಗಿನ ಕಾಲದ ರೀತಿ ನೀತಿಗಳನ್ನೂ ಆವಶ್ಯಕತೆಗಳನ್ನೂ ನೋಡಿದರೆ, ಅದು ದೋಷವೆಂದು ಹೇಳುವುದು ಅಸಂಗತವೆಂದು ಅಭಿಪ್ರಾಯಪಟ್ಟಿದ್ದಾರೆ. ಮುಹಮ್ಮದನು ತನ್ನ ಐವತ್ತೆರಡನೆಯ ವಯಸ್ಸಿನವರೆಗೂ ಖದೀಜಳೊಡನೆ ಪ್ರೀತಿಯಿಂದ ಸಂಸಾರ ಮಾಡಿಕೊಂಡಿದ್ದುದೂ; ಆಕೆಯ ಜೀವಿತ ಕಾಲದಲ್ಲಿ, ಬಹುಪತ್ನೀತ್ವವು ರೂಢಿಯಲ್ಲಿದ್ದರೂ,ಮುಹಮ್ಮದನು ಮತ್ತಾರನ್ನೂ ಮದುವೆಯಾಗದೆ ಇದ್ದುದೂ; ಖದೀಜಳ ಮರಣಾನಂತರ, ಅಬೂಬಕರನ ಪ್ರಾರ್ಥನೆಯಂತೆ, ಆತನ ಮಗಳಾದ ಆಯಿಷೆಯನ್ನು ವರಿಸಿದುದೂ; ಮುಹಮ್ಮದೀಯರು ಯುದ್ಧದಲ್ಲಿ ಮಡಿಯುತ್ತ ಬಂದಹಾಗೆಲ್ಲ ಅನಾಥೆಯರಾದ ವಿಧವೆಯರ ಸಂಖ್ಯೆಯು ಹೆಚ್ಚುತ್ತಹೋದುದರಿಂದ, ನಿರ್ವಾಹವಿಲ್ಲದೆ ಪುರುಷರು ಹೆಚ್ಚು ಮಂದಿ ಹೆಂಡಿತಿಯರನ್ನು ವರಿಸಿ ಅವರ ಪೋಷಣೆಯ ಭಾರವನ್ನು ವಹಿಸಬೇಕಾಗಿ ಬಂದುದೂ; ಮುಹಮ್ಮದನು ಈ ಕಾರಣದಿಂದ ಬಹುಪತ್ನೀತ್ವಕ್ಕೆ ಸಮ್ಮತಿಸಿ ಸೌದಾ, ಹಫ್ಸಾ ಎಂಬಿಬ್ಬರು ವಿತಂತುಗಳನ್ನು ವಿವಾಹವಾದುದೂ; ರಾಜಕೀಯ ಕಾರಣದ ಸಂಬಂಧದಿಂದ ಜುವೇರಿಯಾ ಮತ್ತು ಸಫಿಯಾ ಎಂಬ ಯೆಹೂದ್ಯ ಸ್ತ್ರೀಯರನ್ನೂ, ಮೇರಿಯೆಂಬ ಕ್ರೈಸ್ತ ಸ್ತ್ರೀಯನ್ನೂ ನಿರ್ವಾಹವಿಲ್ಲದೆ ಮದುವೆಯಾದುದೂ; ತನ್ನ ಪತ್ನಿಯರನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರೂ, ತನಗೆ ಪ್ರಭುಪದವಿಯೇ ದೊರೆತು ರಾಷ್ಟ್ರದ ಭಂಡಾರವೇ ತನ್ನ ಸ್ವಾಧೀನದಲ್ಲಿದ್ದರೂ, ತನ್ನ ಪತ್ನಿಯರ ಭೋಗಲಾಲಸೆಗೆ ಅವಕಾಶ ಕೊಡದೆ ಬಡತನದಲ್ಲಿಯೇ ಅವರು ಕಾಲ ಕಳೆಯುವಂತೆ ಕಟ್ಟುಮಾಡಿದ್ದುದೂ; ಯುದ್ಧಗಳಲ್ಲಿ ಕೊಳ್ಳೆ ಹೊಡೆದ ಸಾಮಗ್ರಿಗಳಿಂದ ತನ್ನ ಅನುಯಾಯಿಗಳೆಲ್ಲರೂ ಧನಿಕರಾಗುವಂತೆ ಮಾಡಿ, ತಾನು ಮಾತ್ರ ದರಿದ್ರನಾಗಿಯೇ ಇದ್ದುದೂ; ರಾಜಭೋಗವು ಕರಗತವಾಗಿದ್ದರೂ, ತಾನೂ ತನ್ನ ಪತ್ನಿಯರೂ ಖರ್ಜೂರದ ಚಾಪೆಗಳನ್ನೂ, ಮಣ್ಣಿನ ಹೂಜಿಗಳನ್ನೂ ಉಪಯೋಗಿಸುತ್ತಿದ್ದುದೂ; ತನ್ನ ಸೇವೆಯ ಫಲವಾಗಿ ದೊರೆತ ಅನುಕೂಲ್ಯಗಳ ದೆಸೆಯಿಂದ ತನ್ನ ಅನುಯಾಯಿಗಳೆಲ್ಲರೂ ಭೋಗರತರಾಗಿ

ಸುಖಜೀವಿಗಳಾಗಿದ್ದರೂ ತನ್ನ ಜೀವನವಿಧಾನವನ್ನು ಮಾರ್ಪಡಿಸಲೊಲ್ಲದೆ, ಖದೀಜಳ ವಿವಾಹಕ್ಕೆ ಮುಂಚಿತವಾಗಿ ತಾನು ಯಾವ ರೀತಿಯಲ್ಲಿದ್ದನೋ ಅದೇ ರೀತಿಯಲ್ಲಿ ಆಜೀವವೂ ದಾರಿದ್ರ್ಯಾವಸ್ಥೆಯಲ್ಲಿದ್ದುದೂ; ಒಮ್ಮೆ ತನ್ನ ಪತ್ನಿಯರೆಲ್ಲರೂ ತನ್ನ ಬಳಿಗೆ ಬಂದು ತಮ್ಮ ಅಂತಸ್ತಿಗೆ ತಕ್ಕಂತೆ ತಮ್ಮನ್ನು ವೈಭವದಿಂದಿಡಬೇಕೆಂದು ಪ್ರಾರ್ಥಿಸಿದಾಗ, ತನಗೆ ಅವರಲ್ಲಿ ಅತ್ಯಂತ ಪ್ರೀತಿಯಿದ್ದರೂ, "ನೀವು ಐಹಿಕ ಸುಖಕ್ಕೆ ಮುಗ್ಧರಾಗಿ ಪರಲೋಕ ಸುಖವನ್ನು ಕಳೆದುಕೊಳ್ಳುವ ಯೋಚನೆಯನ್ನು ಮಾಡಬಹುದೆ? ಐಹಿಕ ಭೋಗದಲ್ಲಿ ಮಗ್ನರಾಗುವುದೂ, ಮಹಮ್ಮದನ ಸಹಧರ್ಮಿಣಿಯರಾಗಿರುವುದೂ ಏಕ ಕಾಲದಲ್ಲಿ ಸಾಧ್ಯವಲ್ಲ. ನೀವು ಸುಖಾನುಭವಕ್ಕೆ ಆಶಿಸುವುದಾದರೆ, ನಾನು ಅದಕ್ಕೂ ಏರ್ಪಾಡು ಮಾಡಿಕೊಡುತ್ತೇನೆ; ಆದರೆ, ಆಗ ಮಾತ್ರ ನೀವು ನನ್ನ ಪತ್ನಿಯರೆನಿಸಿಕೊಂಡು ನನ್ನೊಡನೆ ಈ ಮನೆಯಲ್ಲಿರುವ ಹಾಗಿಲ್ಲ. ನಿಮಗೆ ಹೇಗೆ ಸೂಕ್ತತೋರಿದರೆ ಹಾಗೆ ನಡೆಯಿರಿ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿದುದೂ; ವಿಷಯೋಪಭೋಗವೇ ಗುರಿಯಾಗಿದ್ದು, ಅವನು ಅನೇಕ ಮಂದಿ ಸ್ತ್ರೀಯರನ್ನು ವರಿಸಿದ್ದ ಪಕ್ಷಕ್ಕೆ ಎಂದಿಗೂ ಹೀಗೆ ಹೇಳದೆ ಆಡಂಬರದ ಜೀವನಕ್ಕೆ ಕೈಹಾಕಿ ಸುಖಲೋಲನಾಗಿರುತ್ತಿದ್ದನೆಂಬುದೂ; ಇವೇ ಮೊದಲಾದ ಕಾರಣಗಳನ್ನು ತಿಳಿಸಿ, ಆ ಲೇಖಕರೆಲ್ಲರೂ ಮಹಮ್ಮದನ ವಿಷಯದಲ್ಲಿ ಬಹುಪತ್ನೀತ್ವವು ಅಸಾಧುವಲ್ಲವೆಂದು ಸಿದ್ಧಾಂತ ಮಾಡಿದ್ದಾರೆ. ಬಹುಪತ್ನೀತ್ವವು ಮಹಮ್ಮದನಲ್ಲಿದ್ದ ಪ್ರಬಲವಾದೊಂದು ದೋಷವೆಂದು ಪರಿಗಣಿಸುವವರೂ ಕೂಡ, ಆತನಲ್ಲಿದ್ದ ಅಮೋಘವಾದ ಸದ್ಗುಣಗಳನ್ನು ಅಭಿನಂದಿಸಲೇ ಬೇಕು; ಅರಬ್ಬಿಯವರ ಉದ್ಧಾರಕ್ಕಾಗಿ ಭಗವಂತನ ಅನುಗ್ರಹದಿಂದ ಮಹಮ್ಮದನು ಜನ್ಮಗ್ರಹಣ ಮಾಡಿದನೆಂಬುದನ್ನು ಅವರೆಲ್ಲರೂ ಒಪ್ಪಲೇ ಬೇಕು; ಜಗತ್ಕಲ್ಯಾಣಕ್ಕೋಸುಗ ಅವತರಿಸಿದ ಪುರುಷ ಶ್ರೇಷ್ಠರಲ್ಲಿ ಮಹಮ್ಮದನೂ ಒಬ್ಬನೆಂಬುದಕ್ಕೆ ಅವರೆಲ್ಲರೂ ಸಮ್ಮತಿಸಲೇ ಬೇಕು.

# ಹದಿನಾಲ್ಕನೆಯ ಅಧ್ಯಾಯ

## ಪರ ಲೋಕ ಯಾತ್ರೆ

ಮತ್ತೊಮ್ಮೆ ಮಕ್ಕಾ ಯಾತ್ರೆ

ಕ್ರಿ. ಶ. ೬೩೨ನೆಯ ಸಂವತ್ಸರವು ಆರಂಭವಾಗುವ ವೇಳೆಗೆ ಅರಬ್ಬೀ ದೇಶದಲ್ಲೆಲ್ಲ ಮುಹಮ್ಮದನ ಪ್ರಾಬಲ್ಯವು ರೂಢ ಮೂಲವಾಗಿ ನೆಲೆಗೊಂಡು ಅವನ ಜೀವನದ ಮುಖ್ಯೋದ್ದೇಶವು ಪೂರ್ಣವಾಗಿ ನೆರವೇರಿದ್ದಿತು. ಆ ಸಂವತ್ಸರದಲ್ಲಿ ಮುಹಮ್ಮದನು ಮಕ್ಕಾ ಯಾತ್ರೆಗೆ ಹೊರಟನು; ಅದೇ ಅವನ ಕೊನೆಯ ಮಹಾ ಯಾತ್ರೆ. ಕ್ರಿ. ಶ. ೬೩೨ನೆಯ ಫೆಬ್ರವರಿ ೨೩ನೆಯ ತಾರೀಖು ಅವನು ಪ್ರಯಾಣ ಹೊರಟ ಶುಭ ದಿವಸ. ಏನು ವೈಭವ ! ಎಷ್ಟು ಸಂಭ್ರಮ ! ಅರಬ್ಬೀ ದೇಶದ ಮೂಲೆ ಮೂಲೆಗಳಿಂದಲೂ ಜನರು ತಮ್ಮ ಗುರುವಿನೊಡನೆ ಮಕ್ಕಾ ಯಾತ್ರೆ ಮಾಡಿ ಧನ್ಯರಾಗಲು ಉತ್ಸುಕರಾಗಿ ಓಡಿಬಂದು ತಂಡೋಪತಂಡ ವಾಗಿ ನೆರೆದರು ; ಒಂದು ಲಕ್ಷದ ಇಪ್ಪತ್ತ ನಾಲ್ಕು ಸಾವಿರ ಮಂದಿ ಶಿಷ್ಯರ ನೆರವಿಯು ಸೇರಿತು. ಅವರ "ಅಲ್ಲಾ-ಹೊ-ಅಕ್ಬರ್" ಎಂಬ ಧ್ವನಿಯಿಂದ ದಶ ದಿಕ್ಕುಗಳೂ ಮೊಳಗಿ ಪ್ರತಿಧ್ವನಿತವಾದುವು. ಯಾವ ಮಕ್ಕಾ ನಗರವನ್ನು ಬಿಟ್ಟು ಪ್ರಾಣ ಭಯದಿಂದ ಮುಹಮ್ಮದನು ಒಮ್ಮೆ ಪಲಾಯನ ಮಾಡಿದ್ದನೋ, ಅದೇ ಮಕ್ಕಾ ನಗರವು ಈಗ ಅವನ ಶಿಷ್ಯ ಮಂಡಲಿಯಿಂದ ತುಂಬಿ ಕಿಕ್ಕಿರಿಯುವಂತಾಯಿತು. ಯಾವ ಮಕ್ಕಾ ನಗರದಲ್ಲಿ ಮುಹಮ್ಮದನನ್ನು ನಿರ್ನಾಮಗೊಳಿಸಲು ಶತ್ರು ಪಡೆಯು ಹಿಂದೆ ಅವನನ್ನು ಹುಡುಕಾಡಿತೋ, ಅದೇ ಮಕ್ಕಾ ನಗರದಲ್ಲಿ ಈಗ ಅಸಂಖ್ಯಾತವಾದ ಮಿತ್ರ ಮಂಡಲಿಯು ನೆರೆದು, ಅವನ ದರ್ಶನದಿಂದ ಪಾವನತೆಯನ್ನು ಹೊಂದಲು ಸಂಭ್ರಮದಿಂದ ಅವನನ್ನು ಹುಡುಕಾಡ ತೊಡಗಿತು. ಸತ್ಯಾತ್ಮಕನ ನೆಲೆಯನ್ನು ಗೋಚರಗೊಳಿಸುವ ಸನ್ಮಾರ್ಗ ಗಳಲ್ಲೊಂದನ್ನು ಜನತೆಗೆ ಬೋಧಿಸುವ ಉತ್ಸಾಹ ಭರದಲ್ಲಿ, ಪ್ರಾಣವನ್ನೇ ಪಣವಾಗಿಟ್ಟು ಹೋರಾಡಿ, ಪರಿಣಾಮದಲ್ಲಿ ಪೂರ್ಣ ಫಲವನ್ನು ಪಡೆದ ಮುಹಮ್ಮದನೇ ಧನ್ಯನು.

ಮುಹಮ್ಮದನು ಸಾಂಗವಾಗಿ ಯಾತ್ರೆಯನ್ನು ಪೂರೈಸಿದನು. ಕಪಟ ನಾಟಕ ಸೂತ್ರಧಾರಿಯಾದ ಪರಮಾತ್ಮನು, ಮುಹಮ್ಮದನೆಂಬ ಪಾತ್ರದ ಅವಧಿಯು ಮುಗಿಯುತ್ತ ಬಂದಿತೆಂಬ ಸೂಚನೆಯನ್ನು ಕೊಟ್ಟು, ಅವನ ಹೃದಯದ ತಂತಿಯನ್ನು ಮೀಟಿ ಎಚ್ಚರಗೊಳಿಸಿದನು. ಅವ್ಯಕ್ತ ಮಧುರವಾದ ಒಂದು ಧ್ವನಿಯು ಅವನ ಕರ್ಣಕುಹರದಲ್ಲಿ ಈ ವಾಣಿಯನ್ನು ಮೃದುತರವಾಗಿ ಹೇಳಿತು; ಪಾರ್ಥಿವ ಶರೀರದಿಂದ ತಾನು ತಿರುಗಿ ಮಕ್ಕಾ ಯಾತ್ರೆಗೆ ಬರುವಹಾಗಿಲ್ಲವೆಂಬ ಭಾವನೆಯು ಅವನ ಮನಸ್ಸಿಗೆ ಹೊಳೆಯಿತು. ತನ್ನನ್ನು ಸಂಬಿದ್ಧ ಶಿಷ್ಯವೃಂದಕ್ಕೆ ತನ್ನ ಚರಮ ಸಂದೇಶವನ್ನನುಗ್ರಹಿಸಬೇಕೆಂದು ಮುಹಮ್ಮದನು ಒಡನೆಯೇ ನಿರ್ಧರಿಸಿದನು. ೬೩೨ನೆಯ ಇಸವಿ ಮಾರ್ಚಿ ತಿಂಗಳು ೭ನೆಯ ತಾರೀಖಿನ ದಿನ ಪ್ರಶಸ್ತವಾದೊಂದು ಬಯಲಿನಲ್ಲಿ ಮುಹಮ್ಮದೀಯರ ಮಹಾಸಭೆಯೊಂದು ಸೇರಿತು. ಎಲ್ಲಿಂದ ಎಲ್ಲಿಯ ವರೆಗೆ ನೋಡಿದರೂ ತಲೆಗಳೇ ಕಾಣಿಸುತ್ತಿದ್ದುವು. ಕಲ್ಲುಗಳನ್ನು ಕೂಡ ಮಾತನಾಡಿಸುವಂತಹ ಸನ್ನಿವೇಶವದು. ಅಂದಿನ ಪ್ರಚಂಡ ಸಭೆಯನ್ನು ನೋಡಿ ಮುಹಮ್ಮದನಿಗೆ ಎಷ್ಟು ಸಂತೋಷವಾಗಿರಬೇಕು! "ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ" ಎಂಬ ಕವಿ ಕಾಳಿದಾಸನ ಉಕ್ತಿಯಂತೆ, ಫಲೋದ್ಗಮದಿಂದ ಮುಹಮ್ಮದನೂ ತನ್ನ ಕಷ್ಟಗಳನ್ನೆಲ್ಲ ಮರೆತು ಹರ್ಷಚಿತ್ತನಾಗಿ ಕೇವಲ ಉತ್ಸಾಹಿತನಾಗಿರಬೇಕು. ಆ ಸಭೆಯಲ್ಲಿ ಮುಹಮ್ಮದನು ಉನ್ನತ ಪ್ರದೇಶದಲ್ಲಿ ನಿಂತಿದ್ದರೂ ಅವನ ಸಂದೇಶವನ್ನು ಎಲ್ಲರೂ ಕೇಳುವಂತೆ ಹೇಳುವುದು ಅಸಾಧ್ಯವೆನಿಸಿತು. ಆದಕಾರಣ, ಅಲ್ಲಿಗಲ್ಲಿಗೆ ಒಬ್ಬೊಬ್ಬ ಶಿಷ್ಯನನ್ನು ನಿಲ್ಲಿಸಿ, ಮುಹಮ್ಮದನು ಒಂದು ವಾಕ್ಯವನ್ನು ಪೂರೈಸಿದೊಡನೆಯೇ ಮೊದಲನೆಯ ಶಿಷ್ಯನು ಅದನ್ನು ಹೇಳುವಂತೆಯೂ, ಆ ಬಳಿಕ ದೂರದಲ್ಲಿರುವ ಇತರ ಶಿಷ್ಯರೂ ಒಬ್ಬೊಬ್ಬರಾಗಿ ಅದನ್ನು ಹೇಳುವಂತೆಯೂ ವ್ಯವಸ್ಥೆ ಮಾಡಿದನು. ಗುರುವಿನ ಉಪದೇಶಾಮೃತವನ್ನು ಸವಿದು ಆನಂದ ಪರವಶರಾಗಿ ಶಿಷ್ಯಕೋಟಿಯೆಲ್ಲವೂ ಚಿತ್ರದ ಬೊಂಬೆಗಳಂತೆ ಕುಳಿತಿದ್ದಿತು. ಮುಹಮ್ಮದನು ಅಂದು ಅನುಗ್ರಹಿ

ಚರಮ ಸಂದೇಶ

ಸಿದ ಸ್ಫೂರ್ತಿದಾಯಕವಾದ ಕೆಲವು ವಾಕ್ಯಗಳನ್ನು ಇಲ್ಲಿ ಹೇಳ ಲಾಗುವುದು:—

"ಓ ನನ್ನ ಪ್ರಿಯ ಬಾಂಧವರಿರಾ! ಇನ್ನು ಮುಂದೆ ನಿಮ್ಮನ್ನು ಇಲ್ಲಿ ಕಾಣುವ ಭಾಗ್ಯವು ನನಗೆ ದೊರೆಯುವುದೋ ಇಲ್ಲವೋ ತಿಳಿಯದು. ಆಲೋಚಿಸಿ ನೋಡಿದರೆ, ನಾನು ಮತ್ತೊಂದು ವರುಷ ಕಾಲ ಬದುಕಿದ್ದು ಇಲ್ಲಿಗೆ ಬರುವ ಸಂಭವವಿರುವಂತೆ ತೋರುವುದಿಲ್ಲ. ಆದುದರಿಂದ ನನ್ನ ವಚನಗಳನ್ನು ತಾಳ್ಮೆಯಿಂದ ಮನಸ್ಸಿಟ್ಟು ಕೇಳಿರಿ; ಅಲ್ಲದೆ, ನೀವು ಇಂದು ಕೇಳಿದುದನ್ನು ಈಗ ಇಲ್ಲಿಗೆ ಬಾರದೆ ಇರುವ ಇತರರಿಗೂ ತಿಳಿಸಿರಿ. ನಾವು ನಮ್ಮ ಯಾತ್ರೆಯನ್ನು ಪೂರೈಸಿರುವ ಇಂದಿನ ದಿನವೇ ಶುಭ ದಿನ. ನಾವು ಸೇರಿರುವ ಈ ಕ್ಷೇತ್ರವು ಪರಮ ಪವಿತ್ರವಾದುದು. ಈ ಮಹಾ ಯಾತ್ರೆಯಂತೆಯೇ ನಮ್ಮ ಜೀವನ ಯಾತ್ರೆಯೂ ಪವಿತ್ರವಾದುದೇ ಸರಿ. ನೀವೆಲ್ಲರೂ ಒಂದು ದಿನ ಭಗವಂತನ ಮುಂದೆ ವಿಚಾರಣೆಗೆ ನಿಂತು ನಿಮ್ಮ ನಿಮ್ಮ ಕರ್ಮಗಳ ವರದಿಯನ್ನೊಪ್ಪಿಸಬೇಕಾಗುವುದೆಂಬ ಅಂಶವನ್ನು ನೆನಪಿನಲ್ಲಿಟ್ಟುಕೊಂಡು, ಅದಕ್ಕನುಗುಣವಾಗಿ ಐಹಿಕ ಜೀವನದ ಪಾರಿಶುದ್ಧ್ಯವನ್ನು ಕಾಪಾಡಿಕೊಳ್ಳುತ್ತ, ಶುಚಿರ್ಭೂತರಾಗಿ ಪರಮಾತ್ಮನಲ್ಲಿಗೆ ಪ್ರಯಾಣ ಮಾಡಿರಿ. ಪಾಪ ಕರ್ಮಗಳನ್ನು ಆಚರಿಸಬೇಡಿರಿ. ನಂಬಿದವನಲ್ಲಿ ದ್ರೋಹವನ್ನೆಣಿಸಬೇಡಿರಿ. ಒಬ್ಬರೊಡನೊಬ್ಬರು ಹೋರಾಡಿ ನರ ಹತ್ಯೆಯ ಘೋರ ಪಾತಕವನ್ನು ಕಟ್ಟಿಕೊಳ್ಳಬೇಡಿರಿ. ಎಲ್ಲರೂ ಒಕ್ಕಟ್ಟಿನಿಂದ ಕೂಡಿ ಸುಖದಿಂದ ಬಾಳಿರಿ. ನಿಮ್ಮ ಪತ್ನಿಯರ ಮೇಲೆ ನಿಮಗೆ ಕೆಲವು ಹಕ್ಕು ಬಾಧ್ಯತೆಗಳುಂಟು; ಹಾಗೆಯೇ ಅವರಿಗೂ ನಿಮ್ಮ ಮೇಲೆ ಕೆಲವು ಹಕ್ಕು ಬಾಧ್ಯತೆಗಳಿರುವುವು. ಆದ ಕಾರಣ ಅವರನ್ನು ನೀವು ಪ್ರೀತಿಯಿಂದ ನೋಡಿಕೊಂಡಿರಬೇಕು. ಗುರು ಹಿರಿಯರಲ್ಲಿ ಎಲ್ಲರೂ ಭಕ್ತಿಯಿಂದ ನಡೆದುಕೊಳ್ಳಬೇಕು. ನಿಮ್ಮಲ್ಲಿ ಯಾರೊಬ್ಬರೂ ಭೇದ ಭಾವಗಳಿಗೆ ಎಡೆಗೊಡಬೇಡಿರಿ. ನಿಮ್ಮ ವಶವರ್ತಿಗಳಾಗಿರುವ ಗುಲಾಮರು ನಿಮಗಿಂತಲೂ ನಿಕೃಷ್ಟರೆಂಬ ಭಾವನೆಯನ್ನು ಬಿಟ್ಟುಬಿಡಿರಿ; ನೀವು ತಿನ್ನುವಂತಹ ಆಹಾರವನ್ನೇ ಅವರಿಗೂ ಕೊಡಿರಿ, ನೀವು ಧರಿಸುವಂತಹ ಉಡುಪನ್ನೇ ಅವರಿಗೂ ಉಡಿಸಿರಿ.

"ಪ್ರಿಯ ಬಾಂಧವರಿರಾ! ಮಹಮ್ಮದೀಯರಾದ ನಾವೆಲ್ಲರೂ ಸಹೋದರರೆಂಬ ಭಾವನೆಯು ನಿಮ್ಮಲ್ಲಿ ಪ್ರತಿಯೊಬ್ಬನಿಗೂ ಇರಲಿ; ಧರ್ಮದ ಮುಂದೆ ನೀವೆಲ್ಲರೂ ಸಮಾನರು; ಎಲ್ಲರಿಗೂ ಸಮಾನವಾದ ಹಕ್ಕು ಬಾಧ್ಯತೆಗಳಿರುವುವು. ಆದಕಾರಣ, ನೀವು ಯಾರೊಬ್ಬರೂ ಇತರರ ಸ್ವತ್ತನ್ನು ಅಪಹರಿಸಲು ಬಯಸಬೇಡಿರಿ, ಇತರರ ಹಕ್ಕು ಬಾಧ್ಯತೆಗಳಿಗೆ ಲೋಪವನ್ನು ತರಬೇಡಿರಿ. ಪರ ಪೀಡನೆಯು ಮಹಾ ಪಾಪಕರವು. ನೀವೆಲ್ಲರೂ ಒಬ್ಬನೇ ಭಗವಂತನನ್ನಾರಾಧಿಸುವ ಸಹೋದರರೆಂದು ನಂಬಿ, ಪಾಪ ವಿಮುಖರಾಗಿ ಪರೋಪಕಾರ ನಿರತರಾಗಿದ್ದು ಕೃತಾರ್ಥರಾಗಬೇಕೆಂಬುದೇ ನನ್ನ ಪ್ರಾರ್ಥನೆ."

ಈ ಭಾಷಣವು ಮುಗಿದ ಕೂಡಲೆ ಮಹಮ್ಮದನು, ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ, "ಭಕ್ತವತ್ಸಲನಾದ ಓ ಭಗವಂತನೇ! ನಾನು ನಿನ್ನ ಸಂದೇಶವನ್ನು ಸಾರಿದಂತಾಯಿತೆ?" ಎಂದು ಆರ್ತ ಸ್ವರದಿಂದ ಕೂಗಿದನು. ತನ್ನ ಮುಂದೆ ನೆರೆದಿದ್ದ ಅಗಾಧವಾದ ಸಭೆಯನ್ನೂ ಅಸಂಖ್ಯಾತರಾಗಿ ಅಲ್ಲಿ ಸೇರಿದ್ದ ತನ್ನ ಶಿಷ್ಯರ ಶ್ರದ್ಧಾ ಭಕ್ತಿಗಳನ್ನೂ ನೋಡಿ, ಅನಿರ್ವಚನೀಯವಾದೊಂದು ವಿಧದ ಅಂತರಾವೇಶದಿಂದ ಕೂಡಿದವನಾಗಿ, ಮಹಮ್ಮದನು ಆರ್ತ ಸ್ವರದಲ್ಲಿ ಆ ಮಾತುಗಳನ್ನು ನುಡಿದನು. ಸಭಿಕರೆಲ್ಲರೂ ಆನಂದೋತ್ಸಾಹ ಪರವಶರಾಗಿ, "ನಿಶ್ಚಯವಾಗಿಯೂ ಭಗವಂತನ ಸಂದೇಶವನ್ನು ಸಾರಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಿರುವೆ" ಎಂದು ಹೇಳಿ ಜಯ ಘೋಷಮಾಡಿದರು. ಸಭಾ ಕಾರ್ಯವು ಅಲ್ಲಿಗೆ ಪೂರೈಸಿತು. ಮಹಮ್ಮದನು ಯಾತ್ರೆಯನ್ನು ಮುಗಿಸಿಕೊಂಡು ಯಥಾ ಕಾಲದಲ್ಲಿ ಮೆದೀನಾ ನಗರವನ್ನು ಸೇರಿದನು.

ಮಹಮ್ಮದನ ಘನತೆಯನ್ನೂ, ಜನತೆಯಲ್ಲಿ ಅವನಿಗೆ ದೊರೆಯುತ್ತಿದ್ದ ಪ್ರೀತಿ ಗೌರವಗಳನ್ನೂ ಕಂಡು ಅಸೂಯೆಪಡುವವರೂ ಕೆಲವರಿದ್ದರು. ಅವರಲ್ಲಿ ಮೊಸ್ಸೈಲಿಮನೆಂಬ ಇಂದ್ರಜಾಲಿಕನೂ ಒಬ್ಬನು. ಅವನು ತನ್ನ ಕರ ಲಾಘವ ಪ್ರಭಾವದಿಂದ ಕೆಲವು ಚಮತ್ಕಾರಗಳನ್ನು ಮಾಡಿ ತೋರಿಸಿ ಜನರನ್ನು ಬೆರಗು ಮಾಡಿ, ಅವುಗಳೆಲ್ಲ

ಅಸೂಯಾಪರನ ಔದ್ಧತ್ಯ

ಮಹಾತ್ಮನಾದ ತನ್ನ ಪವಾಡಗಳೆಂದು ಬೋಧಿಸಿ, ಮುಹಮ್ಮದನಂತೆಯೇ ತಾನೂ ಒಬ್ಬ ಮಹಾ ಪುರುಷನೆಂದು ಎಲ್ಲೆಲ್ಲಿಯೂ ಹೇಳಿಕೊಳ್ಳಲಾರಂಭಿಸಿದನು. ಕೊನೆಗೆ, ಔದ್ಧತ್ಯದ ಸೊಕ್ಕಿನಿಂದ ಅವನು ಮುಹಮ್ಮದನಿಗೆ ಹೀಗೆಂದು ಒಂದು ಕಾಗದವನ್ನು ಬರೆದನು:—"ಭಗವಂತನ ಪಕ್ಷದ ಮತಸ್ಥಾಪಕನಾದ ಮೊಸೈಲಿಮನು ಭಗವಂತನ ಪಕ್ಷದ ಮತಸ್ಥಾಪಕನಾದ ಮುಹಮ್ಮದನಿಗೆ ವಂದನೆಗಳನ್ನರ್ಪಿಸಿ ಬಿನ್ನವಿಸುವುದೇನೆಂದರೆ: ನಾನೂ ನೀನೂ ಇಬ್ಬರೂ ಪಾಲುಗಾರರು; ಅಧಿಕಾರದಲ್ಲಿ ನಾವಿಬ್ಬರೂ ಸಮ ಭಾಗಿಗಳು. ಆದುದರಿಂದ ಅದನ್ನು ನಾವಿಬ್ಬರೂ ಹಂಚಿಕೊಳ್ಳಬೇಕಾಗಿದೆ. ಭೂಭಾಗದಲ್ಲಿ ಅರ್ಧವು ನನ್ನದು, ಅರ್ಧವು ನಿನ್ನದು. ನಿನ್ನ ಅನುಯಾಯಿಗಳು ನ್ಯಾಯವಂತರಲ್ಲದ ಕಾರಣ, ನೀನು ಜೀವಂತನಾಗಿರುವಾಗಲೇ ಈ ಹಂಚಿಕೆಯು ನಡೆದುಹೋಗಬೇಕು." ಈ ಪತ್ರಿಕೆಗೆ ಮುಹಮ್ಮದನು ಮುಂದೆ ಹೇಳುವ ತಕ್ಕ ಉತ್ತರವನ್ನೇ ಕಳುಹಿಸಿದನು:— "ದಯಾಮಯನಾದ ಭಗವಂತನ ಅನುಗ್ರಹದಿಂದ ಮತಸ್ಥಾಪಕನಾಗಿರುವ ಮುಹಮ್ಮದನು ವೇಷಧಾರಿಯಾದ ಮೊಸೈಲಿಮನಿಗೆ ಮಾಡುವ ಬಿನ್ನಹವೇನೆಂದರೆ: ಸನ್ಮಾರ್ಗವನ್ನನುಸರಿಸಿ ವರ್ತಿಸುವವರು ಶಾಂತರಾಗಿ ಬಾಳುವರು. ಭೂಮಿಯು ಭಗವಂತನಿಗೆ ಸೇರಿದುದು. ತನ್ನ ಪ್ರೀತಿಗೆ ಪಾತ್ರರಾಗುವಂಥವರಿಗೆ ಭಗವಂತನು ವೈಭವವನ್ನು ಕರುಣಿಸಿ ಅಧಿಕಾರವನ್ನನುಗ್ರಹಿಸುವನು. ಅವನನ್ನು ಮರೆಹೊಕ್ಕು ಭಕ್ತಿಯಿಂದಿರುವ ಧರ್ಮಾತ್ಮರಿಗೆ ಮಾತ್ರವೇ ಮುಂದೆ ಶ್ರೇಯಸ್ಸುಂಟಾಗುವುದು."

**ರೋಗದ ಬಾಧೆ**

ಮಕ್ಕಾ ನಗರದಿಂದ ಬಂದ ಮೇಲೆ ಮುಹಮ್ಮದನು ಪರಲೋಕಯಾತ್ರೆಗೆ ಸಿದ್ಧನಾಗಿ ಮರಣವನ್ನೇ ಎದುರುನೋಡುತ್ತಿದ್ದನು. ಆದರೂ, ಪ್ರತ್ಯಹವೂ ನಿಷ್ಠೆಯಿಂದ ತನ್ನ ಕರ್ತವ್ಯವನ್ನು ನೆರವೇರಿಸುತ್ತ, ತನ್ನ ಆಡಳಿತಕ್ಕೊಳಪಟ್ಟಿದ್ದ ಪ್ರಾಂತಗಳಲ್ಲೆಲ್ಲ ಬಗೆ ಬಗೆಯ ಶಿಸ್ತುಗಳನ್ನು ಆಚರಣೆಗೆ ತಂದು ಏಕಮುಖವಾದ ಅಧಿಕಾರವನ್ನು ಉತ್ತಮ ರೀತಿಯಲ್ಲಿ ನೆಲೆಗೊಳಿಸಿದನು. ಹೀಗಿರುತ್ತಿರುವಲ್ಲಿ, ಮುಹಮ್ಮದನಿಗೆ ವ್ಯಾಧಿಯು ಪ್ರಾಪ್ತವಾಯಿತು. ಸಿರಿಯಾ ದೇಶಕ್ಕೆ ಒಂದು ಸೈನ್ಯವನ್ನು ಕಳುಹಿಸಲು ಆ ವೇಳೆಗೆ ನಿರೂಪವು

ಹುಟ್ಟಿದ್ದಿತು. ಅದಕ್ಕೆ ಉಸಾಮನೆಂಬ ತರುಣನೊಬ್ಬನನ್ನು ಸೇನಾಪತಿಯನ್ನಾಗಿ ನಿಯಮಿಸಿ ಅಬೂಬಕರ, ಓಮರ ಮುಂತಾದ ಗೌರವಸ್ಥರಾದ ಅನುಭವಶಾಲಿಗಳೆಲ್ಲರೂ ಆ ಯುವಕನ ಆಜ್ಞಾಧಾರಕರಾಗಿ ಸಾಮಾನ್ಯ ಸೈನಿಕರಂತೆ ವಿಜಯಯಾತ್ರೆ ಹೊರಡಲು ಮುಹಮ್ಮದನ ಆಜ್ಞೆಯಾಗಿದ್ದಿತು. ಮುಹಮ್ಮದನು, ಅನುಭವಸ್ಥರಾದ ವೀರಾಗ್ರಣಿಗಳು ಕೂಡ ಉತ್ಸಾಹಶಾಲಿಯಾದ ಚಿಕ್ಕ ವಯಸ್ಸಿನ ಉಸಾಮನೊಡನೆ ಸಾಮಾನ್ಯ ಸೈನಿಕರಂತೆ ಹೋಗಬೇಕೆಂದು ಅಪ್ಪಣೆಮಾಡಿದುದು ಧರ್ಮದ ಮುಂದೆ ಎಲ್ಲರೂ ಸಮಾನರೆಂಬ ತತ್ತ್ವವನ್ನು ಕಾರ್ಯಕ್ಷೇತ್ರದಲ್ಲಿ ಬೆಳಗಿಸುವುದಕ್ಕಾಗಿಯೇ. ಸ್ವಾಮಿಭಕ್ತರಾದ ಆ ವೀರಶ್ರೇಷ್ಠರು ತಮ್ಮ ಗುರುವಿನ ಹೃದಯವನ್ನರಿತಿದ್ದುದರಿಂದ ಲೇಶಮಾತ್ರವೂ ಅಸಮಾಧಾನ ಪಡದೆ ಮೊದಲಣ ಉತ್ಸಾಹದಿಂದಲೇ ವಿಜಯಯಾತ್ರೆಗೆ ಸಿದ್ಧರಾದರು. ತಾನು ರೋಗದಿಂದ ನರಳುತ್ತಿದ್ದರೂ ಮುಹಮ್ಮದನು ಯುವಕ ದಳಪತಿಯ ಕೈಗೆ ತನ್ನ ಕೈಯಿಂದಲೇ ಧ್ವಜಪತಾಕೆಗಳನ್ನೊಪ್ಪಿಸಿ ಹರಸಿ ಕಳುಹಿಸಿದನು. ಸೈನ್ಯವು ಪ್ರಯಾಣ ಹೊರಡುವಷ್ಟರಲ್ಲಿಯೇ ಮುಹಮ್ಮದನ ರೋಗವು ಹೆಚ್ಚಿದುದರಿಂದ, ಆ ವಿಜಯಯಾತ್ರೆಯನ್ನು ಅಷ್ಟಕ್ಕೇ ನಿಲ್ಲಿಸಬೇಕಾಯಿತು. ರೋಗವು ದಿನೇ ದಿನೇ ಪ್ರಬಲಿಸುತ್ತ ಬಂದರೂ ಮಸೀದಿಗೆ ಹೋಗಿ ತನ್ನ ಶಿಷ್ಯರೊಡನೆ ಭಗವಂತನ ಪ್ರಾರ್ಥನೆ ಮಾಡುವ ಆಸೆಯು ಮುಹಮ್ಮದನನ್ನು ಬಿಡಲೊಲ್ಲದು. ಆದಕಾರಣ, ಮುಹಮ್ಮದನು ಮಸೀದಿಗೆ ಹತ್ತಿರದಲ್ಲಿದ್ದ ಒಂದು ಮನೆಯನ್ನು ತನ್ನ ವಾಸಕ್ಕಾಗಿ ಗೊತ್ತುಮಾಡಿಕೊಂಡು ಅಲ್ಲಿಯೇ ನಿಂತನು. ಅಯಿಷೆಯು ಕೇವಲ ಭಕ್ತಿಯಿಂದ ಪತಿಶುಶ್ರೂಷೆ ಮಾಡಿ ಅವನನ್ನು ಉಪಚರಿಸುತ್ತಿದ್ದಳು. ದೇಹದಲ್ಲಿ ಪ್ರಾಣವಿರುವ ವರೆಗೂ ಮುಹಮ್ಮದನೂ ಮಸೀದಿಗೆ ಹೋಗಿಬರುತ್ತಿದ್ದನು. ಒಂದು ದಿನ ಜ್ವರದ ಆವೇಗದಿಂದ ಮುಹಮ್ಮದನಿಗೆ ತೀರ ನಿಷ್ಪ್ರಾಣವಾಯಿತು. ಅಂತಹ ಸ್ಥಿತಿಯಲ್ಲಿಯೂ ಅವನು ತಲೆಗೆ ಒದ್ದೆಯ ಬಟ್ಟೆಯನ್ನು ಬಿಗಿದುಕೊಂಡು ನಮಾಜು ಮಾಡಲು ಮಸೀದಿಗೆ ಹೋದನು; ಅದೇ ಕೊನೆಯ ದಿನ. ಪ್ರಾರ್ಥನೆಯು ಮುಗಿದನಂತರ ಮುಹಮ್ಮದನು ಒಂದು ಸಣ್ಣ ಭಾಷಣವನ್ನು ಮಾಡಿ

ತನ್ನ ಮರಣ ಕಾಲವು ಸಮೀಪಿಸುತ್ತಿರುವ ಅಂಶವನ್ನು ಅತಿ ಸೂಕ್ಷ್ಮವಾಗಿ ಸೂಚಿಸಿದನು. ಕುಶಾಗ್ರ ಬುದ್ಧಿಯುಳ್ಳ ಅಬೂ ಬಕರನೊಬ್ಬನಿಗೆ ಮಾತ್ರ ಅದರ ಭಾವವು ಮನಸ್ಸಿಗೆ ಹಿಡಿದು ಅವನ ಕಣ್ಣುಗಳು ಕಂಬನಿದುಂಬಿದುವು.

ಭಾಷಣವು ಪೂರೈಸಿದನಂತರ ಮಹಮ್ಮದನು, ತಾನು ಯಾರಿಗಾದರೂ ಅನ್ಯಾಯ ಮಾಡಿದ್ದರೆ ಅಂಥವರು ತನ್ನ ಮೇಲೆ ಈಗ ಹಗೆಯನ್ನು ತೀರಿಸಿಕೊಳ್ಳಬಹುದೆಂದೂ, ಈ ಪ್ರಪಂಚವನ್ನು ಬಿಟ್ಟುಹೋಗುವಾಗ ಇಲ್ಲಿ ಋಣ ಶೇಷವಿರಬಾರದೆಂಬ ಅಭಿಲಾಷೆಯಿಂದ, ತಾನು ಮರೆತು ಯಾರಿಗಾದರೂ ಹಣ ಕಾಸು ಕೊಡುವುದು ಉಳಿದಿದ್ದರೆ ಅದನ್ನು ದಯವಿಟ್ಟು ತಿಳಿಸಬೇಕೆಂದೂ ಕೇಳಿದನು. ಸಾತ್ವಿಕ ಶ್ರೇಷ್ಠನಾಗಿ, ಯಾರನ್ನೂ ಯಾವ ವಿಧದಲ್ಲಿಯೂ ನೋಯಿಸದೆ ಸನ್ಮಾರ್ಗ ಪ್ರವರ್ತಕನಾಗಿದ್ದ ಮಹಮ್ಮದನ ಈ ಮಾತುಗಳನ್ನು ಕೇಳಿ ಅವನ ಶಿಷ್ಯರಲ್ಲನೇಕರು ಕಣ್ಣೀರು ಸುರಿಸಿದರು. ಆ ಸಭಿಕರಲ್ಲೊಬ್ಬನು ಮಾತ್ರ ತನಗೆ ಮಹಮ್ಮದನಿಂದ ಮೂರು ದರ್ಹಂ ನಾಣ್ಯಗಳು ಬರಬೇಕೆಂದು ತಿಳಿಸಿದನು. ಭಿಕ್ಷುಕನೊಬ್ಬನಿಗೆ ಮಹಮ್ಮದನು ಆ ಹಣವನ್ನು ತನ್ನ ಸಾಲವಾಗಿ ಹಿಂದೆ ಕೊಡಿಸಿದ್ದುದು ಮರೆತುಹೋಗಿದ್ದಿತು. ಮಹಮ್ಮದನು ಆ ಸಾಲವನ್ನು ಸಂತೋಷದಿಂದ ತೀರಿಸಿದನು. ತರುವಾಯ, ಬಾಧೆಯಿಂದ ಹೆಚ್ಚು ಕಾಲ ಅಲ್ಲಿ ನಿಲ್ಲಲು ಶಕ್ತಿಯಿಲ್ಲದೆ ಮಹಮ್ಮದನು ಇಬ್ಬರ ಭುಜದ ಮೇಲೆ ಕೈಯಿಟ್ಟುಕೊಂಡು, ಮೆಲ್ಲಗೆ ನಡೆದು ಹೋಗಿ ಮನೆಯನ್ನು ಸೇರಿದನು.

ಮರು ದಿನದಿಂದ ಮಹಮ್ಮದನ ರೋಗವು ಉಲ್ಬಣವಾಗುತ್ತ ಬಂದರೂ, ಕ್ರಿ. ಶ. ೬೩೨ನೆಯ ಜೂನ್ ೮ನೆಯ ತಾರೀಖು ಸೋಮವಾರ ಮಧ್ಯಾಹ್ನದ ಹೊತ್ತಿಗೆ ಸ್ವಲ್ಪ ಗುಣಮುಖವಾದಂತೆ ತೋರಿ ತ್ರಾಣವೂ ಬಂದಿತು. ಒಡನೆಯೇ ಅವನು ಮಸೀದಿಗೆ ಹೋಗಲು ಅನುವಾದನು. ಪತಿಯ ರೋಗವು ಹಿಮ್ಮೆಟ್ಟಿತೆಂದು ಮಹಮ್ಮದನ ಪತ್ನಿಯರೆಲ್ಲರೂ ಸಂತೋಷದಿಂದ ಹಿಗ್ಗಿದರು. ಮಹಮ್ಮದನು ಇತರರ ಸಹಾಯದಿಂದ ಮಸೀದಿಗೆ

**ಪರಲೋಕ ಯಾತ್ರೆ**

ಹೋಗಿ, ಅವನ ಶಿಷ್ಯರೆಲ್ಲರೂ ತಾನು ಅವರ ಬಳಿಯಲ್ಲಿಲ್ಲದೆ ಇರು ವಾಗಲೂ, ಅಷ್ಟು ಶ್ರದ್ಧೆಯಿಂದ ನಮಾಜು ಮಾಡುತ್ತ, ಭಗವಂತನನ್ನು ಪ್ರಾರ್ಥಿಸುತ್ತಿದ್ದುದನ್ನು ಕಂಡು ಅವನಿಗೆ ಪರಮಾನಂದವಾಯಿತು. ತಮ್ಮ ಗುರುವಿಗೆ ರೋಗವು ಗುಣವಾಯಿತೆಂದು ಅಲ್ಲಿದ್ದವರೆಲ್ಲರೂ ಬಹಳ ಸಂತೋಷಪಟ್ಟರು. ಅಷ್ಟರಲ್ಲಿ ಮುಹಮ್ಮದನ ತ್ರಾಣವು ಕುಂದುತ್ತ ಬಂದುದರಿಂದ, ಕೂಡಲೆ ಹೊರಟು ಬಹಳ ಕಷ್ಟದಿಂದ ಅವನು ಮನೆ ಯನ್ನು ಸೇರಿದನು. ಒಡನೆಯೇ ಸಂಕಟವು ಹೆಚ್ಚಿ, ಕೆಲವು ನಿಮಿಷ ಗಳಲ್ಲಿಯೇ ಮುಹಮ್ಮದನು ಪರ ಲೋಕವನ್ನು ಸೇರಿದನು. "ಭಗವಂ ತನೇ! ಕರುಣಾ ಮಯನಾದ ನಿನ್ನ ಸಮ್ಮುಖದಲ್ಲಿ ವಾಸ...." ಎಂಬ ಅರ್ಧೋಕ್ತಿಗಳೇ ಮುಹಮ್ಮದನ ಕಡೆಯ ನುಡಿಗಳು. "ಯಾರಾದರೆ ಪಾಪ ದೂರರಾಗಿ ನಿರಹಂಕಾರ ವೃತ್ತಿಯಿಂದ ಜೀವಿಸುವರೋ, ಅವರು ಮಾತ್ರವೇ ನನ್ನ ಸಮೀಪಕ್ಕೆ ಬರುವರು. ಧರ್ಮಾತ್ಮರು ಸುಖವನ್ನರಸ ಬೇಕಾದ ನಿಮಿತ್ತವೇ ಇಲ್ಲ; ಸುಖವೇ ಅವರಿಗಾಗಿ ಯಾವಾಗಲೂ ಕಾದಿರುವುದು" ಎಂಬ ಖುರಾನಿನ ಭಗವದುಕ್ತಿಗನುಸಾರವಾಗಿ ಭಗವಂತನೇ ಮುಹಮ್ಮದನನ್ನು ತನ್ನ ಸಮೀಪಕ್ಕೆ ಕರೆದುಕೊಂಡನು. ಭಗವಂತನ ಸೇವೆಗಾಗಿಯೂ, ಜನಪದದ ಸೇವೆಗಾಗಿಯೂ ಸೊಂಟ ವನ್ನು ಕಟ್ಟಿ ನಿಂತು ಯಥಾ ಶಕ್ತಿಯಾಗಿ ನಿರ್ವಂಚನೆಯಿಂದ ಕೆಲಸಮಾಡಿದ ತೇಜಸ್ವಿಯ ಜೀವನವು ಹೀಗೆ ಪರಿಸಮಾಪ್ತಿಯಾಯಿತು. ತಮ್ಮ ಗುರು ವಿನ ವಿಯೋಗದಿಂದುಂಟಾದ ದುಃಖದಿಂದ ಅವನ ಶಿಷ್ಯರೆಲ್ಲರೂ ಕಳೆಗುಂದಿ ದರು. ಆದರೇನು? ವಿಪತ್ತಿನಲ್ಲಿ ಧೈರ್ಯವೇ ಶರಣೆಂದು ನಿರ್ಧರಿಸಿ, ಪರಮಾತ್ಮನಾದ ಭಗವಂತನು ತಮ್ಮನ್ನು ಉದ್ಧರಿಸಲು ಸಿದ್ಧವಾಗಿಯೇ ಇರುವನೆಂದೂ, ಮುಹಮ್ಮದನ ಉಪದೇಶಗಳಿಗನುಸಾರವಾಗಿ ನಡೆದು ಕೃತಾರ್ಥರಾಗಬೇಕೆಂದೂ ಅವರೆಲ್ಲರೂ ದೃಢನಿಶ್ಚಯಮಾಡಿದರು. ಎಂತಹ ಗುರುವೋ ಅಂತಹ ಶಿಷ್ಯರು!

# ಹದಿನೈದನೆಯ ಅಧ್ಯಾಯ

## ಇಸ್ಲಾಂ ಮತದ ಮೂಲ ತತ್ತ್ವಗಳು

ಪತಿತರನ್ನು ಉದ್ಧರಿಸಿದ ಮತ

ಮುಹಮ್ಮದನು ಮತ ಬೋಧೆ ಮಾಡಲಾರಂಭಿಸುವುದಕ್ಕೆ ಮೊದಲು ಅರಬ್ಬಿಯವರ ಸಮಾಜವು ದುರಾಚಾರಗಳ ನೆಲೆಯೆನಿಸಿ ಎಲ್ಲಿ ನೋಡಿದರೂ ನಾಸ್ತಿಕತೆಯೂ ಮದ್ಯಪಾನವೂ ನೀತಿ ಬಾಹಿರತೆಯೂ ತುಂಬಿದ್ದು ಸರ್ವ ಶಕ್ತನಾದ ಜಗದೀಶ್ವರನು ಒಬ್ಬನಿರುವನೆಂಬ ಭಾವನೆಯೇ ಅವರಿಗಿರಲಿಲ್ಲವೆಂದು ಹಿಂದೆಯೇ ಸೂಚಿಸಿದೆ. ಇಂತಹ ಅಸಭ್ಯ ಜನರ ಉದ್ಧಾರಕ್ಕಾಗಿಯೇ ಭಗವಂತನ ದಯೆಯಿಂದ ಮುಹಮ್ಮದನು ಅವತರಿಸಿ, ಪತಿತರಾಗಿದ್ದವರನ್ನು ಪುನೀತರನ್ನಾಗಿ ಪರಿವರ್ತನಗೊಳಿಸಲು ಇಸ್ಲಾಂ ಮತವನ್ನು ಸ್ಥಾಪಿಸಿ, ಅದರ ಮೂಲ ತತ್ತ್ವಗಳನ್ನು ದೇಶ ವಿದೇಶಗಳಿಗೂ ಸಾರಿ, ಆ ಮತವನ್ನು ಪ್ರಚುರಗೊಳಿಸಿದನು. ಸಮಾಜವನ್ನು ಸುಧಾರಣೆಗೊಳಿಸಿ ಉದ್ಧರಿಸುವುದಕ್ಕೂ, ನಾಸ್ತಿಕರನ್ನು ಆಸ್ತಿಕರನ್ನಾಗಿ ಮಾರ್ಪಡಿಸಿ ಪವಿತ್ರಗೊಳಿಸುವುದಕ್ಕೂ, ಪತಿತರನ್ನು ಪಾವನ ಮಾಡಿ ರಕ್ಷಿಸುವುದಕ್ಕೂ ಇಸ್ಲಾಂ ಮತವು ದೊಡ್ಡ ಸಾಧಕವಾಯಿತು.

ವಿಷಯ ನಿರೂಪಣೆಯ ಸಿಂಹಾವಲೋಕನ

ಮುಹಮ್ಮದೀಯರ ಪವಿತ್ರ ಗ್ರಂಥವಾದ ಖುರಾನಿನಲ್ಲಿ ಹೇಳಿರುವ ಇಸ್ಲಾಂ ಮತದ ಎಲ್ಲ ಸಿದ್ಧಾಂತಗಳನ್ನೂ ಮುಹಮ್ಮದನ ತರುವಾಯ ಬಂದ ನಾನಾ ಭಾಷ್ಯಕಾರರ ವ್ಯಾಖ್ಯಾನಗಳ ಮೇರೆಗೆ ಸಮನ್ವಯ ಮಾಡುವುದೂ, ಸುನ್ನೀ, ಷಿಯಾ ಮುಂತಾದ ಪಂಗಡ ವಿಭೇದಗಳ ಸ್ವರೂಪವನ್ನು ಚರ್ಚಿಸುವುದೂ ಈ ಗ್ರಂಥದ ಉದ್ದೇಶವಲ್ಲ; ಅದಕ್ಕೆ ಇಲ್ಲಿ ಅವಕಾಶವೂ ಇಲ್ಲ. ಕೇವಲ ಸ್ಥೂಲವಾಗಿ ಪರಿಶೀಲಿಸಿ, ಇಸ್ಲಾಂ ಮತಕ್ಕೆ ಮೂಲಾಧಾರವಾಗಿರುವಂತೆ ತೋರುವ ಕೆಲವು ಅಂಶಗಳನ್ನು ಮಾತ್ರ ಅತಿ ಸಂಕ್ಷೇಪವಾಗಿ ಇಲ್ಲಿ ಪ್ರಸ್ತಾವಿಸಲಾಗುವುದು.

ಇಸ್ಲಾಂ ಮತವು ಅನುಷ್ಠಾನ ಯೋಗ್ಯವಾಗಿಯೂ ಉದಾರ ಭಾವ ಪರಿಪೂರ್ಣವಾಗಿಯೂ ಇರುವ ಮತ. ಮಾನವನಲ್ಲಡಗಿರುವ ಆಸುರೀ

ಇಸ್ಲಾಂ ಮತದ ಮುಖ್ಯ ಲಕ್ಷಣ

ಪ್ರಕೃತಿಯನ್ನು ದಮನ ಮಾಡಿ, ದೈವಿಕ ಪ್ರಕೃತಿಯನ್ನು ಪರಿಸ್ಫುಟಗೊಳಿಸುವುದೇ ಸಮಸ್ತ ಮತಗಳಲ್ಲಿಯೂ ಹೇಳಿರುವ ಸಿದ್ಧಾಂತ ಸಾರ. ಆದರೆ, ಯಾವುದಾದರೂ ಒಂದು ಗೊತ್ತಾದ ಸ್ಥಳಕ್ಕೆ ಹೋಗಲು ನಾನಾ ವಿಧವಾಗಿರುವ ಬೇರೆ ಬೇರೆ ದಾರಿಗಳು ಹೇಗಿರುವುವೋ ಅದೇ ರೀತಿಯಲ್ಲಿ ನಾನಾ ಮತಗಳೂ ಈ ಉದ್ದೇಶ ಸಾಧನೆಗೆ ಬಗೆ ಬಗೆಯ ಅನುಷ್ಠಾನ ಮಾರ್ಗಗಳನ್ನು ಬೋಧಿಸಿವೆ. ಈ ದೃಷ್ಟಿಯಿಂದ ನೋಡಿದರೆ ಇಸ್ಲಾಂ ಮತವೂ ಉತ್ತಮ ಮತಗಳಲ್ಲೊಂದಾಗಿದೆಯೆಂದು ಧಾರಾಳವಾಗಿ ಹೇಳಬಹುದು. ಯಾವ ವೃತ್ತಿಯನ್ನನುಸರಿಸಿ, ಯಾವ ಸನ್ನಿವೇಶದಲ್ಲಿದ್ದರೂ, ಖುರಾನಿನಲ್ಲಿ ಹೇಳಿರುವಂತೆ ನಡೆಯುವುದಾದರೆ, ಮನುಷ್ಯನು ಕೃತಾರ್ಥನಾಗುವನೆಂಬುದೇ ಇಸ್ಲಾಂ ಮತದ ಮುಖ್ಯ ಲಕ್ಷಣ.

ಭಗವತ್ಸ್ವರೂಪ

ಭಗವತ್ಸ್ವರೂಪವನ್ನು ಕುರಿತು ಮಹಮ್ಮದನು ಹೀಗೆ ತಿಳಿಸಿರುವನು :—"ಭಗವಂತನೆಂದರೆ ಸರ್ವ ಶಕ್ತನಾದ ಜಗದೀಶ್ವರನೊಬ್ಬನೇ. ಅವನೇ ಸತ್ತ್ವಶಾಲಿಯಾದ ಶಾಶ್ವತನು; ನಿದ್ರೆಯೂ ಮರವೆಯೂ ಅವನ ಬಳಿಯಲ್ಲಿ ಸುಳಿಯವು. ಭೂಮಂಡಲದಲ್ಲಾಗಲಿ, ನಭೋಮಂಡಲದಲ್ಲಾಗಲಿ, ಸ್ವರ್ಗಲೋಕದಲ್ಲಾಗಲಿ ಇರತಕ್ಕ ಸಮಸ್ತ ವಸ್ತುಗಳಿಗೂ ಅವನೇ ಒಡೆಯನು. ಅವನು ಭೂತ ಭವಿಷ್ಯತ್ತುಗಳೆರಡನ್ನೂ ಬಲ್ಲನು. ಅವನ ಅನುಗ್ರಹಕ್ಕೆ ಪಾತ್ರರಾಗದವರಿಗೆ ದಿವ್ಯ ಜ್ಞಾನದ ಲವ ಲೇಶವೂ ಲಭಿಸದು. ಅವನ ಅಪ್ರತಿಹತವಾದ ಅಧಿಕಾರವು ಭೂಮ್ಯಂತರಿಕ್ಷಗಳನ್ನೂ ಇತರ ಎಲ್ಲಾ ಪ್ರದೇಶಗಳನ್ನೂ ವ್ಯಾಪಿಸಿರುವುದು. ಸೂರ್ಯ ಚಂದ್ರರನ್ನೂ ನಕ್ಷತ್ರ ಮಂಡಲವನ್ನೂ ಸೃಷ್ಟಿಸಿದವನೂ ಅವನೇ; ಗ್ರಹಗಳ ಗತಿಯನ್ನು ನಿರ್ಧರಿಸಿದವನೂ ಅವನೇ; ಎಲ್ಲಾ ಪ್ರಪಂಚಗಳಿಗೂ ಅಧಿನಾಯಕನೂ ಅವನೇ; ಶಾಶ್ವತನೂ, ಜನನ ಮರಣ ರಹಿತನೂ, ಸರ್ವಜ್ಞನೂ, ಅದ್ವಿತೀಯನಾದ ಭಗವಂತನೂ ಅವನೇ. ನಮ್ಮ ಕಣ್ಣುಗಳು ಅವನನ್ನು ಕಾಣಲಾರವು; ಆದರೆ ಅವನಿಗೆ ಮಾತ್ರ ಎಲ್ಲವೂ ಗೋಚರವಾಗುವುದು;

ನಮ್ಮ ಯಾವ ರಹಸ್ಯವೂ ಅವನ ಕಣ್ಣಿಗೆ ಮರೆಯಾಗಲಾರದು. ಸ್ವರ್ಗ ಲೋಕವೂ ಭೂಲೋಕವೂ ಅವನಿಂದಲೇ ಹುಟ್ಟಿದುವು; ಪರಿಣಾಮದಲ್ಲಿ ಅವು ಅವನಲ್ಲಿಯೇ ಅಸ್ತವಾಗುವುವು. ಆರ್ತರ ಮೊರೆಯನ್ನು ಲಾಲಿಸಿ, ಅವರ ದುಃಖವನ್ನು ಪರಿಹರಿಸುವವನೂ ಅವನೇ; ನಮ್ಮ ಪ್ರಾರ್ಥನೆಗೆ ಮೆಚ್ಚಿ ನಮ್ಮ ಅಪರಾಧಗಳನ್ನು ಕ್ಷಮಿಸುವ ಪ್ರಭುವೂ ಅವನೇ; ತಾನು ಒಲಿದವರಿಗೆ ವಿವೇಕವೆಂಬ ಬೆಳಕನ್ನು ಅನುಗ್ರಹಿಸುವವನೂ ಅವನೇ. ಸರ್ವಸೃಷ್ಟಿಗೊಡೆಯನಾಗಿ ಸತ್ಪ್ರಭುವಾದ ಆ ಭಗವಂತನನ್ನು ಎಲ್ಲರೂ ಕೊಂಡಾಡಿ ಕೃತಾರ್ಥರಾಗೋಣ! ಎಲ್ಲ ಮಾನವರ ವಿಚಾರಣೆಗಾಗಿ ಅವನು ಗೊತ್ತುಮಾಡಿರುವ ದಿನದಲ್ಲಿ, ಅವನು ಬರಹೇಳಿದ ಉತ್ತರ ಕ್ಷಣದಲ್ಲಿಯೇ ನಮ್ಮ ಆತ್ಮಗಳು ಅವನಲ್ಲಿಗೆ ಓಡುವುವು. ಅಂದು, ಸೂರ್ಯಚಂದ್ರರು ಮುದುರಿಕೊಳ್ಳುವರು, ನಕ್ಷತ್ರಗಳು ಕೆಳಕ್ಕುರುಳುವುವು, ಪರ್ವತಗಳು ಚಲಿಸುವುವು, ಸಮುದ್ರಗಳು ಕುದಿಯುವುವು; ಅಂದು, ಜೀವಾತ್ಮಗಳಿಗೆ ನೂತನಾ ದೇಹಗಳು ಲಭಿಸುವುವು: ಒಂದೆಡೆಯಲ್ಲಿ ನರಕದ ಜ್ವಾಲೆಗಳು ಪ್ರಜ್ವಲಿಸಿ ಉರಿಯುವುವು, ಮತ್ತೊಂದೆಡೆಯಲ್ಲಿ ಸ್ವರ್ಗೋದ್ಯಾನವು ಕಂಗೊಳಿಸುವುದು. ಅಂದು, ಪಾಪ ಪುಣ್ಯಗಳ ಕಡತದ ಸುರುಳಿಯು ತೆರೆಯಲ್ಪಡುವುದು. ಜೀವರುಗಳು ತಮ್ಮ ತಮ್ಮ ಕರ್ಮಗಳಿಗನುರೂಪವಾದ ಫಲಗಳನ್ನನುಭವಿಸುವರು. ಆಗ, ಅವರವರ ಕರ್ಮಗಳು ಎಂತಹವೆಂಬ ಪುಣ್ಯಪಾಪ ವಿಮರ್ಶೆಯು ಸುಖದುಃಖಾನುಭವ ಸಮೇತವಾಗಿ ಎಲ್ಲರಿಗೂ ಮನದಟ್ಟಾಗುವುದು. ಆಗಲೂ ಭಗವಂತನು ಪರಮ ಕರುಣಾನಿಧಿಯೆಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿ ತನ್ನ ಕೃಪಾ ಕಟಾಕ್ಷವನ್ನು ಕರುಣಿಸಿ ಜೀವರುಗಳನ್ನುದ್ಧರಿಸಲು ಸಿದ್ಧನಾಗಿರುವನು. ಆಗಲಾದರೂ ನಮ್ಮ ಅಪರಾಧಗಳನ್ನು ಕ್ಷಮಿಸುವಂತೆ ದಯಾಸಮುದ್ರನಾದ ಆ ಭಗವಂತನನ್ನು ಬೇಡಿಕೊಳ್ಳೋಣ!''

ಈ ವಿಧದ ಭಗವತ್ಸ್ವರೂಪವನ್ನು ಯಾವ ಮತದವರು ತಾನೆ ಒಟ್ಟಿನಲ್ಲಿ ಒಪ್ಪುವುದಿಲ್ಲ? ಯಾವ ದೇಶದವರಾದರೇನು? ಯಾವ ಕಾಲದವರಾದರೇನು? ಯಾವ ಕುಲದವರಾದರೇನು? ಭಗವಂತನ ಕೃಪೆಗೆ

ಪಾತ್ರರೆನಿಸಿದ ಮಹಾ ಪುರುಷರು ಎಂದೆಂದಿಗೂ ಲೋಕ ವಂದ್ಯರೇ ಸರಿ.

ಖುರಾನಿನಲ್ಲಿ ಹೇಳಿರುವ ಒಂದು ವಿಚಾರವು ಮಾತ್ರ ಕೆಲವರಿಗೆ ಆಶ್ಚರ್ಯವನ್ನುಂಟುಮಾಡಬಹುದು; ಆದರೆ ಅದರ ಗೂಢಾರ್ಥವನ್ನು ಗಮನಿಸಿದರೆ ಅದರಲ್ಲಿ ಅಷ್ಟು ಆಶ್ಚರ್ಯವೇನೂ ತೋರುವುದಿಲ್ಲ. ಸ್ವರ್ಗಗಳು ಏಳಿರುವುವೆಂದು ಖುರಾನಿನಲ್ಲಿ ಹೇಳಿದೆ. ಜೀವಾತ್ಮನ ಸುಧಾರಣಾ ಕ್ರಮದಲ್ಲಿ ಏಳು ಅಂತಸ್ತುಗಳುಂಟೆಂಬುದನ್ನು ಸೂಚಿಸಿ, ಜೀವಾತ್ಮನ ಪ್ರಗತಿ ಮಾರ್ಗ ಸಂಚಾರವನ್ನು ಸ್ಥೂಲವಾಗಿ ಏಳು ಮಜಲುಗಳೆಂಬುದಾಗಿ ವಿಭಾಗಿಸಿ ಆ ರೀತಿ ಹೇಳಿದೆಯೇ ವಿನಾ ಬೇರೆಯಲ್ಲ. ಪ್ರತಿಯೊಂದು ಅಂತಸ್ತಿನಲ್ಲಿಯೂ ಜೀವಾತ್ಮನಲ್ಲಿ ಎರಡು ಮುಖ್ಯ ಲಕ್ಷಣಗಳು ಕಂಡುಬರುತ್ತವೆ: ಹಿಂದಣ ಅಂತಸ್ತಿನಲ್ಲಿದ್ದ ಗುಣಗಳೇ ಮತ್ತಷ್ಟು ಸೂಕ್ಷ್ಮರೂಪದಲ್ಲಿ ನೆಲೆಗೊಂಡಿರುವುದು ಮೊದಲನೆಯ ಲಕ್ಷಣ; ಹಿಂದಣ ಅಂತಸ್ತಿನಲ್ಲಿ ಕಂಡುಬಾರದೆ ಇದ್ದ ಕೇವಲ ಹೊಸ ಗುಣಗಳೇ ಹುಟ್ಟಿರುವುದು ಎರಡನೆಯ ಲಕ್ಷಣ. ಈ ಹೊಸ ಗುಣಗಳು ಪರಿಸ್ಫುಟವಾಗುವುದೇ ಈ ಹೊಸ ಅಂತಸ್ತಿನಲ್ಲಿ ನಡೆಯುವ ಕಾರ್ಯ. ಈ ವಿಷಯವನ್ನು ಮತ್ತಷ್ಟು ಸ್ಪಷ್ಟಗೊಳಿಸುವುದಕ್ಕಾಗಿ ಮುಂದಣ ನಿದರ್ಶನವನ್ನು ಕೊಡಬಹುದು:—ಒಂದು ಬೀಜವು ಮೊಳೆತು, ಗಿಡವಾಗಿ, ಹೂಬಿಟ್ಟು, ಫಲಕೊಟ್ಟು ಪರಿಣಾಮ ಹೊಂದುವ ಕ್ರಮವನ್ನು ಪರ್ಯಾಲೋಚಿಸೋಣ. ಬೀಜವು ಫಲವಾಗಿ ಪರಿಣಮಿಸುವ ಮೊದಲು ಅನೇಕ ಪರಿಣಾಮಗಳನ್ನು ಹೊಂದುತ್ತದೆ. ಆದರೂ, ಅವುಗಳನ್ನು ಸ್ಥೂಲವಾಗಿ ಒಂದು ವಿಧದಲ್ಲಿ ವಿಂಗಡಿಸಬಹುದು: ಮೊಳಕೆಯಲ್ಲಿ ಬೀಜದ ಗುಣವೂ ಇದೆ, ಹೊಸದಾಗಿ ಅಂಕುರವೂ ಹೊರಟಿರುತ್ತದೆ; ಎಲೆಯಲ್ಲಿ ಅಂಕುರದ ಗುಣವೂ ಇದೆ, ಅಂಕುರಕ್ಕೆ ಸಂಬಂಧಪಡದ ಹೊಸ ಗುಣವೂ ಇದೆ; ಹೂವಿನಲ್ಲಿರುವ ರೇಕುಗಳು ಎಲೆಯ ಗುಣಗಳನ್ನು ಸ್ವಲ್ಪಮಟ್ಟಿಗೆ ಹೋಲುವುವಾದರೂ ಎಲೆಗಿಂತಲೂ ಅತಿ ಮೃದುವಾಗಿ, ಸೂಕ್ಷ್ಮ ರೂಪದಲ್ಲಿರುತ್ತವೆ. ಇಷ್ಟೇ ಅಲ್ಲ; ಹೂವಿನಲ್ಲಿ ಸೌರಭವೇ ಮುಂತಾದ ಗುಣ

ಏಳು ಸ್ವರ್ಗಗಳ ವಿಚಾರ

ಗಳು ಪರಿಸ್ಫುಟವಾಗಿರುತ್ತವೆ; ಆದರೆ, ಎಲೆಯ ಹಿಂದಣ ಕಡ್ಡಿಯ ಗುಣಗಳಿರುವುದಿಲ್ಲ. ಹಣ್ಣಿನಲ್ಲಿ ಹೂವಿನ ಪರಿಮಳವು ಅತಿ ಸೂಕ್ಷ್ಮ ರೂಪದಲ್ಲಿರುತ್ತದೆ; ದೇಹವನ್ನು ಪೋಷಿಸುವ ಹೊಸ ಗುಣವು ಕಾಯಿಯ ಅವಸ್ಥೆಯಿಂದಲೂ ಅದರಲ್ಲಿ ಪರಿಸ್ಫುಟಗೊಂಡು ಬಂದಿರುತ್ತದೆ; ಆದರೆ, ಹಣ್ಣಿನಲ್ಲಿ ಎಲೆಯ ಗುಣಗಳೊಂದೂ ಇರುವುದಿಲ್ಲ. ಇದೇ ರೀತಿಯಲ್ಲಿಯೇ ಜೀವಾತ್ಮನ ಪ್ರಗತಿ ಮಾರ್ಗ ಪರಿಣಾಮವೂ ಅಂತಸ್ತು ಅಂತಸ್ತಾಗಿ ಸಾಗುತ್ತದೆ. ಪ್ರತಿಯೊಂದು ಅಂತಸ್ತಿನಲ್ಲಿಯೂ ಹೊಸ ಗುಣಗಳು ವೃದ್ಧಿಯಾಗುತ್ತ ಬರುವುದಲ್ಲದೆ, ಅದರ ಹಿಂದಣ ಅಂತಸ್ತಿನ ಲಕ್ಷಣಗಳು ಅತಿ ಸೂಕ್ಷ್ಮರೂಪದಲ್ಲಿರುತ್ತವೆ; ಆದರೆ, ಅದಕ್ಕೂ ಹಿಂದಿದ್ದ ಅಂತಸ್ತಿನ ಪ್ರಾಮುಖ್ಯ ಲಕ್ಷಣಗಳೊಂದೂ ಕಾಣಬರುವುದಿಲ್ಲ. ಜೀವಾತ್ಮನು ಮುಂದುವರಿದು ಪರಿಷ್ಕರಣ ಹೊಂದಿದುದರ ಫಲವೇ ಅದಕ್ಕೆ ಕಾರಣ. ಹಾಗೆ ಆ ಲಕ್ಷಣಗಳು ಅಳಿದುಹೋದಲ್ಲದೆ ಜೀವಾತ್ಮನು ಪ್ರಗತಿಯನ್ನು ಸಾಧಿಸುವಂತೆಯೇ ಇಲ್ಲ. ಈ ನಿಯಮಗಳು ಪ್ರಗತಿ ಸಾಧನೆಗೆ ಅತ್ಯಾವಶ್ಯಕ. ಜೀವನಲ್ಲಿ ಅಡಗಿರುವ ಪ್ರಕೃತಿ ಸಂಬಂಧವಾದ ಸ್ಥೂಲ ಸ್ವಭಾವದ ದೆಸೆಯಿಂದ ತದುಚಿತವಾದ ರಾಗ ದ್ವೇಷಾದಿಗಳು ಹುಟ್ಟುವುವು. ಅವುಗಳಿಂದ ಪಾಪ ಹೇತುವಾದ ಚೋದನ ಶಕ್ತಿಯುಂಟಾಗಿ, ಅವರ ದೆಸೆಯಿಂದ ಅನರ್ಥಗಳುಂಟಾಗುವುವು. ಆದಕಾರಣ, ಪ್ರಗತಿ ಮಾರ್ಗದಲ್ಲಿ ಮುಂದುವರಿದು ಶ್ರೇಯಸ್ಸನ್ನು ಕಾಣಲಿಚ್ಛಿಸುವ ಪ್ರತಿಯೊಬ್ಬನೂ ಅಂತಹ ಅನರ್ಥಕ್ಕೆಡೆಗೊಡದೆ, ಪಾರಿಶುಧ್ಯವನ್ನು ಕಾಪಾಡಿಕೊಳ್ಳಬೇಕು. ಜೀವಾತ್ಮನು ಪ್ರಗತಿ ಮಾರ್ಗದಲ್ಲಿ ಮುಂದುವರಿಯಲು ಪ್ರತಿಬಂಧಕವಾದ ಪಾಪಾಸಕ್ತಿಯು ಪರಿಹಾರವಾಗಬೇಕಾದರೆ ಭಗವಂತನ ಅನುಗ್ರಹದಿಂದಲೇ. ಅದಕ್ಕಾಗಿಯೇ ಭಗವಂತನನ್ನು ಭಕ್ತಿಯಿಂದ ಪ್ರಾರ್ಥಿಸಿಕೊಳ್ಳಬೇಕಾದುದು ಅತ್ಯಾವಶ್ಯಕ. ದೇವತಾ ಪ್ರಾರ್ಥನೆಯು (ನಮಾಜು ಮುಂತಾದುದು) ಏರ್ಪಟ್ಟಿರುವುದು ಇದಕ್ಕೋಸುಗವೇ. ಜೀವಾತ್ಮನು ಪ್ರಗತಿ ಸಾಧನೆಯಿಂದ ಹಿಂದೆ ಬಿದ್ದಿರುವ ದಾರುಣ ಸ್ಥಿತಿಯೇ ನರಕದ ದುಃಖಾವಾಸವೆಂದು ಸಾಂಕೇತಿಕವಾಗಿ ಸೂಚಿಸಲ್ಪಟ್ಟಿದೆಯೆಂದೂ, ಪ್ರಗತಿ ಸಾಧನೆಯ ಏಳು ಅಂತಸ್ತುಗಳೂ ಏಳು ಸ್ವರ್ಗಗಳೆಂಬುದಾಗಿ

ಹೇಳಲ್ಪಟ್ಟಿದೆಯೆಂದೂ ಮುಹಮ್ಮದೀಯ ಪಂಡಿತರುಗಳು ಅಭಿಪ್ರಾಯ ಪಡುತ್ತಾರೆ. ಜೀವಾತ್ಮನು ಪ್ರಗತಿ ಮಾರ್ಗದಲ್ಲಿ ಸಂಚರಿಸುವನೆಂಬುದನ್ನು ಮುಹಮ್ಮದೀಯರು ಒಪ್ಪಿಕೊಂಡಿರುವರಾದರೂ, ತನ್ನ ಕರ್ಮಾನುರೂಪವಾಗಿ ಪುನರ್ಜನ್ಮ ಧಾರಣೆ ಮಾಡುವನೆಂಬುದನ್ನು ಅವರು ಒಪ್ಪುವುದಿಲ್ಲ. ಆದರೂ, ಭಗವಂತನನ್ನು ಪ್ರಾರ್ಥಿಸುವುದರಿಂದಲೂ, ಅದಕ್ಕನುಗುಣವಾದ ಸತ್ಕರ್ಮಾಚರಣೆಯಿಂದಲೂ, ಜೀವಾತ್ಮನಿಗೆ ಪ್ರಗತಿ ಸಾಧನೆಯಲ್ಲಿ ಸುಗಮವಾದ ಮಾರ್ಗವು ಲಭಿಸಿ ಅವನ ಇಷ್ಟಾರ್ಥವು ಈಡೇರುವುದೆಂಬುದನ್ನು ಅವರು ದೃಢವಾಗಿ ನಂಬಿರುವರು.

ಭಗವದ್ವಿಭೂತಿ ಚಿಂತನೆ. ದೈವಿಕ ಸ್ವಭಾವ ಸಾಕ್ಷಾತ್ಕಾರ.

ಪ್ರಾರ್ಥನೆಯೆಂಬುದು ಭಗವದ್ವಿಭೂತಿ ಚಿಂತನೆಯೆಂದೂ, ಭಗವಂತನ ಸದ್ಗುಣಗಳನ್ನು ನೆನೆ ನೆನೆದು ಅವುಗಳನ್ನು ನಮ್ಮ ಅನುಷ್ಠಾನಕ್ಕೆ ತಂದುಕೊಂಡರೆ, ಅಲ್ಲಿಗೆ ದೈವಿಕ ಸ್ವಭಾವ ಸಾಕ್ಷಾತ್ಕಾರವಾದಂತಾಗಿ ಪ್ರಗತಿ ಸಾಧನೆಗೆ ಅನುಕೂಲಿಸುವುದೆಂದೂ ಮುಹಮ್ಮದೀಯರ ಭಾವನೆ. "ಭಗವಂತನಲ್ಲಿರುವ ಸದ್ಗುಣಗಳು ನಿಮ್ಮಲ್ಲಿಯೂ ನೆಲೆಗೊಳ್ಳುವಂತೆ ಮಾಡಿಕೊಳ್ಳಿರಿ" ಎಂಬುದೇ ಈ ವಿಷಯದಲ್ಲಿ ಮುಹಮ್ಮದನ ಉಪದೇಶ. ಆದರೂ, ಅಪರಿಪೂರ್ಣನಾದ ಜೀವಾತ್ಮನು ಪರಿಪೂರ್ಣನಾದ ಪರಮಾತ್ಮನ ಸ್ವಭಾವವನ್ನು ಪೂರ್ತಿಯಾಗಿ ಗ್ರಹಿಸುವುದು ಸಾಧ್ಯವೆಂಬುದು ಮುಹಮ್ಮದನ ಆಶಯವೇ ಅಲ್ಲ; ಜೀವಾತ್ಮನು ಎಷ್ಟನ್ನು ಗ್ರಹಿಸುವುದು ಸಾಧ್ಯವೋ ಅಷ್ಟನ್ನು ಮಾತ್ರ ಗ್ರಹಿಸಿ ಆಲೋಡನೆಗೆ ತಂದುಕೊಳ್ಳಬೇಕೆಂಬುದೇ ಅವನ ಅಭಿಪ್ರಾಯ. ಮನುಷ್ಯನು ಸೃಷ್ಟಿ ವೈಚಿತ್ರ್ಯವನ್ನು ಪರಿಶೀಲಿಸಿ, ಅದರಿಂದ ತೋರುವುದಕ್ಕನುಗುಣವಾಗಿ ಭಗವಂತನ ಗುಣಗಳು ಎಂತಹವೆಂಬುದನ್ನು ಅನುಮೇಯಿಸಿ, ಆ ಗುಣಗಳನ್ನು ಅನುಕರಣ ಮಾಡಬೇಕೆಂಬುದೇ ಮುಹಮ್ಮದನ ಅಭಿಪ್ರಾಯ. ಈ ಭಾಗದಲ್ಲಿ, ಮುಹಮ್ಮದನು ಭಗವಂತನ ಗುಣಗಳೆಂದು ತನಗೆ ತೋರಿದ ತೊಂಬತ್ತೊಂಬತ್ತು ಸದ್ಗುಣಗಳನ್ನು ಖುರಾನಿನಲ್ಲಿ ಸೂಚಿಸಿದ್ದಾನೆ; ಭಗವಂತನ ಆ ಸದ್ಗುಣಗಳನ್ನು ಮಾನವನು ಧ್ಯಾನಿಸುತ್ತಿರಬೇಕೆಂದೂ, ತನ್ನ ದುರ್ಗುಣಗಳನ್ನು ದಮನ

ಮಾಡಿ, ಭಗವಂತನ ಆ ಸದ್ಗುಣಗಳು ತನ್ನಲ್ಲಿ ನೆಲೆಗೊಳ್ಳುವಂತೆ ಮಾಡಿಕೊಳ್ಳಬೇಕೆಂದೂ ಬೋಧಿಸಿದ್ದಾನೆ. ಆಯಾ ಸದ್ಗುಣಗಳಿಗನುಸಾರವಾಗಿ ಮುಹಮ್ಮದನು ಭಗವಂತನನ್ನು ವಿವಿಧ ನಾಮಗಳಿಂದ ಸ್ತೋತ್ರ ಮಾಡಿರುವನು. ಅವುಗಳಲ್ಲಿ **ರಬ್, ರಹ್ಮಾನ್, ರಹೀಂ** ಎಂಬಿವೇ ಅತಿ ಮುಖ್ಯವಾದುವು. ಅವುಗಳ ಅರ್ಥವನ್ನು ಗ್ರಹಿಸಿದರೆ ಮುಹಮ್ಮದನು ಎಷ್ಟು ಉದಾತ್ತ ಭಾವದಿಂದ ಅವುಗಳನ್ನು ಕಲ್ಪಿಸಿರುವನೆಂಬುದು ಗೊತ್ತಾಗುವುದು; ಆಗ ನಮ್ಮ ದುರಭಿಮಾನವೂ ಮೌಢ್ಯವೂ ದೂರವಾಗುವುವು. ಈಶ್ವರ, ವಿಷ್ಣು, ನಾರಾಯಣ, ಶಂಕರ ಮುಂತಾದ ದಿವ್ಯ ನಾಮಗಳ ವಿಷಯದಲ್ಲಿಯೂ ಮುಹಮ್ಮದೀಯರು ಇದೇ ರೀತಿಯಲ್ಲಿ ಅರ್ಥಗ್ರಹಣಮಾಡಿದರೆ, ಅವರಿಗೂ ದುರಭಿಮಾನ ಮೌಢ್ಯಗಳು ದೂರವಾಗಿ ತೊಲಗಿ, ಅವರ ಮನಸ್ಸಿನಲ್ಲಿರುವ ಅವಜ್ಞತೆಯು ನಾಶ ಹೊಂದುವುದು. **ರಬ್** ಎಂದರೆ, ನಾನಾ ವಸ್ತುಗಳನ್ನು ಸೃಷ್ಟಿಮಾಡಿ ಅವಕ್ಕೆ ಬಗೆ ಬಗೆಯ ಸಾಮರ್ಥ್ಯಗಳನ್ನು ಕರುಣಿಸಿರತಕ್ಕವನು ಎಂದರ್ಥ. **ರಹ್ಮಾನ್** ಎಂದರೆ, ಕರುಣಾನಿಧಿಯಾಗಿ ಪ್ರಾಣಿಗಳ ಮೇಲಣ ದಯಾ ವಾತ್ಸಲ್ಯಗಳಿಂದ ಅವುಗಳ ಜೀವನಕ್ಕೆ ಬೇಕಾದ ವಿವಿಧ ಸಾಮಗ್ರಿಗಳನ್ನು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಸೃಷ್ಟಿಸಿ ಸಹಾಯ ಮಾಡಿರತಕ್ಕವನು ಎಂದರ್ಥ. **ರಹೀಂ** ಎಂದರೆ, ಅನುಕಂಪವುಳ್ಳವನಾಗಿರುವ ಫಲಪ್ರದಾಯಕನು ಎಂದರ್ಥ. ನಾವು ಮಾಡುವ ಸತ್ಕರ್ಮಗಳಿಗೆ, ಒಂದಕ್ಕೆ ಕೋಟಿ ಪಾಲಿನಷ್ಟು ಸತ್ಫಲವನ್ನು ಕರುಣಿಸತಕ್ಕ ಧರ್ಮಪ್ರಭುವು ಭಗವಂತನೆಂಬುದು ಈ ದಿವ್ಯ ನಾಮದ ತಾತ್ಪರ್ಯ.

ಮೇಲೆ ಸೂಚಿಸಿದಂತೆ, ಜೀವಾತ್ಮನ ಪ್ರಗತಿ ಸಾಧನೆಗೆ ಸಹಾಯವಾಗಲೆಂಬ ಉದ್ದೇಶದಿಂದ, ದಿನಕ್ಕೆ ಐದು ಸಾರಿ ಭಗವತ್ಪ್ರಾರ್ಥನೆಯು

**ಪ್ರಾರ್ಥನೆ**

ನಡೆಯಬೇಕೆಂದು ಮುಹಮ್ಮದನು ಗೊತ್ತುಮಾಡಿದ್ದಾನೆ. ಸ್ನಾನ ಮಾಡುವುದರಿಂದ ಬಹಿಶ್ಶುದ್ಧಿಯಾಗುವಂತೆಯೇ, ಪ್ರಾರ್ಥನೆಯಿಂದ ಅಂತಶ್ಶುದ್ಧಿಯುಂಟಾಗುವುದೆಂಬುದು ಮುಹಮ್ಮದನ ಅಭಿಪ್ರಾಯ. ನಮ್ಮ ನೈತಿಕ ನಿಷ್ಠೆಯು ಅಚಲವಾಗಿ ನೆಲೆಗೊಳ್ಳಬೇಕಾದರೆ, ಹಲವು ವೇಳೆ

ನಮ್ಮ ಹೃದಯುವನ್ನು ನಾವೇ ಪರೀಕ್ಷಿಸಿಕೊಂಡು ತಪ್ಪುಗಳನ್ನು ತಿದ್ದಿಕೊಳ್ಳುತ್ತ ಬರಬೇಕೆಂಬುದು ಮುಹಮ್ಮದನ ಅಭಿಮತ. ಭಗವಂತನನ್ನು ಧ್ಯಾನಿಸುತ್ತಲೂ, ಅವನ ಸದ್ಗುಣಗಳನ್ನು ಮನನ ಮಾಡುತ್ತಲೂ, ಯಾರು ಅವನನ್ನು ಅನುಕರಿಸಲು ಪ್ರಯತ್ನಿಸುವರೋ, ಅವರು ಮಾತ್ರವೇ ನೀತಿಯ ನೆಲೆಯನ್ನರಿತ ಸಾಧುಗಳೆಂದು ಮುಹಮ್ಮದನು ಬೋಧಿಸಿದ್ದಾನೆ. ಭಗವಂತನ ಸದ್ಗುಣಗಳು ನಮ್ಮ ಮನಸ್ಸಿಗೆ ಹೊಳೆಯಲನುಕೂಲಿಸುವಂತೆ ಪ್ರಾರ್ಥನೆಯಲ್ಲಿ ತಕ್ಕ ಪದಗಳನ್ನು ಅವನು ಜೋಡಿಸಿದ್ದಾನೆ. ಅದೇ ಪ್ರಾರ್ಥನೆಯೇ ಇಂದು ಕೂಡ ಅನೇಕ ಮಸೀದಿಗಳಲ್ಲಿ ನಡೆಯುತ್ತಿದೆ. ಅನೇಕ ಮಂದಿ ಮುಹಮ್ಮದೀಯರು ಮುಹಮ್ಮದನು ಗೊತ್ತುಮಾಡಿರುವಂತೆ ಇಂದಿಗೂ ದಿನಕ್ಕೈದು ಸಾರಿ ಭಗವಂತನಿಗೆ ಪ್ರಾರ್ಥನೆಯನ್ನು ಸಮರ್ಪಿಸುತ್ತಿದ್ದಾರೆ.

ಪ್ರಾರ್ಥನೆಯ ಪಾಠವನ್ನು ಗಿಳಿಗಳಂತೆ ದಿನಕ್ಕೈದು ಸಾರಿ ಒಪ್ಪಿಸಿಬಿಟ್ಟರೆ ಸಾಲದೆಂಬುದೂ, ಖುರಾನಿನಲ್ಲಿ ಹೇಳಿರುವಂತೆ ತದನುಗುಣವಾದ ಸದ್ವರ್ತನೆಯನ್ನೂ ಅನುಸರಿಸಬೇಕೆಂಬುದೂ ಮುಹಮ್ಮದನು ಬೋಧಿಸಿದ ಇಸ್ಲಾಂ ಮತದ ತತ್ತ್ವಗಳು. ರಹ್ಮಾನ್ ಮತ್ತು ರಹೀಂ ಎಂಬ ನಾಮಗಳಿಂದ ಶೋಭಿಸುವ ಭಗವಂತನು ಒಟ್ಟು ಮನುಷ್ಯತ್ವದೊಡನೆ ಯಾವ ರೀತಿಯಲ್ಲಿ ವರ್ತಿಸುತ್ತಿರುವನೋ, ಅದೇ ಉದಾಹರಣೆಯ ಮೇಲೆ, ಅದೇ ರೀತಿಯಲ್ಲಿ ಮನುಷ್ಯನೂ ಯಥಾ ಶಕ್ತಿಯಾಗಿ ಇತರರ ವಿಷಯದಲ್ಲಿ ವರ್ತಿಸಬೇಕೆಂಬುದು ಮುಹಮ್ಮದನ ಕಟ್ಟಾಜ್ಞೆ. ಮಾನವನು ಇತರರ ಕುಂದು ಕೊರತೆಗಳನ್ನರಿತು ಅವರಿಗೆ ಯಥಾ ಶಕ್ತಿಯಾಗಿ ಸಹಾಯ ಮಾಡಬೇಕು; ತನ್ನನ್ನು ಪ್ರಾರ್ಥಿಸದೆಯೇ ಅವರಿಗೆ ಸಹಾಯ ಮಾಡಲು ಸಿದ್ಧನಾಗಿರಬೇಕು. ಅದಕ್ಕಾಗಿಯೇ ಮುಹಮ್ಮದನು, "ನಿನ್ನ ಜೀವಮಾನದ ಪ್ರತಿ ಹಜ್ಜೆಯಲ್ಲಿಯೂ ಇತರರಿಗೆ ರಹ್ಮಾನನಾಗಿಯೂ (ಉಪಕಾರಿಯಾಗಿಯೂ), ರಹೀಮನಾಗಿಯೂ (ಕರುಣಾಳುವಾಗಿಯೂ) ಇರು. ಭಗವಂತನನ್ನು ಪ್ರೀತಿಸಲು ನಿನಗೆ ಇಚ್ಛೆಯಿದ್ದಲ್ಲಿ ಅವನು ಸೃಷ್ಟಿಸಿರುವ ಪ್ರಾಣಿಗಳನ್ನು ಪ್ರೀತಿಸು; ಅದರಿಂದಲೇ ಅವನು ಸುಪ್ರೀತ

ಸದ್ವರ್ತನೆ

ನಾಗುವನು" ಎಂದು ಹೇಳಿರುವುದು. ಪ್ರಾರ್ಥನೆಯ ಕಾಲದಲ್ಲಿ ನಾವು ಭಗವಂತನನ್ನು ಕುರಿತು ಹೇಳುವ ವಿವಿಧ ನಾಮಗಳಲ್ಲಿಯೂ ಸೂಚಿತವಾಗಿರುವ ಸದ್ಗುಣಗಳನ್ನು ಯಥಾಶಕ್ತಿಯಾಗಿ ನಾವು ನಮ್ಮ ಅನುಷ್ಠಾನದಲ್ಲಿ ತಂದುಕೊಳ್ಳುವುದೇ ನಿಜವಾದ ಭಗವದಾರಾಧನೆ ಎಂಬುದನ್ನು ಖುರಾನಿನಲ್ಲಿ ಮುಹಮ್ಮದನು ಘಂಟಾಘೋಷವಾಗಿ ಸಾರಿ ಹೇಳಿದ್ದಾನೆ. ಇದು ಒಟ್ಟು ಮನುಷ್ಯತ್ವಕ್ಕೇ ಅನುಗ್ರಹಿಸಿದ ಉಪದೇಶವಲ್ಲವೆ? ಇದರಂತೆಯೇ, ಬೈಬಲಿನಲ್ಲಿಯೂ ಭಗವದ್ಗೀತೆಯಲ್ಲಿಯೂ ಉಪದೇಶಿಸಿರುವ ಅಮೋಘ ತತ್ತ್ವಗಳೂ ಆಯಾ ಮತಸ್ಥರಿಗೆ ಮಾತ್ರವೇ ಅಲ್ಲದೆ ಒಟ್ಟು ಪ್ರಪಂಚಕ್ಕೇ ಉಪಾದೇಯವಾಗಿರುವುವು. ಮಾತ್ಸರ್ಯ ರಹಿತರಾದ ಸತ್ಪುರುಷರು ಯಾರೂ ಇದನ್ನು ಅಲ್ಲವೆನ್ನರು.

ಜೀವೇಶ್ವರ ಸಂಬಂಧ

ಈ ವಿಷಯದಲ್ಲಿ ಮುಹಮ್ಮದನು ಬೋಧಿಸಿರುವುದೇನೆಂದರೆ: ಜನರು ಉಚಿತ ರೀತಿಯಲ್ಲಿ ಭಗವಂತನನ್ನಾರಾಧಿಸುವುದರಿಂದ ಭಗವಂತನಿಗೆ ಯಾವ ಪ್ರಯೋಜನವೂ ಇಲ್ಲ; ಭಗವಂತನು ಒಬ್ಬನೇ ಎಂಬ ತತ್ತ್ವವನ್ನು ಮರೆತು, ವಿಗ್ರಹಗಳೇ ದೇವರುಗಳೆಂಬ ಭಾವನೆಯಿಂದಿದ್ದರೂ ಭಗವಂತನಿಗೆ ಯಾವುದೊಂದು ನಷ್ಟವೂ ಇಲ್ಲ; ಅದರಿಂದ ಅವನ ಯಶಸ್ಸಿಗೂ ಕುಂದಕವುಂಟಾಗದು. ಮನುಷ್ಯನು ತನ್ನ ಉದ್ಧಾರಕ್ಕಾಗಿಯೇ, ಭಗವಂತನು ಒಬ್ಬನೇ ಎಂಬುದನ್ನು ನಂಬಿ, ಅವನನ್ನು ಸರಿಯಾದ ರೀತಿಯಲ್ಲಿ ಆರಾಧಿಸಬೇಕು. ಭಗವಂತನ ಪ್ರತಿನಿಧಿಯಾಗಿ ಈ ಲೋಕದಲ್ಲಿರತಕ್ಕವನು ಮನುಷ್ಯನೇ. ಜೀವಾತ್ಮನು ತಾನು ಪರಮಾತ್ಮನ ಸೇವಕನಾಗಿಯೂ, ಅವನ ಪ್ರತಿನಿಧಿಯಾಗಿಯೂ ಈ ಲೋಕದಲ್ಲಿರತಕ್ಕವನೆಂಬುದನ್ನು ಗಮನಿಸಿ ಅದಕ್ಕನುಗುಣವಾಗಿ ವರ್ತಿಸಬೇಕು. ಭಗವಂತನ ಸೃಷ್ಟಿಯ ಉದ್ದೇಶವು ಭೂಲೋಕದಲ್ಲಿ ಮಾನವನ ಪ್ರಯತ್ನದಿಂದಲೇ ಸಾರ್ಥಕ್ಯವನ್ನು ಹೊಂದಬೇಕು. ಹೀಗಾದುದಕ್ಕೆ ಜಗತ್ಕಲ್ಯಾಣವೇ ಮುಖ್ಯ ಲಕ್ಷಣ. ಆದಕಾರಣ, ಮನುಷ್ಯನು ಭಗವಂತನ ಸದ್ಗುಣಗಳನ್ನು ತಾನೂ ಅನುಕರಿಸಿ ಅನುಷ್ಠಾನದಲ್ಲಿ ತಂದುಕೊಳ್ಳಬೇಕು. ಸೃಷ್ಟಿಯ ಸದುದ್ದೇಶವು ನೆರವೇರಲು ಇದೊಂದೇ ಮಾರ್ಗ.

ಭಗವಚ್ಚೇತನವು ಸಮಷ್ಟಿ ರೂಪದಿಂದ ಈ ಪ್ರಪಂಚದಲ್ಲಿ ಯಾವ ರೀತಿಯಾಗಿ ವರ್ತಿಸುತ್ತಿದೆಯೋ ಅದೇ ರೀತಿಯಾಗಿ ದೇಹವೆಂಬ ಸಣ್ಣ ಪ್ರಪಂಚದಲ್ಲಿ ಜೀವ ಚೇತನವೂ ವರ್ತಿಸಬೇಕು. ಮಾನವರು ಈ ವಿಧವಾಗಿ ಭಗವಂತನೊಡನೆ ಸಹಕರಿಸಿ ವರ್ತಿಸುತ್ತ, ಧ್ಯಾನ ಪರಾಯಣರಾಗಿ ಕಾಲವನ್ನು ಕಳೆಯಬೇಕು. ಆದಕಾರಣ, ಮತ ಧರ್ಮವನ್ನು ಪರಿಪಾಲಿಸುವುದು ಕೇವಲ ಪಾರಲೌಕಿಕ ಫಲವೊಂದಕ್ಕಾಗಿಯೇ ಅಲ್ಲ; ಇಹ ಪರಗಳೆರಡರಲ್ಲಿಯೂ ಮತ ಧರ್ಮಾನುಷ್ಠಾನದ ದೆಸೆಯಿಂದ ನಮ್ಮ ಜನ್ಮವು ಸಾರ್ಥಕವಾಗಬೇಕಾಗಿದೆ. ಹಾಗಾಗಬೇಕಾದರೆ ನಾವೆಲ್ಲರೂ ಭಗವಂತನ ಸೇವಕರೆಂದು ಬಗೆದು ಅವನನ್ನು ಪ್ರಾರ್ಥಿಸುವುದರಿಂದ ಮಾತ್ರವೇ ತೃಪ್ತಿಹೊಂದದೆ ನಮ್ಮಲ್ಲಿ ಅವ್ಯಕ್ತವಾಗಿ ಅಡಗಿರುವ ಸದ್ಗುಣಗಳನ್ನೂ ಶಕ್ತಿ ಸಾಮರ್ಥ್ಯಗಳನ್ನೂ ಪರಿಸ್ಫುಟಗೊಳಿಸಿ, ಭಗವಂತನ ಪ್ರತಿ ನಿಧಿಗಳೆಂಬ ಪವಿತ್ರವಾದ ಹೆಸರಿಗೆ ನಾವು ಅರ್ಹರಾಗಿ ಪರಿಣಮಿಸಬೇಕಾದುದೂ ಅತ್ಯಾವಶ್ಯಕ.

**ಜೀವಾತ್ಮನು ಪರಿಶುದ್ಧನು**

ಜೀವಾತ್ಮನು ಸ್ವಭಾವತಃ ಪರಿಶುದ್ಧನೆಂಬುದೂ, ಪಾಪವು ದೇಹಧಾರಣೆ ಮಾಡಿದ ಮೇಲೆ ಆಗಂತುಕವಾಗಿ ಸಂಘಟಿಸತಕ್ಕುದೆಂಬುದೂ ಇಸ್ಲಾಂ ಮತದ ಸಿದ್ಧಾಂತಗಳು. ಪ್ರಾರಬ್ಧ ಕರ್ಮದ ವಿಚಾರವನ್ನೂ, ಪುನರ್ಜನ್ಮವುಂಟೆಂಬ ವಿಚಾರವನ್ನೂ ಮುಹಮ್ಮದೀಯರು ನಂಬುವುದಿಲ್ಲ. ಭಗವಂತನು ಮಾಡಿರುವ ಸಮಗ್ರ ಸೃಷ್ಟಿಯೂ ಉತ್ತಮವಾದುದೆಂಬುದೇ ಅವರ ಅಭಿಪ್ರಾಯ. "ಭಗವಂತನು ಸೃಷ್ಟಿಸಿರುವ ಸಮಸ್ತ ವಸ್ತುಗಳೂ ಒಳ್ಳೆಯುವೇ. ಮನುಷ್ಯತ್ವವು ಪರಿಶುದ್ಧವಾದುದು; ಅದು ಮಂಗಳಕರವಾದುದೂ ಅಹುದು. ಕ್ರಮ ತಪ್ಪಿ ಕೆಲಸ ಮಾಡುವುದೂ, ಅತ್ಯಾಚಾರವೂ, ಪಾಪ ಮಯುವೆನಿಸಿ ದುಃಖ ಹೇತುಗಳಾಗುವುವು. ಅಫೀಮೂ, ರಸ ಗಂಧಕ ಪಾಷಾಣಾದಿಗಳೂ ಯಾವ ಯಾವ ಕಾರ್ಯಕ್ಕಾಗಿ ಸೃಷ್ಟಿಯಾಗಿವೆಯೋ ಆ ಕಾರ್ಯಗಳಿಗಾಗಿಯೇ ಅವನ್ನು ಸರಿಯಾದ ಪ್ರಮಾಣದಲ್ಲಿ ಉಪಯೋಗಿಸಿದರೆ, ಭಗವಂತನನುಗ್ರಹಿಸಿದ ಮಂಗಳ ದ್ರವ್ಯಗಳೆನಿಸಿಕೊಳ್ಳುವುವು; ಇಲ್ಲದೆ, ವಿರುದ್ಧವಾದ ಉದ್ದೇಶಗಳಿಗಾಗಲಿ, ಹೆಚ್ಚಿನ

ಪ್ರಮಾಣದಲ್ಲಾಗಲಿ ಉಪಯೋಗಿಸಿದರೆ ಪ್ರತಿಯೊಂದೂ ಮಾರಕ ದ್ರವ್ಯ ವಾಗಿ ಪರಿಣಮಿಸುವುದು. ಭಗವಂತನ ಸೃಷ್ಟಿಗೆ ಸೇರಿದ ಉತ್ತಮ ವಸ್ತುಗಳನ್ನು ಕೂಡ ಮಿತಿ ಮೀರಿ ಉಪಯೋಗಿಸಿದರೆ ಅವೂ ಕೇವಲ ವಿರೋಧಕರವಾಗಿ ಪರಿಣಮಿಸುತ್ತವೆ" ಎಂದು ಖುರಾನಿನಲ್ಲಿ ಹೇಳಿದೆ.

ಪರಸ್ಪರ ಭೇದ ಭಾವಗಳಿಲ್ಲದೆ ಒಕ್ಕಟ್ಟಿನಿಂದಿರುವ ವಿಷಯದಲ್ಲಿ ಇಂದಿಗೂ ಮಹಮ್ಮದೀಯರು ಸುಪ್ರಸಿದ್ಧರು. ಇಸ್ಲಾಂ ಧರ್ಮದ ಮುಂದೆ ಮಹಮ್ಮದೀಯರೆಲ್ಲರೂ ಸಮಾನರೆಂಬುದೇ ಅವರ ಭಾವನೆ. ಎಲ್ಲರೂ ಒಬ್ಬ ಭಗವಂತನ ಭಕ್ತರಾದ ಮೇಲೆ, ಒಬ್ಬ ಗುರುವಿನ ಶಿಷ್ಯರಾದಮೇಲೆ, ಭೇದ ಭಾವಗಳೆಂಬ ಅವ್ಯವಸ್ಥೆಯೇಕೆಂಬುದೇ ಅವರ ಪ್ರಶ್ನೆ. ಮಹಮ್ಮದೀಯ ರಲ್ಲಿಯೂ ಸುನ್ನೀ, ಷಿಯಾ ಮುಂತಾದ ಪಂಗಡ ವಿಭೇದಗಳಿವೆ. ಆದರೂ, ಒಟ್ಟಿನಲ್ಲಿ ನೋಡಿದರೆ, ಅವರಲ್ಲಿ ನೆಲೆಸಿರುವ ಭ್ರಾತೃ ಭಾವವೂ ಐಕ ಮತ್ಯವೂ ಅಭಿನಂದ್ಯವೆನ್ನಲು ಅಡ್ಡಿಯಿಲ್ಲ. ಮಕ್ಕಾ ಯಾತ್ರೆಯ ಕಾಲದಲ್ಲಿ ಈ ಗುಣಗಳು ಮತ್ತೂ ಪ್ರಕಾಶಕ್ಕೆ ಬರುವುವಂತೆ. ನಾನಾ ದೇಶಗಳಿಗೆ ಸೇರಿದ ನಾನಾ ಭಾಷೆಗಳನ್ನಾಡುವ ಲಕ್ಷೋಪಲಕ್ಷ ಜನರು ಅಲ್ಲಿ ಒಟ್ಟುಗೂಡಿದರೂ, ಅವರೆಲ್ಲರೂ ಕೇವಲ ಸ್ವಕೀಯರಂತೆಯೇ ವರ್ತಿಸುತ್ತ, ಎಷ್ಟೋ ಕಾಲದಿಂದ ಒಟ್ಟಿಗಿದ್ದು ಪ್ರೀತಿ ಮಮತೆಗಳನ್ನು ಗಳಿಯಿಸಿಕೊಂಡವರಂತೆ ಅನ್ಯೋನ್ಯವಾಗಿ ಯಾತ್ರೆಯನ್ನು ಜರುಗಿಸು ವರಂತೆ. ಮಹಮ್ಮದನ ಉಪದೇಶವು ಕಾರ್ಯ ರೂಪದಲ್ಲಿ ಪರಿವರ್ತಿತ ವಾಗಿ ಅದರ ಮಹಿಮೆಯು ಇಂದಿಗೂ ಅಚ್ಚಳಿಯದೆ ನಿಂತಿರುವುದಕ್ಕೆ ಇದಕ್ಕಿಂತಲೂ ಹೆಚ್ಚಾದ ನಿದರ್ಶನವು ಬೇಕಾಗಿಲ್ಲ.

**ಭ್ರಾತೃ ಭಾವ**

ಮಹಮ್ಮದೀಯರು ಇತರ ಮತ ಸ್ಥಾಪಕರನ್ನೂ ಗೌರವಿಸ ಬೇಕೆಂಬುದು ಆ ಮತದ ಮತ್ತೊಂದು ಮುಖ್ಯ ತತ್ತ್ವ. ಇದನ್ನು ಆಚರಣೆಗೆ ತಾರದ ಮಹಮ್ಮದೀಯರು ಅನೇಕ ಮಂದಿ ಇರಬಹುದಾದರೂ ಅದಕ್ಕೆ ಮಹಮ್ಮದನು ಎಂದಿಗೂ ಹೊಣೆಯಲ್ಲ. ಋಷಿಗಳ ಮತ್ತು ಸ್ಮೃತಿ ಕಾರರ ಆದೇಶಗಳಿಗೆ ವಿರುದ್ಧವಾಗಿ ಕೆಲವರು ಭಾರತೀಯರು ವರ್ತಿಸಿ

**ಮತ ಸ್ಥಾಪಕರುಗಳ ಮೇಲಣ ಗೌರವ**

ಪರೆ, ಅವರ ಈ ವಿಧದ ವರ್ತನೆಗೆ ಋಷಿಗಳನ್ನೂ ಸ್ಮೃತಿಕಾರರನ್ನೂ ದೂರಬಹುದೆ? ಭಗವಂತನು ಸಮಷ್ಟಿ ಭಾವನೆಯಿಂದ ನೋಡತಕ್ಕವನಾದುದರಿಂದ ಎಲ್ಲ ಜನಾಂಗಗಳೂ ಉದ್ಧಾರವಾಗಬೇಕೆಂಬುದು ಅವನ ಘನವಾದ ಉದ್ದೇಶ. ಆದುದರಿಂದ ದೇಶ ಕಾಲಗಳಿಗನುಗುಣವಾಗಿ ಅವನು ಎಲ್ಲ ಜನಾಂಗಗಳಿಗೂ ಮತ ಸ್ಥಾಪಕರನ್ನು ತಪ್ಪದೆ ಕಳುಹಿಸಿಕೊಟ್ಟೇ ಇರುತ್ತಾನೆ. ಆದಕಾರಣ, ಸ್ವಮತದಲ್ಲಿ ವಿಶೇಷ ಶ್ರದ್ಧೆಯನ್ನಿಟ್ಟುಕೊಂಡಿದ್ದರೂ, ಅನ್ಯ ಮತಗಳಲ್ಲಿ ದ್ವೇಷವನ್ನು ಬೆಳೆಯಿಸದೆ ಇರುವುದೇ ವಿವೇಕಿಗಳ ಲಕ್ಷಣ. ಮುಹಮ್ಮದನು ಈ ತತ್ತ್ವವನ್ನು ಚೆನ್ನಾಗಿ ಅರಿತಿದ್ದನು. ನಮ್ಮ ಈ ಭಾರತ ಭೂಮಿಯಲ್ಲಿಯೂ ಇದೇ ತತ್ತ್ವವು ಎಷ್ಟೋ ಕಾಲಕ್ಕೆ ಹಿಂದಿನಿಂದಲೂ ರೂಢ ಮೂಲವಾಗಿ ನೆಲೆಗೊಂಡಿದೆ. ಆದುದರಿಂದಲೇ ಪ್ರಾಚೀನ ಕಾಲದಿಂದಲೂ, ನಾನಾ ಮತ ಸಿದ್ಧಾಂತಗಳನ್ನು **ದರ್ಶನ**ಗಳೆಂಬ (View-points) ಒಂದೇ ಹೆಸರಿನಿಂದ ಕರೆಯುವುದು ಇಲ್ಲಿಯ ವಾಡಿಕೆ. **ಸರ್ವದರ್ಶನ ಸಂಗ್ರಹ**ವೆಂಬ ಗ್ರಂಥವು ಸುಪ್ರಸಿದ್ಧವಾದುದು.

ಈ ವಿಚಾರವು ಹಾಗಿರಲಿ; ಎಲ್ಲ ಮತ ಸ್ಥಾಪಕರೂ ಸಿದ್ಧರ್ಷಿಗಳಾದ ಮಹಾ ಪುರುಷರೆಂದೇ ಮುಹಮ್ಮದನ ಭಾವನೆ. ಯೇಸು ಕ್ರಿಸ್ತನೇ ಮುಂತಾದ ಮತ ಸ್ಥಾಪಕರನ್ನು ಅವನು ಗೌರವಿಸಿದ್ದಾನೆ. ಅನ್ಯ ಮತ ಸಿದ್ಧಾಂತಗಳನ್ನು ಖಂಡನೆ ಮಾಡದೆ ಸ್ವಮತ ಸಿದ್ಧಾಂತವನ್ನು ರೂಢ ಮೂಲವಾಗಿ ಸ್ಥಾಪಿಸುವುದು ಸಾಧ್ಯವಲ್ಲದಿದ್ದರೂ, ಅನ್ಯ ಮತ ಸ್ಥಾಪಕರಲ್ಲಿ ದ್ವೇಷವನ್ನೂ ಅವಜ್ಞತೆಯನ್ನೂ ತೋರಿಸದೆಯೇ ಈ ಉದ್ದೇಶವನ್ನು ಸಾಧಿಸಿಕೊಳ್ಳಬಹುದು. ಅನೇಕ ಮಂದಿ ಮಹನೀಯರು ಹಾಗೆ ಮಾಡಿದ್ದಾರೆ; ಅಂಥವರಲ್ಲಿ ಮುಹಮ್ಮದನೂ ಒಬ್ಬನು. "ಹಿಂದೆ, ಭಗವಂತನ ಅನುಗ್ರಹದಿಂದ ಮತ ಸ್ಥಾಪಕರನ್ನು ಪಡೆಯದೆ ಇದ್ದ ಯಾವ ಜನಪದವೂ ಈ ಭೂಮಂಡಲದಲ್ಲಿಲ್ಲ" ಎಂಬುದಾಗಿಯೂ, "ಎಲೈ ಮುಹಮ್ಮದನೆ! ನಿನಗೆ ನನ್ನಿಂದ (ಭಗವಂತನಿಂದ) ಅನುಗ್ರಹಿಸಲ್ಪಟ್ಟಿರುವ ಇಸ್ಲಾಂ ಮತದಲ್ಲಿಯೂ, ಹಿಂದೆ ಇತರರಿಗೆ ಅನುಗ್ರಹಿಸಲ್ಪಟ್ಟಿರುವ ಇತರ ಮತಗಳಲ್ಲಿಯೂ ಗೌರವವನ್ನಿಟ್ಟು, ಅವೆಲ್ಲವೂ ನನ್ನಿಂದಲೇ

ಬಂದವುಗಳೆಂದು ಯಾರು ನಂಬುವರೋ, ಅವರೇ ನಿಜವಾದ ಮಹಮ್ಮದೀಯರು" ಎಂಬುದಾಗಿಯೂ ಖುರಾನಿನಲ್ಲಿ ಹೇಳಿದೆ. ಆದರೆ, ಖುರಾನಿನಲ್ಲಿ ಕೆಲವು ಮಂದಿ ಮತ ಪುರುಷರ ಹೆಸರುಗಳನ್ನು ಮಾತ್ರ ಹೇಳಿರುವುದರಿಂದ, ಅವರು ಮಾತ್ರವೇ ಭಗವಂತನ ಅನುಗ್ರಹದಿಂದ ಅವತರಿಸಿದವರೆಂದೂ, ಉಳಿದವರು ಅಲ್ಲವೆಂದೂ ಶಂಕೆಯುಂಟಾಗದಿರುವಂತೆ ಖುರಾನಿನಲ್ಲಿ, "ನಿನಗೆ ಇದುವರೆಗೆ ತಿಳಿಸಿರುವ ಮತ ಪುರುಷರನ್ನೂ, ತಿಳಿಸದೆ ಇರುವ ಇತರ ಮತ ಪುರುಷರನ್ನೂ ಲೋಕಾನುಗ್ರಹಾರ್ಥವಾಗಿ ನಾನೇ (ಭಗವಂತನೇ) ಕಳುಹಿಸಿಕೊಟ್ಟೆನು" ಎಂದೂ ಹೇಳಿದೆ. ಇದನ್ನು ಓದಿದಾಗ ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು, ಯಾವ ಯಾವ ಮಾಹಾತ್ಮ್ಯಗಳು ಎಲ್ಲೆಲ್ಲಿ ಕಂಡುಬಂದರೂ ಅವುಗಳೆಲ್ಲ ತನ್ನಿಂದಲೇ ಅನುಗ್ರಹಿಸಲ್ಪಟ್ಟವುಗಳೆಂದು ಭಾವಿಸಬೇಕೆಂಬುದಾಗಿ ಪಾರ್ಥನಿಗೆ ಅಪ್ಪಣೆಕೊಡಿಸಿರುವುದು ನೆನಪಿಗೆ ಬರುವುದು.

**ಪರ ಮತ ಸಹಿಷ್ಣುತೆ**

ಅನ್ಯಮತಗಳ ಆಚಾರ್ಯರನ್ನು ಗೌರವಿಸಬೇಕೆಂಬ ನಿಯಮವು ಇಸ್ಲಾಂ ಮತ ಧರ್ಮಗಳಲ್ಲೊಂದಾಗಿರುವುದರಿಂದ ಪರ ಮತ ಸಹಿಷ್ಣುತೆಯು ಸ್ವತಸ್ಸಿದ್ಧವಾಯಿತು. ಒಟ್ಟಿನಲ್ಲಿ ನೋಡಿದರೆ, ಎಲ್ಲ ಮತಗಳ ಮೂಲ ತತ್ತ್ವಗಳೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಎಂದು ಹೇಳಬಹುದು. ಆದಕಾರಣ, ತತ್ತ್ವವೇತ್ತರಲ್ಲಿ ಪರಸ್ಪರ ದ್ವೇಷವಿರುವುದಿಲ್ಲ. ಮಹಮ್ಮದನೂ ತನ್ನ ರಾಷ್ಟ್ರದಲ್ಲಿದ್ದ ಅನ್ಯಮತೀಯರಾದ ಯೆಹೂದ್ಯರೂ ಕ್ರೈಸ್ತರೂ ತಮ್ಮ ತಮ್ಮ ಮತಗಳಿಗನುಸಾರವಾಗಿ ವರ್ತಿಸುತ್ತ ಸುರಕ್ಷಿತವಾಗಿರುವಂತೆ ಶಾಸನ ಮಾಡಿದ್ದನು. "ಮತ ವಿಚಾರಗಳಲ್ಲಿ ಬಲಾತ್ಕಾರವು ತಕ್ಕುದಲ್ಲ" ಎಂದು ಖುರಾನಿನಲ್ಲಿ ಹೇಳಿರುವುದನ್ನು ತಾನು ಆಚರಣೆಯಲ್ಲಿ ತಂದನು. ತನ್ನ ಮತ ಬೋಧಕರನ್ನು ಕಳುಹಿಸಿಕೊಡುವಾಗ, ಈ ಅಂಶವನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡು, "ಜನರಲ್ಲಿ ಅನುನಯಪರರಾಗಿ ವರ್ತಿಸಿರಿ; ಅವರೊಡನೆ ದುಡುಕಿ ನಡೆಯಬೇಡಿರಿ; ಅವರಿಗೆ ಸಂತೋಷವಾಗುವಂತೆ ಮಾತನಾಡಿರಿ; ಅವರನ್ನು ದೋಷಯುತರೆಂದು ದೂಷಿಸಬೇಡಿರಿ; ಅನ್ಯಮತ ಗ್ರಂಥ

ಗಳನ್ನು ವ್ಯಾಸಂಗ ಮಾಡಿದವರನೇಕರು, ಸ್ವರ್ಗ ಸುಖವನ್ನು ಪಡೆಯುವ ಸಾಧನವೇನೆಂದು ನಿಮ್ಮನ್ನು ಕೇಳಿದರೆ, ಸತ್ಯವನ್ನರಿತು ಸತ್ಕರ್ಮಾಚರಣೆ ಮಾಡುವುದೇ ಆ ಸಾಧನವೆಂದು ಅವರಿಗೆ ಒಳ್ಳೆಯ ಮಾತಿನಿಂದ ಉತ್ತರ ಹೇಳಿರಿ'' ಎಂದು ಮುಹಮ್ಮದನು ಅವರಿಗೆ ಹೇಳುತ್ತಿದ್ದನು. ಇಷ್ಟಪಟ್ಟವರನ್ನು ಮಾತ್ರವೇ ಇಸ್ಲಾಂ ಮತಕ್ಕೆ ಸೇರಿಸಿಕೊಳ್ಳಬೇಕೆಂಬುದು ಅವನ ಆಶಯವೆಂದು ಇದರಿಂದ ವ್ಯಕ್ತವಾಗುವುದಿಲ್ಲವೆ? ನಜ್ರಾನಿನ ಕ್ರೈಸ್ತರಿಗೆ ಅವನು ಕೊಟ್ಟ ಸನ್ನದಿನಲ್ಲಿ ಬರುವ ಒಕ್ಕಣೆ ಇದು :—''ನಜ್ರಾನ್ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವ ಕ್ರೈಸ್ತರನ್ನು, ಅವರ ತನು ಧನಗಳಿಗೂ ಅವರ ಮತಕ್ಕೂ ಅಪಾಯಬಾರದಂತೆ, ಸುರಕ್ಷಿತವಾಗಿ ನೋಡಿಕೊಳ್ಳಲಾಗುವುದೆಂದು ಪೈಗಂಬರ್‌ ಮುಹಮ್ಮದನು ವಾಗ್ದಾನ ಮಾಡಿ ಹೊರಡಿಸಿರುವ ಸನ್ನದು :—ಕ್ರೈಸ್ತರ ಮತಾಚಾರಗಳ ವಿಷಯದಲ್ಲಿ ಯಾರೂ ಅವರನ್ನು ಆತಂಕಪಡಿಸಲಾಗದು; ಅವರ ಹಕ್ಕು ಬಾಧ್ಯತೆಗಳಿಗೆ ಯಾವ ಲೋಪವೂ ಬರಬಾರದು. ಬಿಷಪ್, ಮಂಕ್ ಮುಂತಾದ ಕ್ರೈಸ್ತ ಮತಾಧಿಕಾರಿಗಳು ಮುಹಮ್ಮದೀಯರ ದೆಸೆಯಿಂದ ಪದಚ್ಯುತರಾಗುವ ಭಯವಿಲ್ಲದೆ, ಅವರ ಸಮಸ್ತ ಹಕ್ಕುಗಳನ್ನೂ ಈಗಿರುವಂತೆಯೇ ಮುಂದೆಯೂ ನಿರಾತಂಕವಾಗಿ ಸಾಧಿಸಿಕೊಳ್ಳುತ್ತ ಬರಬಹುದು. ಕ್ರೈಸ್ತರು ಆರಾಧಿಸುವ ವಿಗ್ರಹಗಳನ್ನಾಗಲಿ, **ಕ್ರಾಸು**ಗಳೆಂಬ ತಿಕಡಿಗಳನ್ನಾಗಲಿ, ಮುಹಮ್ಮದೀಯರು ನಾಶಪಡಿಸಲಾಗದು. ಕ್ರೈಸ್ತರಿಗೆ ಮುಸಲ್ಮಾನರ ದೆಸೆಯಿಂದಾಗಲಿ, ಮುಹಮ್ಮದೀಯರಿಗೆ ಕ್ರೈಸ್ತರ ದೆಸೆಯಿಂದಾಗಲಿ ಯಾವ ವಿಧವಾದ ಹಿಂಸೆಯೂ ಇರಬಾರದು. ಕ್ರೈಸ್ತರಿಂದ ಮತದ ತೆರಿಗೆ ಯಾವುದನ್ನೂ ಎತ್ತಲಾಗದು. ನಮ್ಮ ಸೈನಿಕರಿಗೆ ಅವರು ಆಹಾರವನ್ನು ಒದಗಿಸಬೇಕೆಂದು ನಿರ್ಬಂಧಪಡಿಸಬಾರದು.'' ಅರಬ್ಬೀ ದೇಶದಲ್ಲಿ ವಾಸವಾಗಿದ್ದ ಅಗ್ನಿಯ ಆರಾಧಕರಾದ ಪಾರ್ಸಿಯವರನ್ನೂ ಸುರಕ್ಷಿತವಾಗಿ ನೋಡಿಕೊಳ್ಳುವಂತೆ ಮುಹಮ್ಮದನು ಅವರಿಗೆ ಸನ್ನದನ್ನು ಕೊಟ್ಟಿದ್ದನು. ಯೆಹೂದ್ಯರಿಗೂ ಅಂತೆಯೇ. ನಸಿರುದ್ದೀನ್ ಮುಹಮ್ಮದ್, ಹುಮಾಯೂನ್, ಅಕ್ಬರ್ ಮುಂತಾದವರು ಈ ತತ್ತ್ವವನ್ನರಿತು ತದನುಗುಣ

ವಾಗಿ ವರ್ತಿಸುತ್ತಿದ್ದರು; ಉಳಿದವರು ಇದನ್ನು ಲಕ್ಷಿಸದೆ ಕೇವಲ ದುರಭಿಮಾನದಿಂದ ವಿಪರೀತ ವರ್ತನೆಯನ್ನು ಕೈಕೊಂಡರು. ಘಜಸಿಯ ಮುಹಮ್ಮದನೇ ಮುಂತಾದವರು ಇಸ್ಲಾಂ ಮತದ ಈ ಉದಾತ್ತ ತತ್ತ್ವವನ್ನನುಸರಿಸಬಾರದಾಗಿದ್ದಿತೆ?

ಯುದ್ಧೋದ್ಯಮದಿಂದ ಮತ ಪ್ರಸಾರಣೆ ಮಾಡಲು ಅನುಮತಿಯಿಲ್ಲ.

ಮತ ಪ್ರಸಾರಣೆಗಾಗಿ ಯುದ್ಧಮಾಡುವುದಕ್ಕೆ ಅವಕಾಶಕೊಟ್ಟಿದೆ ಎಂಬ ಅಪರಾಧವನ್ನು ಇಸ್ಲಾಂ ಮತದ ಮೇಲೆ ಹೇರುವುದು ನ್ಯಾಯವಲ್ಲ. ದುರಭಿಮಾನದಿಂದ ಕೂಡಿದ ಕೆಲವು ಮಂದಿ ಘಾತುಕರು ನಡೆಯಿಸಿದ ಅತ್ಯಾಚಾರಗಳಿಗಾಗಿ ಇಸ್ಲಾಂ ಮತಕ್ಕೇ ಈ ವಿಧದ ಅಪವಾದವು ಬಂದಿದೆ. ಮುಹಮ್ಮದೀಯರು ಇತರ ಮತ ಸಿದ್ಧಾಂತಗಳನ್ನು ಅವಲಂಬಿಸಬೇಕಾದ ಆವಶ್ಯಕತೆಯಿಲ್ಲದಿದ್ದರೂ, ಅವರು ಅಂತಹ ಮತಗಳ ವಿಷಯವಾಗಿ ದೋಷಾರೋಪಣೆ ಮಾಡಕೂಡದೆಂದೂ, ಎಲ್ಲ ಮತ ಸ್ಥಾಪಕರ ವಿಷಯದಲ್ಲಿಯೂ ಅವರು ಗೌರವದಿಂದಿರಬೇಕೆಂದೂ, ಮುಹಮ್ಮದನು ಬೋಧಿಸಿದ್ದನು. ಆದಕಾರಣ, ಅನ್ಯಮತೀಯರ ಮೇಲೆ ಯುದ್ಧಮಾಡಿ ಅವರನ್ನು ಬಲಾತ್ಕಾರದಿಂದ ಇಸ್ಲಾಂ ಮತಕ್ಕೆ ಸೇರಿಸಿಕೊಳ್ಳಲು ಮುಹಮ್ಮದನು ಅನುಮತಿಯನ್ನು ಕೊಟ್ಟು ತಾನೂ ಅದೇ ರೀತಿಯಲ್ಲಿ ವರ್ತಿಸಿದನೆಂದು ಹೇಳುವುದೂ, ಕತ್ತಿಯನ್ನು ಝುಳಪಿಸಿ ಪ್ರಾಣಭೀತಿಯನ್ನು ಹುಟ್ಟಿಸಿ ಜನರು ಇಸ್ಲಾಂ ಮತವನ್ನವಲಂಬಿಸುವಂತೆ ಮಾಡಬಹುದೆಂದು ಖುರಾನಿನಲ್ಲಿ ಸೂಚನೆಯಿದೆಯೆಂದು ಹೇಳುವುದೂ ಸುತರಾಂ ನ್ಯಾಯವಲ್ಲ. ಯಾರಾದರೂ ಧೂರ್ತರು ಹಾಗೆ ಮಾಡಿದ್ದರೆ, ಅದಕ್ಕೆ ಇಸ್ಲಾಂ ಮತವು ಹೊಣೆಯಲ್ಲ.

ಯುದ್ಧಕ್ಕೆ ಅನುಮತಿ

ಯುದ್ಧ ಮಾಡಲು ಮುಹಮ್ಮದನು ಅನುಮತಿಯನ್ನು ಕೊಟ್ಟಿದ್ದರೂ ಯಾವ ಸಂದರ್ಭಗಳಲ್ಲಿ ಯುದ್ಧ ಮಾಡಬಹುದೆಂದು ಹೇಳಿರುವನೆಂಬ ಅಂಶವನ್ನು ನಾವು ಗಮನಿಸಬೇಕು. ತಮ್ಮ ಮತ ಧರ್ಮಗಳಿಗೆ ಚ್ಯುತಿಯುಂಟಾಗುವಂತೆ ಇತರರು ಕತ್ತಿಯನ್ನೆತ್ತಲು ಸಿದ್ಧರಾದರೆ, ಆಗ ಧರ್ಮೋದ್ಧಾರಕ್ಕಾಗಿ ಅಗತ್ಯವಾಗಿ ಯುದ್ಧ ಮಾಡಬಹುದೆಂಬುದು

ಇಸ್ಲಾಂ ಮತದ ನಿಯಮ. ಖುರಾನಿನ ಕೆಲವು ಹೇಳಿಕೆಗಳಿಂದ ಇದನ್ನು ಸಮರ್ಥಿಸಬಹುದು : "ವಿಧರ್ಮಿಗಳನ್ನು ದಂಡನೆಗೆ ಗುರಿಮಾಡುವವರೇ ಇಲ್ಲದೆ ಹೋಗಿದ್ದರೆ, ಅಥವಾ ಭಗವಂತನು ಇದಕ್ಕೆ ಅವಕಾಶವನ್ನೇ ಕಲ್ಪಿಸದೆ ಹೋಗಿದ್ದರೆ, ಚರ್ಚುಗಳು, ಮಸೀದಿಗಳು ಮುಂತಾದ ಪ್ರಾರ್ಥನಾ ಮಂದಿರಗಳೆಲ್ಲ ನೆಲ ಸಮವಾಗಿ, ಭಗವನ್ನಾಮ ಸಂಕೀರ್ತನೆಗೇ ಅವಕಾಶ ತಪ್ಪಿಹೋಗುತ್ತಿದ್ದಿತು." "ಮತಗಳು ಏರ್ಪಟ್ಟಿರುವುದು ಭಗವಂತನ ಸೇವೆಗಾಗಿ. ಆದಕಾರಣ, ಧರ್ಮಾಚರಣೆಗುಂಟಾಗಿರುವ ತೊಂದರೆಗಳು ತಪ್ಪುವ ವರೆಗೂ ಅದಕ್ಕೆ ಕಾರಣರಾದ ವಿಧರ್ಮಿಗಳ ಮೇಲೆ ಯುದ್ಧಮಾಡಿರಿ." ಇವು ಕೇವಲ ಸ್ಫೂರ್ತಿದಾಯಕವಾದ ಉಪದೇಶಗಳು. ಮುಹಮ್ಮದನು ಅನೇಕ ಸಾರಿ ಯುದ್ಧ ಮಾಡಿದರೂ, ತನ್ನನ್ನೂ ತನ್ನ ಮತವನ್ನೂ ಧ್ವಂಸಮಾಡುವ ಉದ್ದೇಶದಿಂದ ಕಾಳಗಕ್ಕೆ ಅನುವಾದವರೊಡನೆಯೂ, ಮತ ಪ್ರಸಾರಣೆಗೆ ಅಡ್ಡಿಬಂದು ತನ್ನ ಅನುಯಾಯಿಗಳನ್ನು ಹಿಂಸಿಸಿದವರೊಡನೆಯೂ ಮಾತ್ರವೇ ಅವನು ಯುದ್ಧಮಾಡಿದನು. "ನಿಮ್ಮ ಮೇಲೆ ಯುದ್ಧಕ್ಕೆ ಬಂದವರೊಡನೆ ಭಗವಂತನ ಕಾರ್ಯಕ್ಕಾಗಿ ಎಷ್ಟು ಆವಶ್ಯಕವೋ ಅಷ್ಟರ ಮಟ್ಟಿಗೆ ಮಾತ್ರ ಯುದ್ಧಮಾಡಿರಿ; ಈ ಹದ್ದನ್ನು ಮೀರಿ ನಡೆಯಬೇಡಿರಿ. ಏಕೆಂದರೆ, ಹದ್ದು ಮೀರಿ ವರ್ತಿಸುವವರನ್ನು ಭಗವಂತನೆಂದಿಗೂ ಪ್ರೀತಿಸನು" ಎಂಬುದು ಖುರಾನಿನ ಕಟ್ಟಪ್ಪಣೆ. ಶತ್ರುಗಳಲ್ಲಿ ಕೂಡ ಮುಹಮ್ಮದನಿಗೆ ಸಹಾನುಭೂತಿಯಿದ್ದಿತೆಂಬುದು ಖುರಾನಿನಲ್ಲಿರುವ ಮುಂದಣ ವಾಕ್ಯಗಳಿಂದ ಸ್ಪಷ್ಟವಾಗುವುದು: "ಶತ್ರು ಪಕ್ಷದವರು ಈ ಬಗೆಯ ಅಧರ್ಮ ಯುದ್ಧವನ್ನು ನಿಲ್ಲಿಸುವುದಾದರೆ, ಕರುಣಾಳುವಾದ ಭಗವಂತನು ಅವರ ಅಪರಾಧವನ್ನು ಮನ್ನಿಸುವನು; ಅವರ ಅತ್ಯಾಚಾರವು ಅಡಗುವ ವರೆಗೆ ಮಾತ್ರವೇ ಅವರೊಡನೆ ಯುದ್ಧಮಾಡು. ಯುದ್ಧವು ಸಾಕೆಂದು ಬಗೆದು ಶತ್ರುಗಳು ಸಮಾಧಾನ ಮಾಡಿಕೊಳ್ಳುವ ಆಲೋಚನೆ ಮಾಡಿದರೆ, ನೀನೂ ಅದೇ ರೀತಿ ಮಾಡಿ ಭಗವಂತನಲ್ಲಿ ಭರವಸೆಯಿಡು. ಅವರು ನಿನಗೆ ಮೋಸ ಮಾಡಲಿಚ್ಛಿಸುವುದಾದರೆ, ಹಾಗೂ ಮಾಡಲಿ; ಅದಕ್ಕಾಗಿ ನೀನು ಭಯ ಪಡಬೇಡ; ಭಗವಂತನೊಬ್ಬನ ಬೆಂಬಲವೇ ನಿನಗೆ ಸಾಕು."

**ಸಮದರ್ಶಿತ್ವ**

ಮುಹಮ್ಮದನು ಗುಲಾಮರ ದಾಸ್ಯವನ್ನು ಬಿಡುಗಡೆ ಮಾಡಿ ಇತರರಿಗೂ ಅವರಿಗೂ ಒಂದೇ ಸಮವಾದ ಹಕ್ಕು ಬಾಧ್ಯತೆಗಳುಂಟೆಂಬುದನ್ನು ತೋರ್ಪಡಿಸುವ ಪ್ರಯತ್ನದಲ್ಲಿ ಯಥಾಶಕ್ತಿಯಾಗಿ ಕೆಲಸ ನಡೆಯಿಸಿದನು. ಈ ಭಾಗದಲ್ಲಿ ಮುಹಮ್ಮದನು ನೆರವೇರಿಸಿದ ಕಾರ್ಯಕಲಾಪಗಳನ್ನು ವಿಶದವಾಗಿ ಪ್ರಸ್ತಾವಿಸುವುದಕ್ಕೆ ಮೊದಲು, ಆ ಕಾಲದಲ್ಲಿ ಗುಲಾಮರ ಸ್ಥಿತಿಯು ಹೇಗಿದ್ದಿತೆಂಬುದನ್ನು ಸಂಕ್ಷೇಪವಾಗಿ ಸೂಚಿಸುವುದು ಆವಶ್ಯಕ. ಇಸ್ಲಾಂ ಮತವು ಹುಟ್ಟುವುದಕ್ಕೆ ಮುಂಚೆ ಸಾವಿರಾರು ವರುಷಗಳಿಂದಲೂ ಈ ವಿಧದ ದಾಸ್ಯವೃತ್ತಿಯು ಆಚರಣೆಯಲ್ಲಿದ್ದಿತು. ಯುದ್ಧದಲ್ಲಿ ಸೆರೆ ಸಿಕ್ಕಿದವರೇ ಮೊದಲಾದವರನ್ನು ಇಂತಹ ದಾಸ್ಯವೃತ್ತಿಗಾಗಿ ಮಾರಿಬಿಡುವುದು ಆಗಿನ ವಾಡಿಕೆ. ಒಮ್ಮೆ ಗುಲಾಮರಾದವರು ಜೀವಾವಧಿಯಾಗಿಯೂ ವಂಶಪಾರಂಪರ್ಯವಾಗಿಯೂ ದಾಸ್ಯವೃತ್ತಿಯಲ್ಲೇ ಇರಬೇಕಾಗಿದ್ದಿತು. ಅವರ ಯಜಮಾನರೆನಿಸಿಕೊಂಡಿದ್ದವರು ಅವರನ್ನು ತಿರ್ಯಗ್ಜಂತುಗಳಿಗಿಂತಲೂ ಕಡೆಯಾಗಿ ಕಾಣುತ್ತಿದ್ದರು. ಗುಲಾಮರ ಗೋಳನ್ನು ಕೇಳುವವರೇ ಇರಲಿಲ್ಲ. ಗ್ರೀಸ್ ದೇಶದ ತತ್ತ್ವಜ್ಞಾನಿಯಾದ ಅರಿಸ್ಟಾಟಲ್ ಮುಂತಾದವರೂ, ಸ್ಟೋಯಿಕ್ಸ್ ಮುಂತಾದ ದಾರ್ಶನಿಕರೂ, ಈ ವಿಧದ ವೃತ್ತಿಯು ಇರತಕ್ಕುದು ಪ್ರಕೃತಿ ಸಹಜವಾದುದೆಂದು ವಾದಿಸುವವರಾದರು. ಸಮಾಜದಲ್ಲಿ ಮುಂದಾಳುಗಳೆನಿಸಿದ ಮೇಧಾವಿಗಳೇ ಹೀಗೆ ಭಾವಿಸಿದ ಬಳಿಕ ಉಳಿದವರ ಮನೋವೃತ್ತಿಯು ಎಂತಹದೆಂಬುದನ್ನು ಹೇಳಬೇಕೆ? ರೋಮನರ ಅಭ್ಯುದಯ ಕಾಲದಲ್ಲಂತು ಗುಲಾಮರು ಕಿರುಗುಟ್ಟಿ ಹೋದರು. ಯಜಮಾನನೆನಿಸಿದವನು ತನ್ನ ಗುಲಾಮರನ್ನು ಕೊಂದು ಹಾಕಿದರೂ ಅದೊಂದು ಅಪರಾಧವೆಂಬ ಭಾವನೆಯೇ ಇರಲಿಲ್ಲ. ನಾಯಿಯ ಕೊರಳಿಗೆ ಸರಪಳಿಯನ್ನು ಕಟ್ಟುವಂತೆಯೇ ಗುಲಾಮರ ಕೊರಳಿಗೂ ಸರಪಳಿಗಳನ್ನು ಹಾಕುತ್ತಿದ್ದರು. ಅವರು ಎಷ್ಟು ದುಡಿದರೂ ಯಜಮಾನರಿಗೆ ತೃಪ್ತಿಯಾಗುತ್ತಿರಲಿಲ್ಲ; ದುಡಿಯಲಾರದೆಹೋದರೆ ಅವರಿಗೆ ಚಾವಟಿಯ ಪೆಟ್ಟುಗಳು ಬೀಳುತ್ತಿದ್ದುವು. ರೋಮ್ ಪಟ್ಟಣ

ದಲ್ಲಿಯು ಶ್ರೀಮಂತರು ಗುಲಾಮರನ್ನು ಸಿಂಹ, ಹುಲಿ ಮುಂತಾದ ಕಾಡು ಮೃಗಗಳೊಡನೆ ಹೋರಾಟಕ್ಕೆ ಬಿಟ್ಟು, ಅದಕ್ಕಾಗೇರ್ಪಡಿಸಿದ್ದ ಆವರಣದ ಹೊರಗೆ ನಿಂತು ತಮಾಷೆಯನ್ನು ನೋಡಿ ಆನಂದಪಡು ತ್ತಿದ್ದರು. ಮಹಮ್ಮದನು ಅವತರಿಸುವುದಕ್ಕೆ ಮೊದಲು ಗುಲಾಮರ ಕಷ್ಟ ನಿವಾರಣೆಗಾಗಿ ಕೆಲವು ಪ್ರಯತ್ನಗಳು ನಡೆದಿದ್ದರೂ ಅವು ಫಲಕಾರಿ ಯಾಗಿ ಪರಿಣಮಿಸಲಿಲ್ಲ. ನಾಯಿ ನರಿಗಳಿಗಿಂತಲೂ ನಿಕೃಷ್ಟವಾಗೆಣಿಸ ಲ್ಪಟ್ಟಿದ್ದ ಈ ಗುಲಾಮರಿಗೆ ಇಸ್ಲಾಂ ಮತದಿಂದ ಅಭೂತ ಪೂರ್ವವಾದ ಆದರವು ದೊರೆಯಿತು.

ಮಹಮ್ಮದನು ಗುಲಾಮರ ಸ್ಥಿತಿಯನ್ನು ಉತ್ತಮಗೊಳಿಸ ಬೇಕೆಂಬ ದೃಢ ಸಂಕಲ್ಪಮಾಡಿದನು. ಆದರೆ ಆಗ ಅವನ ಮತವು ಕೇವಲ ಶೈಶವಾವಸ್ಥೆಯಲ್ಲಿದ್ದುದರಿಂದ, ಗುಲಾಮರನ್ನು ಬಿಡುಗಡೆ ಮಾಡುವುದಕ್ಕೆ ಅವರ ಯಜಮಾನರಿಗೆ ಕೊಡಬೇಕಾದಷ್ಟು ಹಣವು ಮಹಮ್ಮದನಲ್ಲಿರ ಲಿಲ್ಲ. ಆದಕಾರಣ, ಗುಲಾಮರ ದಾಸ್ಯವನ್ನು ನಿವೃತ್ತಿ ಮಾಡುವುದು ಅತಿ ಶ್ಲಾಘ್ಯವಾದ ಪುಣ್ಯಕಾರ್ಯವೆಂಬ ಸಿದ್ಧಾಂತವನ್ನು ತನ್ನ ಮತ ತತ್ತ್ವ ಗಳಲ್ಲಿ ಸೇರಿಸುವ ಕಾರ್ಯವನ್ನು ಮಾತ್ರ ನಡೆಯಿಸಿದನು. ಕೇವಲ ಪುಣ್ಯ ದಾಯಕವಾದ ಸತ್ಕರ್ಮಗಳ ಗುಂಪಿನಲ್ಲಿ, ಗುಲಾಮರ ದಾಸ್ಯ ನಿವೃ ತ್ತಿಯೂ ಅನಾಥರಿಗೆ ಅನ್ನ ದಾನವೂ ಸರ್ವೋತ್ಕೃಷ್ಟವಾದವುಗಳೆಂದು ಮಹಮ್ಮದನು ಖುರಾನಿನಲ್ಲಿ ಬರೆದಿಟ್ಟನು. ಕೆಲವು ಪಾಪಗಳಿಗೆ ಪ್ರಾಯ ಶ್ಚಿತ್ತಗಳನ್ನು ವಿಧಿಸುವುದರಲ್ಲಿ ಗುಲಾಮರ ದಾಸ್ಯ ನಿವೃತ್ತಿ ಮಾಡಿ ಸುವುದೂ ಒಂದು ಪ್ರಾಯಶ್ಚಿತ್ತವೆಂದು ಗೊತ್ತುಮಾಡಿದನು. ಗುಲಾ ಮರು ತಮ್ಮ ಯಜಮಾನರಿಗಾಗಿ ಮಾಡುತ್ತಿದ್ದ ಕೆಲಸದಲ್ಲಿ ಒಂದು ಭಾಗಕ್ಕೆ ದ್ರವ್ಯ ರೂಪವಾಗಿ ಬೆಲೆ ಕಟ್ಟಿ, ಆ ಮೊತ್ತವು ಅವರ ದಾಸ್ಯ ನಿವೃತ್ತಿ ಗಾಗಿ ಸಲ್ಲಬೇಕಾದ ಮೊತ್ತಕ್ಕೆ ಉತ್ತಾರವಾಗುತ್ತ ಬಂದು ಯಥಾ ಕಾಲ ದಲ್ಲಿ ಅವರು ಯಜಮಾನರ ಕೈಯಿಂದ ಬಿಡುಗಡೆ ಹೊಂದಿ ಸ್ವತಂತ್ರರಾಗು ವಂತೆ ಮಹಮ್ಮದನು ಒಂದು ನಿಯಮವನ್ನು ಮಾಡಿದನು. ಯಾವನಾ ದರೂ ಗುಲಾಮನು ತನಗೆ ಮತ್ತೆಲ್ಲಿಯಾದರೂ ಹೆಚ್ಚು ಸಂಬಳವು ದೊರೆಯುವುದಾಗಿದ್ದರೆ ಅಲ್ಲಿಗೆ ಹೋಗುವುದಕ್ಕೆ ಅವನ ಯಜಮಾನನು

ಅಪ್ಪಣೆ ಕೊಡಬೇಕೆಂದೂ, ಅಲ್ಲಿಯು ಸಂಬಳದ ಹಣದಲ್ಲಿ ಗುಲಾಮನು ತನ್ನ ದಾಸ್ಯ ನಿವೃತ್ತಿಯ ಮೊತ್ತಕ್ಕಾಗಿ ತಾನು ಹಣವನ್ನು ಸಲ್ಲಿಸುತ್ತ ಬರುವುದಾಗಿ ಆತನಿಗೆ ಕರಾರು ಪತ್ರವನ್ನು ಬರೆದುಕೊಟ್ಟು ಹಾಗೆ ಬೇರೆ ಸ್ಥಳದಲ್ಲಿ ಕೆಲಸಕ್ಕೆ ಹೋಗಬಹುದೆಂದೂ ಮುಹಮ್ಮದನು ನಿಬಂಧನೆಯನ್ನೇರ್ಪಡಿಸಿದನು. ಈ ವಿಧದ ಕರಾರು ಪತ್ರಗಳಲ್ಲಿ ಸಂದಿಗ್ಧಾರ್ಥವುಳ್ಳ ಯಾವುದೊಂದು ಅಂಶವೇ ಇದ್ದರೂ, ಗುಲಾಮನಿಗೆ ಪ್ರಯೋಜನಕರವಾದ ರೀತಿಯಲ್ಲಿ ಅದಕ್ಕೆ ಅರ್ಥ ಸಮನ್ವಯ ಮಾಡಬೇಕೆಂಬ ಕಟ್ಟುಪಾಡೂ ಆಚರಣೆಗೆ ಬಂದಿತು. ಅರಬ್ಬೀ ದೇಶವು ತನ್ನ ಆಳಿಕೆಗೊಳಗಾದ ಮೇಲೆ ಮುಹಮ್ಮದನು ದೇಶದ ಹುಟ್ಟುವಳಿಯಲ್ಲಿ ಪ್ರತಿ ವರ್ಷವೂ ಒಂದು ಕ್ಲುಪ್ತ ಭಾಗವು ದಾಸ್ಯ ನಿವೃತ್ತಿಗಾಗಿ ವಿನಿಯೋಗವಾಗತಕ್ಕುದೆಂದು ನಿರೂಪವನ್ನು ಕೊಟ್ಟನು.

ದಾಸ್ಯ ನಿವೃತ್ತಿಯ ವಿಷಯದಲ್ಲಿ ಮುಹಮ್ಮದನು ಸ್ವಾನುಷ್ಠಾನದಿಂದಲೂ ಇತರರಿಗೆ ಉತ್ತಮವಾದ ಮೇಲ್ಪಂಕ್ತಿಯನ್ನು ಹಾಕಿಕೊಟ್ಟನು. ಅವನು ತನ್ನ ಗುಲಾಮರೆಲ್ಲರಿಗೂ ಉಚಿತವಾಗಿ ಸ್ವಾತಂತ್ರ್ಯದಾನ ಮಾಡಿದನು; ಅವರಲ್ಲಿ ಜೈದನೂ ಒಬ್ಬನು. ಮುಹಮ್ಮದನ ಸಮದರ್ಶಿತ್ವವು ಅಲ್ಲಿಗೇ ಮುಗಿಯಲಿಲ್ಲ. ಅವನು ತನ್ನ ಸಮೀಪ ಸಂಬಂಧಿಯಾದ ಜೈನಾಬಳನ್ನು ಜೈದನಿಗೆ ಕೊಟ್ಟು ವಿವಾಹ ಮಾಡಿದನು. ಆ ದಂಪತಿಗಳ ಪ್ರೇಮ ಪುತ್ರನಾದ ಉಸಾಮನಲ್ಲಿ ಮುಹಮ್ಮದನಿಗೆ ಬಹಳ ಪ್ರೀತಿ. ಉಸಾಮನು ಪ್ರಾಪ್ತ ವಯಸ್ಕನಾದ ಮೇಲೆ ಮುಹಮ್ಮದನು ಅವನನ್ನು ಸೇನಾಧಿಪತಿಯನ್ನಾಗಿ ನೇಮಿಸಿದುದನ್ನು ಹಿಂದೆ ಹೇಳಿದೆ.

ಖುರಾನಿನಲ್ಲಿ, "ನಿಮ್ಮ ಗುಲಾಮರೂ ನಿಮ್ಮ ಸೋದರರೇ ಅಲ್ಲವೆ? ಭಗವಂತನು ಅವರನ್ನು ನಿಮ್ಮ ಸೇವೆಗಾಗಿ ನಿಮ್ಮ ಅಧೀನಕ್ಕೊಪ್ಪಿಸಿದ್ದಾನೆ. ಆದಕಾರಣ, ಇಂಥವರು ಯಾರ ಬಳಿಯಲ್ಲಿ ಕೆಲಸಕ್ಕಿದ್ದರೂ, ಯಜಮಾನರು ತಾವು ಊಟ ಮಾಡುವಂತಹ ರುಚಿಕರವಾದ ಆಹಾರ ವಸ್ತುಗಳನ್ನೇ ಅವರಿಗೂ ಒದಗಿಸಬೇಕು; ತಾವು ಧರಿಸುವಂತಹ ವಸ್ತ್ರಗಳನ್ನೇ ಅವರಿಗೂ ಕೊಡಬೇಕು; ಅವರ ಶಕ್ತಿಗೆ ಮೀರಿದ ಕೆಲಸವನ್ನೆಂದಿಗೂ ಕೊಡಬಾರದು. ಒಂದು ವೇಳೆ ಅಂತಹ ಕೆಲಸವನ್ನು

ಕೊಡಬೇಕಾಗಿ ಬಂದರೆ, ಅವರ ಸಹಾಯಕ್ಕೆ ತಕ್ಕಷ್ಟು ಮಂದಿ ಕೆಲಸಗಾರರನ್ನು ಗೊತ್ತುಮಾಡಬೇಕು" ಎಂಬ ಅಮೋಘವಾದ ಉಪದೇಶ ವಾಕ್ಯಗಳಿವೆ.

ಇಸ್ಲಾಂ ಮತದ ಅನುಯಾಯಿಗಳಲ್ಲಿ ಗುಲಾಮರು ಕೂಡ ಇತರರಂತೆಯೇ ಮಹತ್ವದವಿಗಳನ್ನು ಪಡೆಯಬಹುದಾಯಿತು. ಗುಲಾಮಿಸಂತತಿಯವನಾದ ಕುತ್ಬುದೀನನು ದೆಹಲಿಯ ಸಿಂಹಾಸನವನ್ನು ಹತ್ತಿ ಪ್ರಭುತ್ವಮಾಡಿದನು. ಹದಿಮೂರನೆಯ ಶತಮಾನದ ಆದಿ ಭಾಗದಲ್ಲಿ ಈತನು ಕಟ್ಟಿಸಿದ ಕುತುಬ್ ಮಿನಾರ್ ಎಂಬ ಸ್ತಂಭವು ಇಸ್ಲಾಂ ಮತತತ್ತ್ವಗಳನ್ನನುಸರಿಸಿ ನಡೆದ ಪತಿತೋದ್ಧಾರದ ಸ್ಮರಣಾರ್ಥವಾಗಿ ಈಗಲೂ ದೆಹಲಿಯಲ್ಲಿ ಕಂಗೊಳಿಸುತ್ತಿದೆ. ದೆಹಲಿಯಲ್ಲಿ ರಾಣಿಯಾಗಿ ಪ್ರಭುತ್ವಮಾಡಿದ ರೆಜಿಯಾ ಬೇಗಮ್ಮಳೂ ಗುಲಾಮಿ ಸಂತತಿಯವಳೇ. ಘಜನಿಯ ಮಹಮ್ಮದನ ತಂದೆಯಾದ ಸಬಕ್ತಗೀನನೂ ಒಬ್ಬ ಗುಲಾಮನಾಗಿದ್ದನು. ಹೀಗೆ ಗುಲಾಮರಿಗೆ ಸಮಾಜದಲ್ಲಿ ಉತ್ತಮ ಸ್ಥಾನವು ದೊರೆತುದು ಮಹಮ್ಮದನ ಅಧ್ಯವಸಾಯದ ಫಲ; ಇಸ್ಲಾಂ ಮತದ ಉದಾತ್ತತತ್ತ್ವದ ಸತ್ಪರಿಣಾಮ.

ಇಸ್ಲಾಂ ಮತವು ಹುಟ್ಟುವುದಕ್ಕೆ ಮುಂಚೆ ಅರಬ್ಬೀ ದೇಶದ ಸ್ತ್ರೀಯರ ಸ್ಥಿತಿಯು ಅತ್ಯಂತ ಶೋಚನೀಯವಾಗಿದ್ದಿತು. ಹೆಂಗುಸು ಒಂದು ವಿಧದ ಪ್ರಾಣಿವಿಶೇಷವೆಂದೇ ಅರಬ್ಬಿಯವರ ಭಾವನೆ. ಮಹಮ್ಮದನು ಸ್ತ್ರೀಯರ ಇಂತಹ ದುಸ್ಸ್ಥಿತಿಗಾಗಿ ಮರುಕಗೊಂಡು, ಸ್ತ್ರೀಯು ಪುರುಷನ ಅರ್ಧಾಂಗಿಯೆಂದು ಸಾರಿ, ಸಮಾಜ ಪರಿಷ್ಕರಣಕ್ಕೆ ಪ್ರಾರಂಭ ಮಾಡಿದನು; ಸ್ತ್ರೀಯರ ಹಕ್ಕುಬಾಧ್ಯತೆಗಳನ್ನು ಕಾಪಾಡಿಕೊಡದೆ ತಪ್ಪಿದವರ ವಿಷಯದಲ್ಲಿ ಭಗವಂತನು ಅಸಂತುಷ್ಟನಾಗುವನೆಂದು ಧರ್ಮಬೋಧೆ ಮಾಡಿದನು; ಗೃಹಿಣಿಯೇ ಗೇಹದ ರಾಣಿಯೆಂದು ಉದ್ಘೋಷಿಸಿದನು. ಮಹಮ್ಮದನ ಈ ಉಪದೇಶ ವಾಕ್ಯಗಳನ್ನೋದಿದಾಗ, ಭಾರತೀಯರಲ್ಲಿ ಪತ್ನಿಯು ಅರ್ಧಾಂಗಿಯೆಂದೂ ಗೃಹಲಕ್ಷ್ಮಿಯೆಂದೂ ವರ್ಣಿತಳಾಗಿರುವುದು ನೆನಪಿಗೆ ಬಾರದಿರದು. ಸ್ತ್ರೀಯರಿಗೂ ಪುರುಷರ ಸಮಾನವಾದ ಹಕ್ಕು

ಸ್ತ್ರೀತ್ವದ ಘನತೆ

ಗಳುಂಟು. ಅವರು ತಮ್ಮ ಕರ್ತವ್ಯವನ್ನು ನೆರವೇರಿಸುವುದಕ್ಕೆ ಮಾತ್ರವೇ ಈ ಲೋಕದಲ್ಲಿ ಹುಟ್ಟಿದವರಲ್ಲ, ಹಕ್ಕುಗಳನ್ನು ಅನುಭವಿಸುವುದಕ್ಕೂ ಹುಟ್ಟಿದವರು" ಎಂದೂ, "ಪುರುಷನು ಸ್ತ್ರೀಗೆ ಹೇಗೆ ಭೂಷಣ ಪ್ರಾಯನೋ, ಸ್ತ್ರೀಯೂ ಹಾಗೆಯೇ ಪುರುಷನಿಗೆ ಭೂಷಣ ಪ್ರಾಯಳು" ಎಂದೂ ಸಿದ್ಧಾಂತ ಮಾಡಿದ ಮಹನೀಯನು ಮುಹಮ್ಮದನು. "ಮಾತೃ ದೇವೋ ಭವ" ಎಂಬ ವೇದೋಕ್ತಿಯನ್ನು ನಮ್ಮ ನೆನಪಿಗೆ ತರುವ, "ಸ್ವರ್ಗಲೋಕವು ಮಾತೆಯ ಅಡಿದಾವರೆಯ ಬಳಿಯಲ್ಲಿದೆ" ಎಂಬ ಮಹಾವಾಕ್ಯವನ್ನು ನುಡಿದ ಸಾಧು ಶ್ರೇಷ್ಠನು ಮುಹಮ್ಮದನು. ಒಮ್ಮೆ, ಶಿಷ್ಯನೊಬ್ಬನು ಮುಹಮ್ಮದನನ್ನು ಕುರಿತು, ಗಂಡನು ಹೆಂಡಿತಿಯನ್ನು ಹೇಗೆ ಕಾಣಬೇಕೆಂದು ಪ್ರಶ್ನೆ ಮಾಡಿದನು. ಆಗ ಮುಹಮ್ಮದನು, "ನೀನು ಊಟ ಮಾಡುವಾಗ ಆಕೆಯನ್ನೂ ಊಟ ಮಾಡುವಂತೆ ಹೇಳು; ನೀನು ಬಟ್ಟೆಯನ್ನು ಕೊಂಡುಕೊಂಡಾಗ ಆಕೆಗೂ ಬಟ್ಟೆಯನ್ನು ತೆಗೆದುಕೊಡು; ಆಕೆಯನ್ನು ಎಂದಿಗೂ ಹಿಂಸಿಸಬೇಡ; ಗುಲಾಮಳಂತೆ ಕಂಡು ತಾಡಿಸುವುದನ್ನು ಬಿಟ್ಟುಬಿಡು. ಒಳ್ಳೆಯ ಮಾತುಗಳಿಂದ ಆಕೆಗೆ ವಿವೇಕವನ್ನುಪದೇಶಿಸು" ಎಂದು ಉತ್ತರ ಹೇಳಿದನು.

ಸ್ತ್ರೀಯರ ವಿಚಾರವಾಗಿ ಖುರಾನಿನಲ್ಲಿ ಉತ್ತಮವಾದ ಕೆಲವು ಉಪದೇಶ ವಾಕ್ಯಗಳಿವೆ: "ನೀವೂ ನಿಮ್ಮ ಪತ್ನಿಯರೂ ಸಂತುಷ್ಟ ಚಿತ್ತರಾಗಿ ಆನಂದದಿಂದ ಸ್ವರ್ಗಲೋಕವನ್ನು ಪ್ರವೇಶಿಸಿರಿ." "ಮತ ಧರ್ಮದಲ್ಲಿ ಶ್ರದ್ಧೆಯನ್ನಿಟ್ಟು ಸತ್ಕರ್ಮಗಳನ್ನಾಚರಿಸಿದವರೆಲ್ಲರೂ ಸ್ವರ್ಗವನ್ನು ಪಡೆಯುವರು; ಹೆಂಗುಸರಾದ ಮಾತ್ರಕ್ಕೇ ಯಾವ ಪ್ರತಿಬಂಧಕವೂ ಇಲ್ಲ. ಪುಣ್ಯಕರ್ಮಗಳನ್ನಾಚರಿಸಿದ ಸ್ತ್ರೀ ಪುರುಷರಿಬ್ಬರಿಗೂ ಸ್ವರ್ಗಲಾಭವುಂಟು." "ಧರ್ಮೋಲ್ಲಂಘನೆ ಮಾಡದೆ ಮತಾಚರಣೆಯಲ್ಲಿ ಶ್ರದ್ಧಾಳುಗಳಾಗಿದ್ದು ಸತ್ಯಪ್ರಿಯರೂ, ವಿನೀತಾತ್ಮರೂ, ಪರೋಪಕಾರ ನಿರತರೂ, ಮಾನ ರಕ್ಷಕರೂ, ಭಗವಧ್ಯಾನ ಪರಾಯಣರೂ ಎನಿಸಿಕೊಂಡಿರುವ ಸಜ್ಜನರು ಪುರುಷರೇ ಆಗಲಿ, ಸ್ತ್ರೀಯರೇ ಆಗಲಿ ಭಗವಂತನಿಂದ ಕ್ಷಮಾಭಿಕ್ಷೆಯನ್ನೂ ಅನರ್ಘ್ಯವಾದ ಬಹುಮಾನವನ್ನೂ ಪಡೆಯುವರು."

ಇದನ್ನೆಲ್ಲ ಸಾವಧಾನವಾಗಿ ಪರ್ಯಾಲೋಚಿಸಿ ನೋಡಿದರೆ, ಇಸ್ಲಾಂ ಧರ್ಮದ ಮೇರೆಗೆ ಸ್ತ್ರೀಯರಿಗೆ ಸಮಾಜದಲ್ಲಿ ಘನತೆ ಗೌರವಗಳು ರೂಢ ಮೂಲವಾಗಿ ನೆಲೆಗೊಂಡಿದ್ದುವೆಂದು ಧಾರಾಳವಾಗಿ ಹೇಳಬಹುದು. ಮುಹಮ್ಮದೀಯರಲ್ಲಿ 'ಘೋಷಾ' ಪದ್ಧತಿಯಿರುವುದೆಂಬ ನೆಪದ ಮೇಲೆ, ಇಸ್ಲಾಂ ಮತದಲ್ಲಿ ಸ್ತ್ರೀಯರಿಗೆ ಸರಿಯಾದ ಸ್ಥಾನವಿಲ್ಲವೆಂದು ಹಳಿಯುವುದು ನ್ಯಾಯವಲ್ಲ. ಮುಹಮ್ಮದನು ಸ್ತ್ರೀಯರಿಗೆ ಸಮಾಜದಲ್ಲಿ ಗೌರವ ಸ್ಥಾನವನ್ನು ದೊರೆಯಿಸಿದಂತೆಯೇ, ದಾಯ ಭಾಗವೇ ಮುಂತಾದ ವ್ಯವಹಾರ ವಿಚಾರಗಳಲ್ಲಿಯೂ ಅವರ ಸ್ಥಿತಿಯನ್ನು ಉತ್ತಮಗೊಳಿಸಿದನು. ಸ್ತ್ರೀಯರ ಸ್ಥಿತಿಯು ಅತಿ ಶೋಚನೀಯವಾಗಿದ್ದ ಕಾಲದಲ್ಲಿ, ಸ್ತ್ರೀ ಶಿಶುವಿನ ಜನನವು ಅನಿಷ್ಟಕಾರಕವೆಂಬ ಭಾವನೆಯು ನೆಲೆಗೊಂಡಿದ್ದ ದೇಶದಲ್ಲಿ ಅವತರಿಸಿದ ಮುಹಮ್ಮದನು ಈ ಇಪ್ಪತ್ತನೆಯ ಶತಮಾನದಲ್ಲಿ ಸ್ತ್ರೀಯರಿಗೆ ಇತರ ದೇಶಗಳಲ್ಲಿ ಈಗೀಗ ದೊರೆಯುತ್ತಿರುವ ಆಸ್ತಿಯ ಹಕ್ಕುಗಳನ್ನು ತನ್ನ ದೇಶದಲ್ಲಿ ಈಗ್ಗೆ ಹದಿಮೂರು ಶತಮಾನಗಳ ಹಿಂದೆಯೇ ದೊರೆಯಿಸಿಕೊಟ್ಟನು. ಈಗಿನ ಅನೇಕ ನಾಗರಿಕ ದೇಶಗಳಲ್ಲಿ ಸ್ತ್ರೀಯರಿಗೆ ಯಾವ ಸ್ಥಾನವಿರುವುದೋ, ಅದನ್ನು ಮುಹಮ್ಮದನು ಬಹು ಕಾಲಕ್ಕೆ ಹಿಂದೆಯೇ ಕಲ್ಪಿಸಿಕೊಟ್ಟನು.

ಇಸ್ಲಾಂ ಮತದ ಮೇರೆಗೆ, ಸ್ತ್ರೀಯರು ಪ್ರಾಪ್ತ ವಯಸ್ಕರಾದೊಡನೆಯೇ ಅವರಿಗೆ ತಮ್ಮ ಹಕ್ಕುಗಳನ್ನು ಸಾಧಿಸುವ ಸ್ವಾತಂತ್ರ್ಯವುಂಟಾಗುವುದು. ತಾಯಿ ತಂದೆಗಳು ಮೃತಪಟ್ಟರೆ, ಗಂಡು ಮಕ್ಕಳಿಗೂ ಹೆಣ್ಣು ಮಕ್ಕಳಿಗೂ ಕ್ಲಪ್ತ ಭಾಗಗಳಲ್ಲಿ ಮೃತರ ಸ್ವತ್ತು ಹಂಚಿಕೆಯಾಗಬೇಕು. ಪ್ರಾಪ್ತ ವಯಸ್ಕಳಾಗಿ ಸ್ವತಂತ್ರಳಾಗಿರುವ ಸ್ತ್ರೀಯನ್ನು ಅವಳ ಇಷ್ಟಕ್ಕೆ ವಿರೋಧವಾಗಿ ರಾಜನು ಕೂಡ ವಿವಾಹವಾಗುವ ಹಾಗಿಲ್ಲ. ಸ್ತ್ರೀಯರಿಗೆ ವಿವಾಹವಾದ ಮೇಲೂ ವೈಯಕ್ತಿಕವಾಗಿ ಅವರಿಗೆ ಸಡೆದುಬರುವ ಸ್ವತ್ತಿನ ಹಕ್ಕಿಗೆ ಯಾರೂ ಲೋಪವನ್ನುಂಟು ಮಾಡುವಂತಿಲ್ಲ. ವಿವಾಹಕ್ಕೆ ಪೂರ್ವ ಭಾವಿಯಾಗಿ ವರನು ವಧುವಿಗೆ ಶುಲ್ಕ ರೂಪದಲ್ಲಿ ಹಣವನ್ನಾಗಲಿ, ಅಥವಾ ಇತರ ಸ್ವತ್ತನ್ನಾಗಲಿ ಕೊಡಬೇಕು. ಹಾಗೆ ಕೊಡದೆ ತಪ್ಪಿದರೂ, ಗಂಡನು ತನ್ನ ಶಕ್ತಿಗೆ

ತಕ್ಕಂತೆ ಅದನ್ನು ಕೊಟ್ಟಂತೆಯೇ ಭಾವಿಸಿ, ನ್ಯಾಯ ಸ್ಥಾನದಲ್ಲಿ ಆ ದ್ರವ್ಯವನ್ನು ಅವಳಿಗೆ ಅವಶ್ಯವಾಗಿ ಕೊಡಿಸಬಹುದು. ಇಸ್ಲಾಂ ಮತವು ಹುಟ್ಟುವುದಕ್ಕೆ ಮೊದಲು, ಪತಿಯು ತನ್ನ ಪತ್ನಿಯನ್ನು ವಿಕ್ರೀತಳಾದ ದಾಸಿಯಂತೆ ಭಾವಿಸಬಹುದಾಗಿದ್ದಿತು. ಆದರೆ, ಇಸ್ಲಾಂ ಮತದ ಮೇರೆಗೆ ಇದಕ್ಕೆ ಅವಕಾಶವು ತಪ್ಪಿತು. ಸ್ತ್ರೀಯರ ಸ್ವಾತಂತ್ರ್ಯವು ಹೆಚ್ಚಿ, ಇಸ್ಲಾಂ ಧರ್ಮಶಾಸ್ತ್ರಗಳಲ್ಲಿ ಹೇಳಿರುವುದಕ್ಕಿಂತ ಹೆಚ್ಚಿನ ಅಧಿಕಾರವು ಯಾವುದನ್ನೂ ಗಂಡನು ಹೆಂಡಿತಿಯಮೇಲೆ ನಡೆಯಿಸ ಕೂಡದೆಂದು ನಿಬಂಧನೆಯಾಯಿತು. ಪತಿ ಪತ್ನಿಯರಲ್ಲಿ ಯಾರಾದರೂ ನ್ಯಾಯ ಸ್ಥಾನಕ್ಕೆ ಹೋಗಿ ದಾಂಪತ್ಯ ವಿಚ್ಛೇದ ಮಾಡಿಕೊಳ್ಳಬಹುದು; ಆದರೆ, ಹಾಗೆ ಮಾಡಲು ಸಾಕಾದಷ್ಟು ಕಾರಣವಿರಬೇಕು. ದಾಂಪತ್ಯ ಪರಿತ್ಯಾಗವು ನ್ಯಾಯ ಸಮ್ಮತವಾದರೂ ಭಗವಂತನಿಗೆ ಅದು ಇಷ್ಟ ವಿಲ್ಲದ ಕಾರಣ, ಅಷ್ಟೇನೂ ಧರ್ಮ ಸಮ್ಮತವಲ್ಲವೆಂಬುದೇ ಮುಹ ಮ್ಮದನ ಅಭಿಪ್ರಾಯ. "ದಾಸ್ಯ ನಿವೃತ್ತಿಗಿಂತ ಭಗವಂತನಿಗೆ ಹೆಚ್ಚು ಪ್ರಿಯಕರವಾದುದೂ, ದಾಂಪತ್ಯ ಪರಿತ್ಯಾಗಕ್ಕಿಂತ ಹೆಚ್ಚು ಅಪ್ರಿಯ ವಾದುದೂ ಮತ್ತಾವುದೂ ಇಲ್ಲ" ಎಂದು ಮುಹಮ್ಮದನು ಹೇಳಿದ್ದಾನೆ.

ಮೊನ್ನೆ ಮೊನ್ನೆ ಅಮೆರಿಕಾ ದೇಶದಲ್ಲಿ ವಿಚಿತ್ರವಾದ ಒಂದು ಮೊಕದ್ದಮೆ ನಡೆಯಿತಂತೆ: ಒಂದು ದಿನ ರಾತ್ರಿ ನಾಟಕಾವಲೋಕನಕ್ಕೆ ಹೋಗಿದ್ದ ಇಬ್ಬರು ದಂಪತಿಗಳಲ್ಲಿ ಪತಿಯು ಹಗಲೆಲ್ಲ ಕಾರ್ಖಾನೆಯಲ್ಲಿ ದುಡಿದು ದಣಿದುಬಂದಿದ್ದುದರಿಂದ ಅವನಿಗೆ ಸ್ವಲ್ಪ ನಿದ್ದೆ ಹತ್ತಿತಂತೆ. ನಾಟಕ ಮಂದಿರದಲ್ಲಿ ಇವನು ಹೀಗೆ ನಿದ್ರಿಸುತ್ತಿದ್ದುದನ್ನು ಕಂಡು ಇತರರು ಘೊಳ್ಳೆಂದು ನಕ್ಕರಂತೆ. ಇದರಿಂದ ತನಗೆ ಕೇವಲ ಅಪಮಾನ ವಾದಂತೆ ಪತ್ನಿಯು ಭಾವಿಸಿ, ತನಗೆ ಅವನ ಪತ್ನಿಯಾಗಿರುವುದು ಇಷ್ಟ ವಿಲ್ಲವೆಂದೂ, ಆದಕಾರಣ ದಾಂಪತ್ಯ ನಿವೃತ್ತಿಗೆ ಅಪ್ಪಣೆಕೊಡ ಬೇಕೆಂದೂ, ಅವಳು ನ್ಯಾಯ ಸ್ಥಾನಕ್ಕೆ ಮನವೆಯನ್ನು ಬರೆದುಕೊಂಡ ಳಂತೆ. ಕೇವಲ ಕ್ಷುಲ್ಲಕ ಕಾರಣಗಳಿಗಾಗಿ ದಾಂಪತ್ಯ ವಿಚ್ಛಿತ್ತಿಗೆ ಅನುಮತಿಯನ್ನು ಕೊಡುತ್ತ ಹೋದರೆ, ಸಮಾಜ ವ್ಯವಸ್ಥೆಯ ಕಟ್ಟು ಪಾಡೂ ವಿವಾಹದ ಪವಿತ್ರವಾದ ಉದ್ದೇಶವೂ ಉಳಿಯುವ ಬಗೆ ಹೇಗೆ?

ಈ ಮಾತು ಹಾಗಿರಲಿ; ಇಸ್ಲಾಂ ಮತ ಧರ್ಮಗಳ ಮೇರೆಗೆ ಸ್ತ್ರೀಯು ಸ್ವಯಾರ್ಜಿತ ವಿತ್ತದ ಮೇಲೆ ಪುರುಷನಿಗೆ ಸುತರಾಂ ಅಧಿಕಾರ ವಿರುವುದಿಲ್ಲ. ವಿವಾಹಿತಳಾದ ಸ್ತ್ರೀಯು ತನ್ನ ಆದಾಯ ವೆಚ್ಚಗಳ ಕೆಲಸ ವನ್ನು ತಾನೇ ಸ್ವಂತವಾಗಿ ನಡೆಯಿಸಬಹುದು; ಗಂಡನ ಮೂಲಕವೋ ತಂದೆಯ ಮೂಲಕವೋ ನಡೆಯಿಸಬೇಕಾದ ಆವಶ್ಯಕತೆಯೇನೂ ಇರುವು ದಿಲ್ಲ. ಸ್ವಂತವಾಗಿ ತಾನೇ ನ್ಯಾಯ ಸ್ಥಾನದಲ್ಲಿ ಮೊಕದ್ದಮೆಯನ್ನು ನಡೆಯಿಸಲು ಅವಳಿಗೆ ಪೂರ್ಣಾಧಿಕಾರವುಂಟು. ಇಸ್ಲಾಂ ಧರ್ಮ ಶಾಸ್ತ್ರ ರೀತಿಯಾಗಿ ಪ್ರಾಪ್ತ ವಯಸ್ಕಳಾದ ಸ್ತ್ರೀಗಿರತಕ್ಕ ಹಕ್ಕು ಬಾಧ್ಯತೆಗಳಿಗೆ ಅವಳ ತಂದೆಯಾಗಲಿ ಗಂಡನಾಗಲಿ ಅಡ್ಡ ಬರಲು ಯಾವ ಅಧಿಕಾರವೂ ಇರುವುದಿಲ್ಲ.

ಬಹು ಪತ್ನೀತ್ವ

ಇಸ್ಲಾಂ ಮತ ಧರ್ಮದ ಪ್ರಕಾರ ಒಬ್ಬ ಗಂಡುಸಿಗೆ ಏಕ ಕಾಲದಲ್ಲಿ ನಾಲ್ವರ ವರೆಗೂ ಪತ್ನಿಯರಿರಬಹುದು. ಭಾರತೀಯರಲ್ಲಿಯೂ ಬಹು ಪತ್ನೀತ್ವಕ್ಕೆ ಅನುಜ್ಞೆಯಿದ್ದರೂ, ಬಹು ಪತ್ನೀತ್ವವು ಉಪಾದೇಯವಾದ ಗುಣವಲ್ಲವೆಂದೂ, ಏಕ ಪತ್ನೀ ವ್ರತವೇ ಸರ್ವೋತ್ಕೃಷ್ಟವಾದುದೆಂದೂ ಸಾಮಾನ್ಯ ವಾಗಿ ಎಲ್ಲರೂ ಒಪ್ಪುತ್ತಾರೆ. ಆದರೆ, ಬಹು ಪತ್ನೀತ್ವಕ್ಕೆ ಅವಕಾಶ ಕೊಟ್ಟುದರಿಂದ ಮಹಮ್ಮದನು ತಪ್ಪಿತಮಾಡಿದಂತಾಯಿತೇ ಎಂಬುದು ಇಲ್ಲಿಯ ಚರ್ಚಾಂಶವಾಗಿದೆ. ಈ ವಿಷಯದಲ್ಲಿ ರೈಟ್ ಆನರೆಬಲ್ ಸೈಯದ್ ಅಮೀರ್ ಆಲಿಯವರೂ, ಮೌ॥ ಖ್ವಾಜಾ ಕಮಾಲುದ್ದೀನ ರವರೂ ಸೂಚಿಸಿರುವ ಅಭಿಪ್ರಾಯಗಳ ಮುಖ್ಯಾಂಶವನ್ನು ಇಲ್ಲಿ ಕೊಟ್ಟಿದೆ:—

ಬಹು ಪತ್ನೀತ್ವವು ಈಗಿನ ಮನೋಭಾವದ ಮೇರೆಗೆ ಅಕ್ಷಮ್ಯ ವಾದುದೆಂಬುದೇನೋ ನಿಜ. ಆದರೆ, ನಮ್ಮ ಸಮಾಜ ಸ್ಥಿತಿಯಲ್ಲಿ ಕೆಲವು ವೇಳೆ ಅದು ತೀರ ಆವಶ್ಯಕವಾಗಿ ಪರಿಣಮಿಸಬಹುದು. ಉದಾಹರಣೆ ಗಾಗಿ, ಘೋರವಾದ ಒಂದು ಯುದ್ಧವು ನಡೆದು ರಣ ರಂಗದಲ್ಲಿ ಅನೇಕ ಮಂದಿ ಪುರುಷರು ಹತರಾಗುತ್ತಾರೆ. ಇದರಿಂದ ಪುರುಷರ ಸಂಖ್ಯೆಯು ಬಹಳ ಕಡಿಮೆಯಾಗಿ, ಸ್ತ್ರೀಯರ ಸಂಖ್ಯೆಯು ಪುರುಷರ ಸಂಖ್ಯೆಯ

ನಾಲ್ಕೈದರಷ್ಟೋ ಇನ್ನೂ ಹೆಚ್ಚಾಗಿಯೋ ಆಗುವ ಸಂಭವವುಂಟು. ಇಂತಹ ಸಂದರ್ಭಗಳಲ್ಲಿ ಸಮಾಜದ ದುಷ್ಪರಿಣಾಮವನ್ನು ತಪ್ಪಿಸುವುದಕ್ಕಾಗಿ ಬಹು ಪತ್ನೀತ್ವಕ್ಕೆ ಅವಕಾಶ ಕೊಡುವುದೇ ಉತ್ತಮವೆಂದು ತೋರುವುದು. ಕೆಲವರು ದಂಪತಿಗಳು ಮಕ್ಕಳಿಲ್ಲದೆಯೇ ಬಹಳ ಕಾಲ ಇರಬಹುದು. ವಂಶದ ಹೆಸರನ್ನು ಹೇಳುವುದೂ ಮಕ್ಕಳಿಲ್ಲದಿದ್ದರೆ ಅಂತಹ ದಂಪತಿಗಳಿಗೆ ದುಸ್ಸಹವಾದ ದುಃಖವುಂಟಾಗುವುದು. ಇಂತಹ ಸಂದರ್ಭಗಳಲ್ಲಿ, ಗಂಡಸನ್ನು ಎರಡನೆಯ ಮದುವೆ ಮಾಡಿಕೊಳ್ಳುವಂತೆ ಹೆಂಡತಿಯೇ ಬಲಾತ್ಕರಿಸಿ ಸವತಿಯೊಡನೆ ಸಂಸಾರ ಮಾಡಲು ಇಚ್ಛಿಸುವುದಾದರೆ, ಗಂಡನು ಅದಕ್ಕೆ ಸಮ್ಮತಿಸಬೇಕಾಗುವುದು. ಇಂತಹ ಸಂದರ್ಭಗಳು ಅನೇಕರ ಅನುಭವದಲ್ಲಿ ಬಂದಿವೆ. ನಮ್ಮ ಭರತ ಖಂಡದಲ್ಲಿಯೂ ಅನೇಕ ಇತರ ಪೌರ್ವಾತ್ಯ ದೇಶಗಳಲ್ಲಿಯೂ ಆದಿಯಿಂದಲೂ ಬಹು ಪತ್ನೀತ್ವಕ್ಕೆ ಅನುಮತಿಯುಂಟು. ಕೆಲವು ಸನ್ನಿವೇಶಗಳಲ್ಲಿ ರಾಜಕೀಯ ಕಾರಣಗಳ ದೆಸೆಯಿಂದಲೂ ಬಹು ಪತ್ನೀತ್ವಕ್ಕೆ ಅವಕಾಶ ಕೊಡಬೇಕಾಗುತ್ತದೆ. ಮೋಜಸಿನ (Moses) ಕಾಲಕ್ಕೆ ಮುಂಚೆ ಬಹು ಪತ್ನೀತ್ವವು ಆಚರಣೆಯಲ್ಲಿದ್ದಿತು; ಥ್ರೇಷಿಯನರು (Thracians), ಲಿಡಿಯನರು (Lydians) ಮುಂತಾದವರಲ್ಲಿಯೂ ಅದು ರೂಢಿಯಲ್ಲಿದ್ದಿತು; ಪಾರ್ಸಿಯವರಲ್ಲಂತು, ಹೆಚ್ಚು ಮಂದಿ ಪತ್ನಿಯರಿರಬೇಕಾದುದು ಮತಧರ್ಮವಾಗಿಯೇ ಪರಿಣಮಿಸಿದ್ದಿತು. ಬಹು ಕಾಲದ ಹಿಂದೆ, ನಾಗರಿಕರಲ್ಲಿ ಅಗ್ರಗಣ್ಯರೆನಿಸಿಕೊಂಡಿದ್ದ ಅಥಿನಿಯನರಲ್ಲಿ (Athenians) ಬಹು ಪತ್ನೀತ್ವವು ರೂಢಿಯಲ್ಲಿದ್ದುದಲ್ಲದೆ, ಹೆಂಗುಸರು ಇತರ ಆಸ್ತಿಯಂತೆ ಪರಿಗಣಿಸಲ್ಪಡುತ್ತಿದ್ದು, ಮೃತ ಶಾಸನ ಪತ್ರಗಳಲ್ಲಿ ಇತರ ಸ್ವತ್ತಿನಂತೆಯೇ ಪತ್ನಿಯರೂ ಹಂಚಿಕೆಯಾಗಬೇಕಾದ ಕ್ರಮವು ಉಲ್ಲೇಖವಾಗುವ ಪದ್ಧತಿಯಿದ್ದಿತು. ಹೀಗೆಯೇ, ಹಿಂದಣ ಕಾಲದಲ್ಲಿದ್ದ ನಾಗರಿಕರಾದ ರೋಮನ (Romans)ರಲ್ಲಿಯೂ ಬಹು ಪತ್ನೀತ್ವವು ಚಿರ ಕಾಲ ರೂಢಿಯಲ್ಲಿದ್ದಿತು. ರೋಮನ್ ಚಕ್ರಾಧಿಪತ್ಯದಲ್ಲಿ ಕ್ರೈಸ್ತರ ಸ್ಥಿತಿಯೂ ಹೀಗೆಯೇ. ಮಹಮ್ಮದನ ಕಾಲದಲ್ಲಿ ಬಹು ಪತ್ನೀತ್ವವು ಎಲ್ಲೆಡೆಗಳಲ್ಲಿಯೂ ಆಚರಣೆಯಲ್ಲಿದ್ದುದರಿಂದಲೂ ಅನಿವಾರ್ಯವಾದ ಇತರ ಕೆಲವು ಕಾರಣಗಳ ದೆಸೆ

ಯಿಂದಲೂ ಮಹಮ್ಮದನು ಇಸ್ಲಾಂ ಮತದಲ್ಲಿ ಬಹು ಪತ್ನೀತ್ವಕ್ಕೆ ಅವಕಾಶ ಕೊಡಬೇಕಾಯಿತು. ಆದರೆ ಒಬ್ಬ ಮನುಷ್ಯನಿಗೆ ಏಕ ಕಾಲದಲ್ಲಿ ಕ್ಲೃಪ್ತವಾದ ಸಂಖ್ಯೆಗಿಂತಲೂ ಹೆಚ್ಚು ಮಂದಿ ಪತ್ನಿಯರಿರಕೂಡದೆಂದು ಅವನು ವಿಧಾಯಕ ಮಾಡಿದುದಲ್ಲದೆ, ಸಮಾಜದಲ್ಲಿ ಸ್ತ್ರೀಯರಿಗೆ ಘನತೆ ಗೌರವಗಳುಂಟಾಗುವಂತೆ ತಕ್ಕ ಏರ್ಪಾಟುಗಳನ್ನು ಮಾಡಿ ವಿವಾಹದ ಕಟ್ಟುಪಾಡುಗಳನ್ನು ಮೇಲಣ ಹಂತಕ್ಕೆ ಏರಿಸಿ ಪರಿಷ್ಕರಿಸಿದನು. ಬಹು ಪತ್ನೀತ್ವದಲ್ಲಿ ಈಚೆಗೆ ಅನಾದರವು ಹುಟ್ಟಿರುವುದು ಶುಭ ಸೂಚಕವಾಗಿದೆ.

**ನಿಷಿದ್ಧ ಕರ್ಮಗಳು**

ಸುಳ್ಳು ಹೇಳುವುದು, ಮೋಸ ಮಾಡುವುದು, ಇತರರ ಸ್ವತ್ತನ್ನು ಅಪಹರಿಸುವುದು, ಮದ್ಯಪಾನ ಮಾಡುವುದು, ದ್ಯೂತವಾಡುವುದು— ಇವೇ ಮುಂತಾದ ದುಷ್ಕರ್ಮಗಳನ್ನು ಪರಿತ್ಯಜಿಸಬೇಕೆಂಬುದು ಮುಸಲ್ಮಾನ ಧರ್ಮಶಾಸ್ತ್ರದ ಆದೇಶ. ಯಾವ ಕರ್ಮಗಳಿಂದ ಪರಹಿಂಸೆಯುಂಟಾಗುವುದೋ ಅವುಗಳೆಲ್ಲವೂ ತ್ಯಾಜ್ಯವೆಂಬುದು ಮಹಮ್ಮದನ ಕಟ್ಟಪ್ಪಣೆ. ಮದ್ಯಪಾನ, ದ್ಯೂತ ಮುಂತಾದ ದುರ್ವ್ಯಸನಗಳಿಂದ ಜನರು ಈಗಲೂ ದುರ್ದಸೆಯನ್ನು ಹೊಂದುತ್ತಿದ್ದಾರೆ. ಮದ್ಯಪಾನ ನಿರೋಧಕ್ಕಾಗಿ ಪಾಶ್ಚಾತ್ಯ ದೇಶಗಳಲ್ಲಿಯೂ ಈಗ ಪ್ರಬಲವಾಗಿ ಚಳವಳವು ನಡೆಯುತ್ತಿದೆ. ದ್ಯೂತವಾದರೋ, ಕುದುರೆಯ ಜೂಜು ಮುಂತಾದ ರೂಪಗಳಲ್ಲಿ ಸಮಾಜದ ರಕ್ತವನ್ನೇ ಹೀರುತ್ತಿದೆ. ಇಸ್ಲಾಂ ಮತದ ಮೇರೆಗೆ ನಿಷಿದ್ಧ ಕರ್ಮಗಳೆಂದೇರ್ಪಟ್ಟಿರುವವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೂಚಿಸಿದೆ; ಉಳಿದವುಗಳನ್ನು ಸ್ಥಳ ಸಂಕೋಚದಿಂದ ಇಲ್ಲಿ ತಿಳಿಸುವಂತಿಲ್ಲ.

**ಸತ್ಕರ್ಮಗಳು**

ಇಸ್ಲಾಂ ಮತಾನುಯಾಯಿಗಳು ಈ ಮೊದಲೇ ತಿಳಿಸಿರುವ ತತ್ತ್ವಗಳಿಗನುಸಾರವಾಗಿ ವರ್ತಿಸಬೇಕಲ್ಲದೆ ಇತರ ಕೆಲವು ಸತ್ಕರ್ಮಗಳನ್ನೂ ಆಚರಿಸಬೇಕೆಂಬುದು ಖುರಾನಿನ ಆದೇಶ. **ಇಸ್ಲಾಂ** ಎಂದರೆ ಭಗವಂತನ ಆದೇಶ ವಾಕ್ಯಗಳಲ್ಲಿ ಗೌರವವನ್ನಿಟ್ಟು, ಅವನಿಂದ ಸೃಷ್ಟಿಯಾಗಿರುವ ಪ್ರಾಣಿಗಳಲ್ಲಿ ಮರುಕದಿಂದಿರುವುದು ಎಂದು ಮಹಮ್ಮದನು ಅರ್ಥ ಹೇಳಿದ್ದಾನೆ.

ಮನೋಹರವಾದ ಈ ಅರ್ಥ ವಿವರಣೆಗನುಗುಣವಾದ ಸತ್ಕರ್ಮಗಳೇ ಇಸ್ಲಾಂ ಮತದಲ್ಲಿ ವಿಧಾಯಕವಾಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೂಚಿಸಲಾಗುವುದು :—

**ಪ್ರಾರ್ಥನೆ.**—ಭಗವಂತನನ್ನು ನಿರ್ಮಲವಾದ ಮನಸ್ಸಿನಿಂದ ಧ್ಯಾನಿಸುವುದು ಮೊಟ್ಟಮೊದಲನೆಯ ಕರ್ತವ್ಯ. "ಪ್ರತಿಯೊಂದು ವಸ್ತುವನ್ನೂ ಪರಿಷ್ಕರಣ ಮಾಡುವ ಸಾಧನವೊಂದುಂಟು ; ಮನಸ್ಸನ್ನು ಪರಿಷ್ಕರಣ ಮಾಡುವ ಅಂತಹ ಸಾಧನವು ಕೃತಜ್ಞತೆಯಿಂದ ನಡೆಯಿಸುವ ಭಗವತ್ಪ್ರಾರ್ಥನೆ" ಎಂಬುದು ಮುಹಮ್ಮದನ ಉಪದೇಶ. ಮನಶ್ಶುದ್ಧಿಯಿಲ್ಲದೆ ಮಾಡುವ ಪ್ರಾರ್ಥನೆಗೆ ಭಗವಂತನು ಕಿವಿಗೊಡನೆಂಬುದೂ, ತ್ರಿಕರಣ ಶುದ್ಧಿಯಿಲ್ಲದವನ ಧ್ಯಾನವು ನಿರರ್ಥಕವೆಂಬುದೂ, ಯಾರು ಭಗವಂತನನ್ನು ಕಾಣಲಿಚ್ಛಿಸುವರೋ ಅವರನ್ನು ಭಗವಂತನೂ ಕಾಣಲಿಚ್ಛಿಸುವನು ಎಂಬುದೂ ಮುಹಮ್ಮದನ ದಿವ್ಯ ವಾಕ್ಯಗಳು. "ಭಗವಂತನು ನಿನ್ನೆದುರಿಗಿದ್ದಂತೆ ಭಾವಿಸಿಕೊಂಡು ಧ್ಯಾನಮಾಡು ; ಏಕೆಂದರೆ, ನೀನು ಅವನನ್ನು ಕಾಣದೆ ಇದ್ದರೂ, ಅವನು ಸರ್ವದಾ ನಿನ್ನನ್ನು ನೋಡುತ್ತಲೇ ಇರುವನು" ಎಂದು ಬೋಧಿಸಿ ಮುಹಮ್ಮದನು ಭಗವಂತನನ್ನು ಏಕಾಗ್ರ ಚಿತ್ತದಿಂದ ಧ್ಯಾನಿಸಬೇಕೆಂಬುದನ್ನು ಸೂಚಿಸಿದ್ದಾನೆ.

**ಉಪವಾಸ.**—ಉಪವಾಸವು ಭಾರತೀಯರಿಗೆ ಹೊಸದಲ್ಲ ; ಏಕಾದಶಿಯೇ ಮುಂತಾದ ವ್ರತ ದಿನಗಳಲ್ಲಿ ಉಪವಾಸ ಮಾಡಬೇಕೆಂಬ ನಿಯಮವನ್ನು ಈಗಲೂ ಅನೇಕರು ಆಚರಣೆಯಲ್ಲಿಟ್ಟಿದ್ದಾರೆ. ಇಸ್ಲಾಂ ಮತದಲ್ಲಿಯೂ ಕೆಲವು ಕ್ಲೃಪ್ತ ದಿನಗಳಲ್ಲಿ ಉಪವಾಸ ಮಾಡಬೇಕೆಂದು ವಿಧಾಯಕವಾಗಿದೆ. ಉಪವಾಸಮಾಡುವುದರಿಂದ ಎರಡು ವಿಧದ ಫಲವುಂಟು : ಮೊದಲನೆಯದು, ಆರೋಗ್ಯ ಶಾಸ್ತ್ರ ರೀತ್ಯಾ ದೇಹ ಶುದ್ಧಿಗೆ ಸಾಧಕವಾಗುವುದು ; ಎರಡನೆಯದು, ಭಕ್ತಿಯಿಂದಲೂ ಶುದ್ಧ ಮನಸ್ಸಿನಿಂದಲೂ ಭಗವಂತನನ್ನು ಧ್ಯಾನಿಸುವುದಕ್ಕೆ ಸಹಾಯಕವಾಗುವುದು. ಉಪವಾಸ ವ್ರತವನ್ನು ಆಚರಿಸುವ ಕಾಲದಲ್ಲಿ ದುರ್ಭಾಷೆಯನ್ನು ಬಿಡಬೇಕೆಂದೂ, ಸುಳ್ಳು ಹೇಳುವುದನ್ನೂ ಮನಶ್ಚಾಂಚಲ್ಯವನ್ನೂ ಬಿಡದೆ

ಕೇವಲ ಆಹಾರ ಪಾನೀಯಗಳನ್ನು ಬಿಟ್ಟು ಕುಳಿತಿರುವವನ ಉಪವಾಸ ವ್ರತಕ್ಕೆ ಭಗವಂತನಲ್ಲಿ ಲೇಶವೂ ಬೆಲೆಯಿಲ್ಲವೆಂದೂ ಮುಹಮ್ಮದನು ಬೋಧಿಸಿದ್ದಾನೆ.

**ದೀನಾನಾಥರಿಗೆ ಸಹಾಯ.**—ಪರೋಪಕಾರಕ್ಕಿಂತಲೂ ಹೆಚ್ಚಿನ ಪುಣ್ಯ ಸಾಧನೆಯು ಮತ್ತೊಂದಿಲ್ಲವೆಂಬ ತತ್ತ್ವವನ್ನು ಪ್ರತಿಪಾಲಿಸಿದ ಪುಣ್ಯಾತ್ಮನು ಮುಹಮ್ಮದನು. ಪ್ರತಿಯೊಬ್ಬನೂ ತನ್ನ ಕೈಯ ಲ್ಲಾದಷ್ಟು ಮಟ್ಟಿಗೆ ದೀನಾನಾಥರಿಗೆ ಸಹಾಯಮಾಡಬೇಕೆಂದು ವಿಧಿಸಿ, ಇದರಿಂದ ಮುಂದಣ ವಿಪತ್ತುಗಳು ಪರಿಹಾರವಾಗುತ್ತವೆಂದೂ, ಅನಾಥ ರಾದ ಶಿಶುಗಳನ್ನು ಪಾಲಿಸುವುದರಿಂದ ಪರಮಾತ್ಮನಿಗೆ ವಿಶೇಷ ತೃಪ್ತಿ ಯುಂಟಾಗುವುದೆಂದೂ ಅವನು ಉಪದೇಶಿಸಿದ್ದಾನೆ.

**ಬಂಧುಗಳ ಪೋಷಣೆ.**—ಪತ್ನೀ ಪುತ್ರಾದಿಗಳ ಪೋಷಣೆಯೂ, ಗುರು ಹಿರಿಯರ ಸೇವೆಯೂ, ಬಂಧು ಮಿತ್ರರ ಆದರಣೆಯೂ ಧರ್ಮ ಕಾರ್ಯಗಳೆಂದು ಮುಹಮ್ಮದನು ಉಪದೇಶಿಸಿದ್ದಾನೆ. "ತಂದೆಯು ಸುಪ್ರೀತನಾದರೆ ಭಗವಂತನೂ ಪ್ರಸನ್ನನಾಗುವನು." "ಸ್ವರ್ಗ ಲೋಕವನ್ನು ಸೇರಲು ನಿನಗೆ ಇಚ್ಛೆಯಿದ್ದರೆ, ಮಾತಾ ಪಿತೃಗಳನ್ನು ಮೊದಲು ಸುಪ್ರೀತರನ್ನಾಗಿ ಮಾಡು." "ಮಾತಾ ಪಿತೃಗಳು ನಿನಗೆ ಅಪಕಾರವನ್ನೇ ಮಾಡಿದ್ದರೂ ನೀನು ಅವರಿಗೆ ಉಪಕಾರವನ್ನೇ ಮಾಡಬೇಕು." "ಅನಾಥರ ಪೋಷಣೆಗೆ ಒಂದು ಫಲವಾದರೆ ಬಂಧುಗಳ ಪೋಷಣೆಗೆ ಎರಡು ಫಲಗಳು."—ಇವೇ ಮುಹಮ್ಮದನ ಸದ್ಬೋಧನೆಗಳು. ಒಮ್ಮೆ, ಮುಹಮ್ಮದನ ಶಿಷ್ಯನೊಬ್ಬನು ತಾನು ಒಂದು ಪಾಪ ಕರ್ಮವನ್ನು ಮಾಡಿರುವುದಾಗಿ ಅವನಿಗೆ ತಿಳಿಸಿ ಅದಕ್ಕೆ ಪ್ರಾಯಶ್ಚಿತ್ತವೇನೆಂದು ಕೇಳಿದನು. ಅದಕ್ಕೆ ಮುಹಮ್ಮದನು, "ನಿನಗೆ ತಾಯಿ ಇದ್ದಾಳೆಯೇ?" ಎಂದು ಅವನನ್ನು ಕೇಳಿದನು. ಶಿಷ್ಯನು, "ನನಗೆ ತಾಯಿ ಇಲ್ಲ, ಚಿಕ್ಕಮ್ಮನಿದ್ದಾಳೆ" ಎಂದು ಉತ್ತರ ಹೇಳಲು, ಮುಹಮ್ಮದನು, "ಹಾಗಾದರೆ ಮನೆಗೆ ಹೋಗಿ ನಿಮ್ಮ ಚಿಕ್ಕಮ್ಮ ನನ್ನು ಭಕ್ತಿಯಿಂದ ಸೇವಿಸು. ಆಕೆ ಸಂತುಷ್ಟಳಾಗಿ ಸುಪ್ರೀತಳಾದರೆ

ನಿನ್ನ ಪಾಪವು ಪರಿಹಾರವಾಗುವುದು" ಎಂದು ತಿಳಿಸಿ ಶಿಷ್ಯನನ್ನು ಕಳುಹಿಸಿಬಿಟ್ಟನು.

**ಅತಿಥಿ ಸತ್ಕಾರ.**—ಮುಹಮ್ಮದನು ತಾನಾದರೂ ಹಸಿವಿನಿಂದಿದ್ದು ಅತಿಥಿಗಳನ್ನು ಸತ್ಕರಿಸುತ್ತಿದ್ದ ಧರ್ಮಾತ್ಮನೆಂಬುದನ್ನು ಹಿಂದೆಯೇ ತಿಳಿದಿದ್ದೇವೆ. ಇಸ್ಲಾಂ ಮತದಲ್ಲಿ ಅತಿಥಿ ಸತ್ಕಾರಕ್ಕೆ ಉಚ್ಚಸ್ಥಾನವಿರುವುದು. ಭಗವಂತನಿರುವನೆಂಬ ನಂಬಿಕೆಯುಳ್ಳವರು ಅತಿಥಿಗಳನ್ನು ಅಗತ್ಯವಾಗಿ ಸತ್ಕರಿಸಬೇಕೆಂದೂ, ಅತಿಥಿಯಾಗಿ ಬಂದವನು ಗೃಹಸ್ಥನಿಗೆ ತೊಂದರೆಯಾಗುವಷ್ಟು ಕಾಲ ಅಲ್ಲಿ ನಿಲ್ಲಕೂಡದೆಂದೂ, ಪರಲೋಕದಲ್ಲಿ ಸದ್ಗತಿಯನ್ನು ಪಡೆಯಲಿಚ್ಛಿಸುವವರೆಲ್ಲರೂ ಅತಿಥಿ ಸತ್ಕಾರ ಮಾಡಬೇಕೆಂದೂ ಖುರಾನಿನ ಉಪದೇಶ.

ಆಸ್ತಿಕರು ಅನುಸರಿಸಬೇಕಾದ ಸಭ್ಯವರ್ತನೆಯ ವಿಷಯವಾಗಿ ಮುಹಮ್ಮದನು ಹೀಗೆ ಹೇಳಿದ್ದಾನೆ:—"ಭಗವದ್ವಿಚಾರವಾಗಿ ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಗೌರವವನ್ನು ತೋರಿಸು. ವಿಪತ್ತು ವೈಭವಗಳೆರಡರಲ್ಲಿಯೂ ಸತ್ಯವನ್ನೇ ನುಡಿ. ಬಡತನ ಬಂದಾಗಲೂ, ಸಿರಿತನವಿರುವಾಗಲೂ ಯಥೋಚಿತವಾಗಿ ವಿವೇಕದಿಂದ ವರ್ತಿಸು. ಬಂಧು ವರ್ಗದವರು ನಿನಗೆ ಉಪಕಾರ ಮಾಡದಿದ್ದರೂ, ಅವರು ಕಷ್ಟದಲ್ಲಿದ್ದರೆ, ಅವರ ಪೋಷಣೆಯ ಭಾರವನ್ನು ಅಗತ್ಯವಾಗಿ ವಹಿಸು. ನಿನಗೆ ಭಿಕ್ಷಕೊಡದೆ ನಿರಾಕರಿಸಿದ್ದವನೇ ನಿನ್ನ ಮನೆಗೆ ಭಿಕ್ಷಕ್ಕೆ ಬರುವಂತಾದರೆ ಅವನ ಅಪಕಾರವನ್ನೆಣಿಸದೆ ಅವನಿಗೆ ಭಿಕ್ಷವನ್ನು ನೀಡು. ನಿನಗಪಕಾರ ಮಾಡಿದವರನ್ನು ಮನ್ನಿಸು. ಭಗವತ್ಸಂಬಂಧವಾದ ದಿವ್ಯ ಜ್ಞಾನವನ್ನು ಮೌನದಿಂದಿದ್ದು ಪಡೆ. ಮಾತನಾಡುವಾಗ ಭಗವಂತನ ನಾಮವನ್ನುಚ್ಚರಿಸು. ಭಗವಂತನು ಸೃಷ್ಟಿಸಿರುವ ಪ್ರಾಣಿಗಳಲ್ಲಿ ದಯೆಯನ್ನು ತೋರಿಸಿ ಆದರ್ಶ ಪ್ರಾಯನಾಗಿ ಪರಿಣಮಿಸು."

**ವಿದ್ಯೆಗೆ ಪ್ರಾಶಸ್ತ್ಯ**

ಮುಹಮ್ಮದನು ವಿದ್ಯಾವಂತನಾಗಿರಲಿಲ್ಲ; ಅವನಿಗೆ ಅಕ್ಷರ ಜ್ಞಾನವೇ ಇರಲಿಲ್ಲವೆಂದು ಕೆಲವರು ಹೇಳುವರು. ಆದರೂ ಅವನು ನೆರವೇರಿಸಿರುವ ಮಹತ್ಕಾರ್ಯಗಳನ್ನು ನೋಡಿದರೆ ಪೂರ್ಣ ಪಾಂಡಿತ್ಯವುಳ್ಳವರೂ ಮುಗ್ಧರಾಗುವಂತಿರು

ವುದು. ಭಗವಂತನ ಕೃಪೆಯಿಂದ ಬಂದ ಸಾಮರ್ಥ್ಯವೆಲ್ಲಿ? ಮನುಷ್ಯನ ಅಧ್ಯವಸಾಯ ಬಲದಿಂದ ಬಂದ ಸಾಮರ್ಥ್ಯವೆಲ್ಲಿ? ಹುಟ್ಟುಗುಣಕ್ಕಿಂತಲೂ ಕಟ್ಟುಗುಣವು ಕೀಳೆಂಬುದು ಎಲ್ಲರಿಗೂ ತಿಳಿದ ವಿಷಯ. ಮಹಮ್ಮದನು ತಾನು ಸ್ವತಃ ವಿದ್ಯಾವಂತನಲ್ಲದಿದ್ದರೂ, ಕೇವಲ ವಿದ್ಯಾ ಪಕ್ಷಪಾತಿಯಾಗಿದ್ದನು. ಮನುಷ್ಯನ ಸಮಸ್ತ ಕಾರ್ಯಗಳನ್ನೂ ಬರೆದಿಡುವುದಕ್ಕೆ ಲೇಖನಿಯೇ ಸಾಧಕವಾದುದರಿಂದ, ವಿದ್ಯೆಯನ್ನು ಎಷ್ಟು ಕೊಂಡಾಡಿದರೂ ಸಾಲದೆಂಬುದು ಮಹಮ್ಮದನ ಭಾವನೆ. ಧರ್ಮ ರಕ್ಷಣೆಗಾಗಿ ದೇಹವನ್ನು ಬಿಡುವವನ ರಕ್ತಕ್ಕಿಂತಲೂ ಪಂಡಿತನ ಬರೆವಣಿಗೆಗೆ ಉಪಯೋಗವಾಗುವ ಮಸಿಯು ಶ್ರೇಷ್ಠವಾದುದೆಂದೂ, ವಿದ್ಯಾಭ್ಯಾಸವು ಸ್ತ್ರೀ ಪುರುಷರಿಬ್ಬರಿಗೂ ಅತ್ಯಾವಶ್ಯಕವೆಂದೂ, ವಿದ್ಯಾಭ್ಯಾಸಕ್ಕಾಗಿ ಪರಸ್ಥಳಗಳಿಗೆ ಹೋದವನಿಗೆ ಮಹಾ ಯಾತ್ರೆ ಮಾಡಿದಷ್ಟು ಪುಣ್ಯವೆಂದೂ ಮಹಮ್ಮದನು ಬೋಧಿಸಿದನು. ಒಮ್ಮೆ ಮಹಮ್ಮದನು, "ಚೀಣಾ ದೇಶದಂತೆ ಕೇವಲ ದೂರದಲ್ಲಿರುವ ದೇಶಗಳಲ್ಲಿ ವಿದ್ಯೆಯು ದೊರೆತರೂ ಸರಿ, ಅಲ್ಲಿಗೂ ಹೋಗಿ ನಮ್ಮಲ್ಲಿಲ್ಲದ ಹೊಸ ವಿಷಯಗಳನ್ನು ಕಲಿತು ಬನ್ನಿರಿ" ಎಂದು ತನ್ನವರಿಗೆ ಹೇಳಿದನಂತೆ. ಅವನ ಬೋಧನೆಯನ್ನನುಸರಿಸಿ ಮೌಲ್ವಿಗಳೂ ಉಲಮಾಗಳೂ ದೇಶ ದೇಶಗಳಿಗೂ ಹೋಗಿ ವಿದ್ಯಾರ್ಜನೆ ಮಾಡಿಕೊಂಡು ಬಂದು ಕೆಲವು ಶತಮಾನಗಳಲ್ಲಿಯೇ ಪ್ರಪಂಚವನ್ನೇ ಬೆರಗು ಮಾಡುವಷ್ಟು ಮಟ್ಟಿಗೆ ಗ್ರಂಥ ರಚನೆ ಮಾಡಿ, ಸಾಹಿತ್ಯವನ್ನೂ ವಿಜ್ಞಾನವನ್ನೂ ಅಭಿವೃದ್ಧಿಗೊಳಿಸಿದರು. ಆದರೆ, ಅವರು ತಮ್ಮ ಅಧ್ಯವಸಾಯವನ್ನು ಹಾಗೆಯೇ ಮುಂದುವರಿಸಲಿಲ್ಲ. ಗರ್ವವೂ ಸಂಕುಚಿತ ಮನೋಭಾವಗಳೂ ಅವರಲ್ಲಿ ಮೊಳೆತು ವೃದ್ಧಿಗೊಂಡುದರಿಂದ ಅವರ ಪ್ರಯತ್ನಗಳು ಹಿಂದೆ ಬಿದ್ದುವು. ಸಾಹಿತ್ಯ, ಇತಿಹಾಸ, ರಸಾಯನ ಶಾಸ್ತ್ರ, ಭೌತಿಕ ಶಾಸ್ತ್ರ, ಪ್ರಾಣಿ ಶಾಸ್ತ್ರ, ವೈದ್ಯ ಶಾಸ್ತ್ರ, ಶಿಲ್ಪ ಶಾಸ್ತ್ರ, ಭೂಗೋಳ ಶಾಸ್ತ್ರ, ಖಗೋಳ ಶಾಸ್ತ್ರ—ಇವೇ ಮುಂತಾದುವುಗಳ ಅಭಿವೃದ್ಧಿಗಾಗಿ ಮಹಮ್ಮದೀಯರು ಹಿಂದೆ ನಡೆಯಿಸಿದ ಪ್ರಯತ್ನಗಳೂ ಅವರು ಸಾಧಿಸಿದ ಸತ್ಫಲಗಳೂ ಚರಿತ್ರಾಂಶಗಳಾಗಿವೆ. ಶಿಲ್ಪ ಶಾಸ್ತ್ರದಲ್ಲಂತು, ಅವರು ಕಟ್ಟಿಸಿದ ಕಟ್ಟಡಗಳು ಇಂದಿಗೂ, ಎಂದೆಂದಿಗೂ

ಪ್ರಪಂಚವನ್ನೇ ತಲೆದೂಗಿಸತಕ್ಕುವಾಗಿವೆ. ಆಗ್ರಾ ನಗರದಲ್ಲಿರುವ ತಾಜಾ ಮಹಲು ಒಂದೇ ಅವರ ಕೀರ್ತಿಯನ್ನು ಬೆಳಗಿಸಲು ಸಾಕು. ಇವೆಲ್ಲ ಸತ್ಫಲಗಳಿಗೂ ಮಹಮ್ಮದನ ಉಪದೇಶವೇ ಕಾರಣ. "ಶ್ರದ್ಧೆಯಿಂದ ಒಂದು ಗಂಟೆಯ ಕಾಲ ಭಗವಂತನ ಸೃಷ್ಟಿ ವೈಚಿತ್ರ್ಯವನ್ನು ಪರಿಶೀಲಿಸುವುದು ಎಪ್ಪತ್ತು ವರುಷಗಳ ಕಾಲ ಪ್ರಾರ್ಥನೆಯನ್ನು ಓದುವುದಕ್ಕಿಂತ ಶ್ರೇಷ್ಠವಾದುದು." "ಪಂಡಿತರನ್ನು ಯಾವನು ಗೌರವಿಸುವನೋ ಅವನು ನನ್ನನ್ನೇ ಗೌರವಿಸಿದಂತಾಗುತ್ತದೆ." "ವಿದ್ಯಾರ್ಜನೆಗಾಗಿ ಸಂಚಾರ ಮಾಡುವವನಿಗೆ ಭಗವಂತನು ಪರ ಲೋಕದಲ್ಲಿ ಸೌಖ್ಯವನ್ನು ಕರುಣಿಸುತ್ತಾನೆ." "ವಿದ್ಯೆಗೂ ವಿದ್ಯಾವಂತರಿಗೂ ಪ್ರೋತ್ಸಾಹ ಕೊಡುವಾತನು ಸ್ವರ್ಗದಲ್ಲಿ ಸದ್ಗತಿಯನ್ನು ಪಡೆಯುವನು." "ಜ್ಞಾನವನ್ನು ಸಂಪಾದಿಸಿರಿ; ಜ್ಞಾನಾರ್ಜನೆಯೂ ಒಂದು ಪುಣ್ಯ ಕರ್ಮ. ಜ್ಞಾನದ ವಿಷಯವನ್ನು ಪ್ರಸ್ತಾವಿಸುವವನು ಭಗವಂತನನ್ನು ಕೊಂಡಾಡಿದಂತೆಯೇ ಸರಿ. ವಿದ್ಯೆ ಕಲಿಯುವವನು ಭಗವಂತನನ್ನು ಸೇವಿಸಿದಂತೆಯೇ ಪುಣ್ಯವನ್ನು ಸಂಪಾದಿಸುವನು. ವಿದ್ಯಾ ದಾನ ಮಾಡಿದವನು ಭಗವತ್ಸೇವೆಯ ರೂಪದಲ್ಲಿ ಪುಣ್ಯದ ರಾಶಿಯನ್ನೇ ಕಟ್ಟಿಕೊಳ್ಳುವನು. ವಿದ್ಯೆಯಿಂದ ಯುಕ್ತಾಯುಕ್ತ ವಿವೇಚನೆ ದೊರೆಯುತ್ತದೆ. ವಿದ್ಯೆಯಿಂದ ಸ್ವರ್ಗ ಲೋಕದ ದಾರಿಯು ಗೋಚರವಾಗುತ್ತದೆ. ಮರುಭೂಮಿಯಲ್ಲಿಯೂ ವಿದ್ಯೆಯೇ ನಮ್ಮ ಮಿತ್ರನಂತಿರುವುದು. ಏಕಾಂತದಲ್ಲಿ ವಿದ್ಯೆಯೇ ಸಂಗಡಿಗನಂತೆ ನಮಗೆ ನೆರವಾಗುತ್ತದೆ. ಮಿತ್ರವಿಯೋಗ ಕಾಲದಲ್ಲಿ ವಿದ್ಯೆಯೇ ನಮ್ಮನ್ನು ಸಂತೈಸಿ ದುಃಖ ಶಮನ ಮಾಡುವ ಸದ್ಬಂಧುವು. ವಿದ್ಯೆಯೇ ನಮ್ಮ ಸುಖ ಸೋಪಾನ; ವಿದ್ಯೆಯೇ ದುಃಖ ಕಾಲದಲ್ಲಿ ನಮ್ಮ ಮುಖ್ಯಾವಲಂಬನ; ವಿದ್ಯೆಯೇ ಮಿತ್ರಗೋಷ್ಠಿಯಲ್ಲಿ ನಮ್ಮನ್ನು ಬೆಳಗಿಸುವ ಸ್ಫುರದ್ರೂಪ; ವಿದ್ಯೆಯೇ ಶತ್ರುಗಳನ್ನು ನಿಗ್ರಹಿಸುವ ನಮ್ಮ ಬಾಹು ಬಲ; ವಿದ್ಯಾವಂತನಾದ ಭಗವದ್ಭಕ್ತನು ಇಹ ಲೋಕದಲ್ಲಿ ರಾಜ ಯೋಗ್ಯವಾದ ಮನ್ನಣೆಯನ್ನು ಪಡೆದು, ಪರ ಲೋಕದಲ್ಲಿ ಸೌಖ್ಯ ಪರಂಪರೆಗಳನ್ನನುಭವಿಸುತ್ತಾನೆ."—ಇವೇ ಮೊದಲಾದ ಮಹಮ್ಮದನ ಉಪದೇಶ ವಾಕ್ಯಗಳು ಎಷ್ಟು ಸ್ಫೂರ್ತಿ ದಾಯಕ

ಗಳು! ವಿದ್ಯಾ ವಿಷಯಕವಾದ ಈ ಉಪದೇಶವನ್ನು ಓದಿದಾಗ ಭರ್ತೃಹರಿಯು ರಚಿಸಿರುವ ಮುಂದಣ ಶ್ಲೋಕವು ಸ್ಫೂರ್ತಿಗೆ ಬರುವುದಲ್ಲವೆ!

ವಿದ್ಯಾನಾಮ ನರಸ್ಯ ರೂಪಮಧಿಕಂ ಪ್ರಚ್ಛನ್ನ ಗುಪ್ತಂ ಧನಂ।
ವಿದ್ಯಾ ಭೋಗಕರೀ ಯಶಸ್ಸುಖಕರೀ ವಿದ್ಯಾ ಗುರೂಣಾಂ ಗುರುಃ ॥
ವಿದ್ಯಾ ಬಂಧುಜನೋ ವಿದೇಶ ಗಮನೇ ವಿದ್ಯಾ ಪರಾ ದೇವತಾ!
ವಿದ್ಯಾ ರಾಜ ಸುಪೂಜಿತಾ ನಹಿ ಧನಂ ವಿದ್ಯಾ ವಿಹೀನಃ ಪಶುಃ ॥

# ಹದಿನಾರನೆಯ ಅಧ್ಯಾಯ

## ಪರಿಸಮಾಪ್ತಿ

ಮುಹಮ್ಮದನ ಜೀವನ ಚರಿತ್ರೆಯನ್ನೂ ಅವನು ಬೋಧಿಸಿದ ಇಸ್ಲಾಂ ಮತದ ಮುಖ್ಯ ತತ್ತ್ವಗಳನ್ನೂ ಸಂಕ್ಷೇಪವಾಗಿ ತಿಳಿಸಿದು ದಾಯಿತು. ಮುಹಮ್ಮದನು ಸಾಧಿಸಿದ ಮಹತ್ಕಾರ್ಯಗಳನ್ನೂ, ಅವನು ಅನುಗ್ರಹಿಸಿರುವ ಉಪದೇಶ ವಾಕ್ಯಗಳ ಸ್ವಭಾವವನ್ನೂ ಪರಿಶೀಲಿಸಿದರೆ, ಅವನು ಕರ್ಮಯೋಗಿಯಾದ ಸಮಾಜ ಸುಧಾರಕನೆಂದು ಧಾರಾಳವಾಗಿ ಹೇಳಬಹುದು. ಏಕೆಂದರೆ, "ಮಾನವನು ಸಂತತವೂ ಪ್ರಯತ್ನ ಮಾಡುತ್ತಲೇ ಇರಬೇಕು. ಕೆಲಸ ಮಾಡುವುದು ಅವನ ಭಾರ. ಅದಕ್ಕೆ ಫಲವು ಲಭಿಸುವುದು ಭಗವಂತನ ಅಧೀನ" ಎಂದು ಹೇಳುತ್ತ, ಅದಕ್ಕನುಗುಣವಾಗಿ ವರ್ತಿಸಿದವನು ಕರ್ಮಯೋಗಿಯಲ್ಲದೆ ಮತ್ತೇನು? ಮುಹಮ್ಮದನ ಈ ಹೇಳಿಕೆಗೂ, ಭಗವದ್ಗೀತೆಯಲ್ಲಿರುವ—

**ಕರ್ಮಯೋಗಿಯಾದ ಸುಧಾರಕ**

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ।
ಮಾ ಕರ್ಮ ಫಲ ಹೇತುರ್ಭೂರ್ಮಾ ತೇ ಸಂಗೋಽಸ್ತ್ವ ಕರ್ಮಣಿ ॥

ಎಂಬ ಉಪದೇಶಕ್ಕೂ ಎಷ್ಟು ಹೋಲಿಕೆಯಿರುವುದು! ಮುಹಮ್ಮದನು ಆಚರಣೆಗೆ ತಂದ ಪರಿಷ್ಕರಣ ಕರ್ಮಗಳ ಮುಖ್ಯ ಲಕ್ಷಣಗಳನ್ನು ಕುರಿತು ಕೆಲವು ಸಂಗತಿಗಳನ್ನು ಇಲ್ಲಿ ಹೇಳಲಾಗುವುದು:—

೧. **ಪ್ರಯತ್ನ ಸಾಧನೆಯ ಫಲ**—ಮುಹಮ್ಮದನು ಜನ್ಮವೆತ್ತಿದ ಕಾಲದಲ್ಲಿ ಅರಬ್ಬಿಯವರು ಮತಾಚಾರಗಳನ್ನಾಗಲಿ ರಾಜಕೀಯ ವ್ಯವಸ್ಥೆಯನ್ನಾಗಲಿ ಸಾಮಾಜಿಕ ನಿಯಮಗಳನ್ನಾಗಲಿ ಅರಿಯದೆ ಕೇವಲ ಅಜ್ಞಾನಾಂಧಕಾರದಲ್ಲಿ ಮುಳುಗಿ ತತ್ತರಿಸುತ್ತಿದ್ದರು; ಕಲಾಭಿವೃದ್ಧಿಗೂ ಅವರಿಗೂ ಬಹಳ ದೂರವಿದ್ದಿತು. ವಿಜ್ಞಾನ ವಿಚಾರಗಳಲ್ಲಂತು ಅವರು ಬಹಳ ಹಿಂದೆ ಉಳಿದಿದ್ದರು. ಯಾವಾಗ ನೋಡಿದರೂ ಪರಸ್ಪರವಾಗಿ ಹೋರಾಟ ಹೊಡೆದಾಟಗಳಲ್ಲಿಯೇ ಮಗ್ನರಾಗಿದ್ದ ಅಂಥವರಲ್ಲಿ ಐಕ

ಮತ್ಯಕ್ಕೆ ಅವಕಾಶವೇ ಇರಲಿಲ್ಲ. ಇಂತಹ ದುಸ್ಸ್ಥಿತಿಯಲ್ಲಿದ್ದವರನ್ನು ಮಹಮ್ಮದನು ಇಪ್ಪತ್ತಮೂರು ವರುಷಗಳ ಅಲ್ಪಾವಧಿಯಲ್ಲಿ ಪ್ರಬಲ ಜನಾಂಗವನ್ನಾಗಿ ಪರಿವರ್ತನಗೊಳಿಸಿದನು. ಮಹಮ್ಮದನ ಶಿಕ್ಷಣದ ಪ್ರಭಾವದಿಂದ ಅವರು ಲೌಕಿಕ ಪಾರಲೌಕಿಕ ವಿಚಾರಗಳೆರಡರಲ್ಲಿಯೂ ಪ್ರವೀಣರಾದರು. ಕಾಲ ಕ್ರಮದಲ್ಲಿ ಅವರಿಗೆ ರಾಜ್ಯಗಳ ಮೇಲೆ ರಾಜ್ಯಗಳು ಸ್ವಾಧೀನವಾದುವು.

೨. **ಲೋಕ ಸಂಗ್ರಹ ಬುದ್ಧಿ.**—ಅರಬ್ಬೀ ದೇಶವೊಂದರ ಯೋಗ ಕ್ಷೇಮಕ್ಕೆ ಮಾತ್ರ ಸಾಧಕವಾಗುವಂತೆ ನೋಡಿಕೊಳ್ಳುವುದು ಮಹಮ್ಮದನ ಸಂಕಲ್ಪವಾಗಿರಲಿಲ್ಲ. ಹಾಗಿದ್ದಲ್ಲಿ, ಅವನೂ ಒಬ್ಬ ಸ್ವದೇಶಾಭಿಮಾನಿಯೆನಿಸಿಕೊಳ್ಳುತ್ತಿದ್ದನೇ ಹೊರತು, ಈಗಿರುವಷ್ಟು ಮಹತ್ತನ್ನು ಪಡೆಯುತ್ತಿರಲಿಲ್ಲ; ಒಟ್ಟು ಮನುಷ್ಯತ್ವದ ಮಂಗಳಾಕಾಂಕ್ಷೆಯನ್ನೇ ತನ್ನ ಉದ್ದೇಶವಾಗಿಟ್ಟುಕೊಂಡು ತದನುಗುಣವಾಗಿ ಮತ ಸ್ಥಾಪನೆಯ ಮಹತ್ಕಾರ್ಯವನ್ನು ಕೈಕೊಂಡನು. ಇತರ ಮತದವರು ಖುರಾನಿನ ಕೆಲವು ಭಾಗಗಳನ್ನು ಒಪ್ಪದೆ ಇರಬಹುದು; ಆದರೂ, ಒಟ್ಟಿನಲ್ಲಿ ಅದನ್ನು ಎಲ್ಲರೂ ಅಭಿನಂದಿಸಲೇ ಬೇಕು. ಭಗವದ್ಗೀತೆಯು ಜಗದಭಿನಂದ್ಯವಾದ ಗ್ರಂಥವೆನಿಸಿರುವುದಕ್ಕೆ ಗೀತೋಪದೇಶವು ಲೋಕೋದ್ಧಾರಕ ಬುದ್ಧಿಯಿಂದ ನಡೆದುದೇ ಮುಖ್ಯ ಕಾರಣ.

೩. **ಶ್ಲಾಘ್ಯವಾದ ಸಮದರ್ಶಿತ್ವ.**—ಗುಲಾಮರನ್ನುದ್ಧರಿಸಿ ಸ್ತ್ರೀಯರ ಸ್ಥಿತಿಯನ್ನು ಉತ್ತಮಗೊಳಿಸಿದ ಪುಣ್ಯವು ಮಹಮ್ಮದನಿಗೆ ಸೇರಿತು. ದಾಸ್ಯದಿಂದ ನಿವೃತ್ತಿಯಾದವರೂ ಇತರರಂತೆಯೇ ಹಕ್ಕು ಬಾಧ್ಯತೆಗಳನ್ನನುಭವಿಸುವಂತೆ ಮಹಮ್ಮದನು ಏರ್ಪಡಿಸಿದುದು ಸಾಮಾನ್ಯ ವಿಷಯವಲ್ಲ. ಗುಲಾಮನಾಗಿದ್ದ ಜೈದನಿಗೆ ಮಹಮ್ಮದನು ಸ್ವಾತಂತ್ರ್ಯ ದಾನ ಮಾಡಿದಷ್ಟಕ್ಕೇ ತೃಪ್ತನಾಗದೆ ಜೈದನನ್ನು ಕೊರೈಷ್ ಮನೆತನದವರ ಮೇಲೆ ಅಧಿಕಾರಕ್ಕೆ ನೇಮಿಸಿ, ತನ್ಮೂಲಕ ತನ್ನ ಸಮದರ್ಶಿತ್ವವನ್ನು ವ್ಯಕ್ತಗೊಳಿಸಿದನು. ಒಂದು ಬುಡಕಟ್ಟಿನವರಿಗಿಂತ ಮತ್ತೊಂದು ಬುಡಕಟ್ಟಿನವರಾಗಲಿ, ಒಂದು ಜನಾಂಗದವರಿಗಿಂತ ಮತ್ತೊಂದು ಜನಾಂಗದವರಾಗಲಿ, ಯಾವ ರೀತಿಯಲ್ಲಿಯೂ ಹೆಚ್ಚಲ್ಲ

ವೆಂಬ ಉದಾತ್ತ ತತ್ತ್ವವನ್ನು ಮುಹಮ್ಮದನು ಎಲ್ಲೆಲ್ಲಿಯೂ ಹರಡಿದನು.

**೪. ನ್ಯೂನಾತಿರೇಕಗಳ ತಿದ್ದುಪಡಿ**—ಮುಹಮ್ಮದನು ಜನರಲ್ಲಿದ್ದ ಯಾವುದಾದರೂ ಒಂದೆರಡು ನ್ಯೂನತೆಗಳನ್ನು ಸರಿಪಡಿಸಿ, ಅಷ್ಟು ಮಟ್ಟಿನ ಸಮಾಜ ಪರಿಷ್ಕರಣದಿಂದಲೇ ತೃಪ್ತನಾಗಲಿಲ್ಲ ; ಅರಬ್ಬಿಯುವರ ಜೀವನದಲ್ಲಿದ್ದ ವಿಶಿಷ್ಟ ನ್ಯೂನಾತಿರೇಕಗಳನ್ನೂ ತಿದ್ದಿ ಅವರ ಜನಪದವನ್ನುದ್ಧರಿಸಿದನು. ಮನುಷ್ಯ ಸಾಮಾನ್ಯರಲ್ಲಿ ಅವ್ಯಕ್ತವಾಗಿ ಅಡಗಿರುವ ಸಮಸ್ತ ಗುಣಗಳೂ ಪರಿಸ್ಫುಟಗೊಳ್ಳಲು ಅವಕಾಶವಿರುವಂತೆ ಅವನು ಬಲವಾದ ತಳಹದಿಯ ಮೇಲೆ ಕಟ್ಟಡವನ್ನೆಬ್ಬಿಸಿದನು. ಮುಹಮ್ಮದನು ಅನಾಥ ಬಾಲಕನಾಗಿದ್ದುದು ಮೊದಲುಗೊಂಡು ಪ್ರಭು ಪದವಿಯನ್ನು ಹೊಂದುವವರೆಗೂ ನಾನಾ ಸನ್ನಿವೇಶಗಳಲ್ಲಿ ತದನುಗುಣವಾಗಿ ಪಡೆದಿದ್ದ ಕಷ್ಟಸುಖಗಳ ಅನುಭವವು ಇದಕ್ಕೆ ಬಹಳವಾಗಿ ಸಹಕಾರಿಯಾಯಿತು.

**೫. ಸ್ವಭಾವ ಪರಿವರ್ತನ ದಕ್ಷತೆ**—ಸಮಾಜ ಪರಿಷ್ಕರಣವಾಗಬೇಕೆಂಬ ಕುತೂಹಲವು ಅರಬ್ಬಿಯುವರಿಗಿದ್ದು, ಅಂತಹ ಸಮಯದಲ್ಲಿ ಮುಹಮ್ಮದನು ಅವತರಿಸಿದ್ದರೆ, ಆಗ ಅವನ ಉಪದೇಶವು ಅವರ ಮನಸ್ಸಿಗೆ ಸುಲಭವಾಗಿ ಹಿಡಿಯುತ್ತಿದ್ದಿತು ; ಅವನ ಕಾರ್ಯವು ಸುಲಲಿತವಾಗಿ ಸಾಗುತ್ತಿದ್ದಿತು. ಆದರೆ, ಪರಿಷ್ಕರಣವು ಅವರಲ್ಲಿ ಬಹು ಮಂದಿಗೆ ಬೇಡದೆ ಇದ್ದುದರಿಂದ, ಮುಹಮ್ಮದನ ಉಪದೇಶವು ಅವರಿಗೆ ಅಪ್ರಿಯವಾಗಿ ತೋರಿತು. ಇದರ ಪರಿಣಾಮವಾಗಿ ಮುಹಮ್ಮದನಿಗೆ ಎಷ್ಟು ಘೋರವಾದ ವಿಪತ್ತುಗಳೊದಗಿದುವೆಂಬುದನ್ನು ಹಿಂದೆಯೇ ಹೇಳಿದೆ. ಮುಹಮ್ಮದನು ಯಾವ ಕಷ್ಟಗಳಿಂದಲೂ ಕಳೆಗುಂದದೆ, ತನ್ನ ಉದ್ದೇಶವನ್ನೀಡೇರಿಸಿಕೊಂಡು ವಿಜಯ ಮಾಲೆಯನ್ನು ತಳೆದನು. ಭಗವತ್ಸಂಕಲ್ಪದ ಮುಂದೆ ಮಾನವರ ಎಡರುತೊಡರುಗಳು ಎಷ್ಟು ಕಾಲ ನಿಲ್ಲಬಲ್ಲುವು?

ಅಂತು, ಯಾವ ಭಾಗದಲ್ಲಿ ಪರಾಮರ್ಶಿಸಿ ನೋಡಿದರೂ ಮುಹಮ್ಮದನು ಮಹಾ ಪುರುಷನೆಂಬುದು ವ್ಯಕ್ತವಾಗುತ್ತದೆ. ಮೌ॥ ಮುಹಮ್ಮದ್ ಆಲಿಯುವರು ಅಪ್ಪಣೆ ಕೊಡಿಸಿರುವಂತೆ, ಪತಿತರನ್ನುದ್ಧರಿಸುವುದು

ಮಹಾ ಪುರುಷ ಲಕ್ಷಣವಾದಲ್ಲಿ, ಅಜ್ಞಾನಾಂಧಕಾರದಲ್ಲಿ ಮುಳುಗಿ ಹೋಗಿದ್ದ ಒಂದು ಜನಾಂಗವನ್ನೇ ಉದ್ಧರಿಸಿದ ಮಹನೀಯನು ಮಹಾ ಪುರುಷನಲ್ಲವೆ? ಕಟ್ಟು ಕಿತ್ತ ಪಂಜಿನಂತೆ ಐಕಮತ್ಯದ ಕುರುಹೇ ಇಲ್ಲದೆ ಅವ್ಯವಸ್ಥೆಯಿಂದ ತುಂಬಿದ ಜನಾಂಗದಲ್ಲಿ ಒಕ್ಕಟ್ಟನ್ನುಂಟುಮಾಡಿ, ಭ್ರಾತೃ ಭಾವದಿಂದ ಸಕಲರೂ ಉದ್ದೀಪಿತರಾಗುವಂತೆ ಮಾಡುವುದು ಮಹಾತ್ಮ ಲಕ್ಷಣವಾಗಿದ್ದಲ್ಲಿ ಮುಹಮ್ಮದನು ಅಂತಹ ಮಹಾತ್ಮರ ಗುಂಪಿಗೇ ಸೇರುವನು. ಯುದ್ಧ ರಂಗದಲ್ಲಿ ಅಸೀಮ ಪರಾಕ್ರಮದಿಂದ ಹೋರಾಡಿ ರಾಜ್ಯ ಸ್ಥಾಪನೆ ಮಾಡುವುದು ಮಹಾತ್ಮ ಲಕ್ಷಣವೆನ್ನುವು ದಾದರೆ, ಆಗಲೂ ಮುಹಮ್ಮದನು ಮಹಾ ಪುರುಷನೇ. ಅಂಧ ಶ್ರದ್ಧೆ ಗಳನ್ನು ಹೋಗಲಾಡಿಸಿ ಸಮಾಜ ಪರಿಷ್ಕರಣ ಮಾಡಿದವರು ಮಹಾ ಪುರುಷರೆನ್ನುವುದಾದರೆ, ಮುಹಮ್ಮದನಿಗೂ ಅಂಥವರಲ್ಲಿ ಸ್ಥಾನವುಂಟು. ಒಂದು ಜನಾಂಗವನ್ನು ನವ ಜೀವನದ ಚೈತನ್ಯದಿಂದ ಕಳಕಳಿಸಿ ಹುರಿ ದುಂಬುವಂತೆ ಮಾಡುವುದು ಮಹಾತ್ಮ ಲಕ್ಷಣವೆನ್ನುವ ಪಕ್ಷಕ್ಕೆ, ಕಾಡು ಜನರಂತಿದ್ದ ಅರಬ್ಬಿಯವರನ್ನು ನಾಗರಿಕರನ್ನಾಗಿ ಪರಿಣಾಮ ಗೊಳಿಸಿದುದಲ್ಲದೆ, ಇಂದಿಗೂ ತನ್ನ ಕಾರ್ಯ ಸಿದ್ಧಿಯು ವರ್ಜಸನ್ನು ನಾಲ್ವತ್ತು ಕೋಟಿ ಮಂದಿ ಮುಸಲ್ಮಾನರಿಗೆ ಸ್ಫೂರ್ತಿ ದಾಯಕವಾಗಿ ತಾಂಡವವಾಡುವಂತೆ ಮಾಡಲು ಮೂಲ ಕಾರಣನಾದ ಮುಹಮ್ಮದನು ಮಹಾ ಪುರುಷನಲ್ಲವೆ? ಸಾತ್ವಿಕ ಸ್ವಭಾವದಿಂದ ತುಂಬಿದ ಸರಳ ಜೀವನವು ಮಹಾ ಪುರುಷ ಲಕ್ಷಣವೆನ್ನುವುದಾದರೆ, ಅನಾಥ ಬಾಲಕನಾ ಗಿದ್ದುದು ಮೊದಲುಗೊಂಡು ಪ್ರಭು ಪದವಿಯನ್ನಲಂಕರಿಸುವ ವರೆಗೂ, ಆ ಬಳಿಕಲೂ ದೈವವೇ ಶರಣೆಂದು ನಂಬಿ ಪರೋಪಕಾರದಲ್ಲಿಯೇ ಕಾಲ ವನ್ನು ಕಳೆಯುತ್ತ, ಸಾಮಾನ್ಯ ಜನರಂತೆ ಕುಟೀರ ವಾಸಿಯಾಗಿದ್ದ ಆ ಸಾಧು ಶ್ರೇಷ್ಠನು ಮಹಾ ಪುರುಷನೆನ್ನಲು ಅಡ್ಡಿಯುಂಟೆ? ಹೆಚ್ಚೇಕೆ? ದೈವಾನುಗ್ರಹಕ್ಕೆ ಪಾತ್ರರಾಗಿ ಜಗದುದ್ಧಾರಕರಾದ ಸಾಧು ವರೇಣ್ಯರಲ್ಲಿ ಮುಹಮ್ಮದನೂ ಒಬ್ಬನು. ಲೋಕೋದ್ಧಾರಕ್ಕಾಗಿ ಅವತರಿಸಿರುವ ಮಹನೀಯರಲ್ಲಿ ಪರಮ ತೇಜಸ್ವಿಗಳೆನಿಸಿರುವವರ ಪಙ್ಕ್ತಿಗೆ ಮುಹಮ್ಮ ದನೂ ಸೇರಿದವನು. ಇಂತಹ ದೈವಾಂಶ ಸಂಭೂತರು ಜಾತಿ ಮತ ಭೇದವಿಲ್ಲದೆ ಸಮಸ್ತರಿಂದಲೂ ಆರಾಧನೆ ಪಡೆಯಲು ಅರ್ಹರು.

